ಪದವಿಪೂರ್ವ ದ್ವಿತೀಯ ವರ್ಷದ ಪಠ್ಯ

# ಗಣಿತಶಾಸ್ತ್ರ


ಮುಖ್ಯ ಸಂಪಾದಕರು

ಡಾ. ಎಸ್. ಬಾಲಚಂದ್ರರಾವ್






ಪ್ರಸಾರಾಂಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬

# ಗಣಿತಶಾಸ್ತ್ರ

ಮುಖ್ಯ ಸಂಪಾದಕರು
ಡಾ. ಎಸ್. ಬಾಲಚಂದ್ರರಾವ್




ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ

GANITASHASTRA Second Year P.U.C. Mathematics text book, edited by Dr. S. Balachandra Rao, Published by Prof. A.V. Navada, Director, Prasaranga, Kannada University, Hampi, Vidyaranya, Kamalapura - 583 221, Pages : 14 + 646, First impression 1997



**ಯೋಜನಾ ನಿರ್ವಹಣೆ**
ಸಂಕಲನ ವಿಭಾಗ
ಕನ್ನಡ ವಿಶ್ವವಿದ್ಯಾಲಯ

**ಪ್ರಕಾಶಕರು**
ಪ್ರೊ. ಎ.ವಿ. ನಾವಡ
ನಿರ್ದೇಶಕರು, ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ, ಕಮಲಾಪುರ - ೫೮೩ ೨೨೧

ಬೆಲೆ: 120/-

**ಡಿ.ಟಿ.ಪಿ. ಸಂಯೋಜನೆ**
ರೆಡಿ ಪ್ರಿಂಟ್ಸ್
ಮೈಸೂರು

**ಮುದ್ರಕರು**
ಸತ್ಯಶ್ರೀ ಪ್ರಿಂಟರ್ಸ್ ಪ್ರೈ. ಲಿ.
ಚಾಮರಾಜಪೇಟೆ, ಬೆಂಗಳೂರು - ೫೬೦ ೦೧೮

## ಗಣಿತಶಾಸ್ತ್ರ ಸಮಿತಿ

**ಮುಖ್ಯ ಸಂಪಾದಕರು**
**ಡಾ॥ ಎಸ್. ಬಾಲಚಂದ್ರರಾವ್,** ಎಂ.ಎಸ್ಸಿ., ಪಿಎಚ್.ಡಿ.
ಪ್ರಾಧ್ಯಾಪಕರು ಹಾಗೂ ಮುಖ್ಯಸ್ಥರು
ಗಣಿತಶಾಸ್ತ್ರ ವಿಭಾಗ
ನ್ಯಾಷನಲ್ ಕಾಲೇಜ್, ಬಸವನಗುಡಿ, ಬೆಂಗಳೂರು - ೫೬೦ ೦೦೪

**ಸಂಪಾದಕ ಮಂಡಳಿಯ ಸದಸ್ಯರು**
**ಡಾ॥ ಪಿ.ಎಸ್. ಬಾಗೇವಾಡಿ,** ಎಂ.ಎಸ್ಸಿ., ಪಿಎಚ್.ಡಿ.
ಅಧ್ಯಕ್ಷರು ಮತ್ತು ಪ್ರಾಧ್ಯಾಪಕರು, ಗಣಿತಶಾಸ್ತ್ರ ವಿಭಾಗ
ಕುವೆಂಪು ವಿಶ್ವವಿದ್ಯಾಲಯ, ಬಿ.ಆರ್. ಪ್ರಾಜೆಕ್ಟ್ - ೫೭೭ ೧೧೫

**ಡಾ॥ ಇ. ಸಂಪತ್ಕುಮಾರ್,** ಎಂ.ಎಸ್ಸಿ, ಪಿಎಚ್.ಡಿ.
ಪ್ರಾಧ್ಯಾಪಕರು, ಗಣಿತಶಾಸ್ತ್ರ ವಿಭಾಗ
ಮೈಸೂರು ವಿಶ್ವವಿದ್ಯಾನಿಲಯ, ಮಾನಸ ಗಂಗೋತ್ರಿ
ಮೈಸೂರು - ೫೭೦ ೦೦೬

**ಲೇಖಕರು**
**ಶ್ರೀಮತಿ ಟಿ.ಪಿ. ಶಾಂತಾಬಾಯಿ,** ಎಂ.ಎ. ಬಿ.ಎಡ್.
ನಿವೃತ್ತ ಡಿ.ಪಿ.ಐ., ಕರ್ನಾಟಕ ಸರಕಾರ, ಬೆಂಗಳೂರು

**ಶ್ರೀಮತಿ ಜಯಂತಿ ಪುರಂದರ್,** ಎಂ.ಎಸ್ಸಿ
ರೀಡರ್, ಗಣಿತಶಾಸ್ತ್ರ ವಿಭಾಗ
ಜ್ಯೋತಿನಿವಾಸ್ ಕಾಲೇಜ್, ಬೆಂಗಳೂರು

**ಶ್ರೀಮತಿ ಪದ್ಮಜಾ ವೇಣುಗೋಪಾಲ್,** ಎಂ.ಎಸ್ಸಿ
ಸಂಶೋಧನ ಸಹಾಯಕರು, ಗಣಿತಶಾಸ್ತ್ರ ವಿಭಾಗ
ನ್ಯಾಷನಲ್ ಕಾಲೇಜ್, ಬಸವನಗುಡಿ, ಬೆಂಗಳೂರು - ೪

**ಶ್ರೀಮತಿ ಟಿ.ಆರ್. ಚಂದ್ರಕಲಾ,** ಎಂ.ಎಸ್ಸಿ
ಉಪನ್ಯಾಸಕರು, ಗಣಿತಶಾಸ್ತ್ರ ವಿಭಾಗ
ಎಂ.ಎಲ್.ಎ. ಪದವಿಪೂರ್ವ ಕಾಲೇಜು
ಮಲ್ಲೇಶ್ವರಂ ೧೪ನೇ ಅಡ್ಡರಸ್ತೆ, ಬೆಂಗಳೂರು - ೩

# ನಿವೇದನೆ

ಇಂದಿನ ಯುಗ ವಿಜ್ಞಾನದ ಯುಗ. ವಿಜ್ಞಾನ ನಮಗೆಲ್ಲ ಉಪಕಾರಕವೇನೋ ಹೌದು. ಅದರಂತೆ ಒಂದು ಆಹ್ವಾನವೂ ಹೌದು. ನಮಗರಿವಾಗದಂತೆ ವಿಜ್ಞಾನ ನಮ್ಮ ದಿನನಿತ್ಯದ ಬದುಕಿನಲ್ಲಿ ಸೇರಿಕೊಂಡುಬಿಟ್ಟಿದೆ; ಆದರೂ ನಮಗಿನ್ನೂ ವೈಜ್ಞಾನಿಕ ದೃಷ್ಟಿಕೋನ ಬಂದಿಲ್ಲ. ಪಾಶ್ಚಾತ್ಯ ನಾಗರಿಕತೆಯ ಒಂದು ಮಹತ್ವದ ಕೊಡುಗೆಯಾಗಿರುವ ವಿಜ್ಞಾನ ನಮ್ಮ ದಿನನಿತ್ಯದ ಜೀವನವನ್ನು ರೂಪಿಸುತ್ತಿರುವಾಗ ನಮ್ಮಲ್ಲಿ ಆಗುವ ಮಾರ್ಪಾಡುಗಳನ್ನು ಇಂದು ದಾಖಲಿಸಬೇಕಾಗಿದೆ. ಅದರ ಜೊತೆಗೇ ವಿಜ್ಞಾನವನ್ನು ನಾವು ಯಾವ ವಿವೇಕದಿಂದ ಉಪಯೋಗಿಸಬೇಕೆಂಬುದರ ತಿಳಿವು ಕೂಡ ನಮ್ಮಲ್ಲಿ ಮೂಡಬೇಕಾಗಿದೆ.

ನಾವಿಂದು ವಿಜ್ಞಾನ, ಎಂಜಿನಿಯರಿಂಗ್ ಆಧುನಿಕ ತಂತ್ರವಿಜ್ಞಾನ ಇವನ್ನೆಲ್ಲ ಇಂಗ್ಲಿಷ್ ಭಾಷೆಯ ಮೂಲಕ ಕಲಿಯುತ್ತಿದ್ದೇವೆ. ಸಾಹಿತ್ಯ, ಕಲೆ, ತತ್ವಜ್ಞಾನ, ರಾಜಕೀಯ, ಸಮಾಜಶಾಸ್ತ್ರಗಳಿಗೆ ಇಂಗ್ಲಿಷ್‌ನ ಜೊತೆಗೆ ಕನ್ನಡವನ್ನು ಉಪಯೋಗಿಸಲು ಕಲಿಯುತ್ತಿದ್ದೇವೆ. ಆದರೆ, ಬೇರೆ ಭಾಷೆಯ ಮಾಧ್ಯಮದಿಂದ ಕೇವಲ ತಿಳಿವಳಿಕೆಯಷ್ಟೇ ದೊರೆಯುವುದಿಲ್ಲ; ತಿಳಿವಳಿಕೆಯ ವಿಧಾನಗಳೂ ಬಂದು ಬಿಡುತ್ತವೆ. ಕನ್ನಡ ತನ್ನ ಶಾಸ್ತ್ರ ವಿಧಾನಗಳನ್ನು ರೂಪಿಸಲು ಕಲಿಯಬೇಕಾಗಿದೆ; ಆಗಲೇ ತಿಳಿವಳಿಕೆ ನಮ್ಮದಾಗುವುದು. ಭೌತಶಾಸ್ತ್ರ, ರಸಾಯನಶಾಸ್ತ್ರದಂಥ ಶುದ್ಧ ಶಾಸ್ತ್ರಗಳಿಗೆ ಪರಂಪರೆ ಪ್ಲೇಟೋ, ಅರಿಸ್ಟಾಟಲರಿಂದ ಬಂದರೆ ಅದು ನಮ್ಮದಾಗುವುದೇ ಇಲ್ಲ. ಅದ್ಭುತ ದೇವಾಲಯಗಳನ್ನು ನಿರ್ಮಿಸಿದ ನಮ್ಮ ಪೂರ್ವಜರ ತಂತ್ರವಿಜ್ಞಾನ ಯಾವುದಿತ್ತು ಎಂದು ಯೋಚಿಸಲು ಕೂಡ ನಾವು ಪ್ರಯತ್ನ ಮಾಡಿಲ್ಲ. ಸುಯೇಜ ಕಾಲುವೆಯ ಮೂಲಕ ಹರಿದು ಬಂದ ತಿಳಿವಳಿಕೆಯ ಪ್ರವಾಹದಿಂದ ನಮ್ಮ ಹೊಲಗಳಲ್ಲಿಯ ತಿಳುವಳಿಕೆಯ ಕೃಷಿ ಸಾಗಬೇಕಾಗಿದೆ.

ಪಾಶ್ಚಾತ್ಯರಲ್ಲಿ ವೈಜ್ಞಾನಿಕ ಸಾಹಿತ್ಯ ವಿಪುಲವಾಗಿ ಬೆಳೆದುಬಂದಿದೆ. ಅಂಥ ಸಾಹಿತ್ಯ ಕನ್ನಡದಲ್ಲಿ ಬರಬೇಕು. ತಿಳಿವಳಿಕೆ ಎಷ್ಟೇ ಶ್ರೇಷ್ಠವಾಗಿರಲಿ, ಅಗತ್ಯವಾದದ್ದೇ ಆಗಿರಲಿ, ನಮ್ಮ ಭಾಷೆಯಲ್ಲಿ ಅದು ಮೂಡಿ ಬರದಿದ್ದರೆ, ಅದು ನಮ್ಮ ತಿಳಿವಳಿಕೆಯಾಗಲಾರದು. ಕರ್ನಾಟಕದಲ್ಲಿ ಮೌಲಿಕವಾದ ವಿಜ್ಞಾನ ಹುಟ್ಟಿ ಬರಬೇಕಾದರೆ ನಮ್ಮ ಭಾಷೆಯಲ್ಲಿ ವೈಜ್ಞಾನಿಕ ಸಾಹಿತ್ಯ ಹುಟ್ಟಿ ಬರಬೇಕು. ಕನ್ನಡದಲ್ಲಿ ವೈಜ್ಞಾನಿಕ ಚಿಂತನೆ ನಡೆಯಬೇಕು. ಕನ್ನಡಕ್ಕೆ ಅಂಥ ತೇಜಸ್ಸು, ಶಕ್ತಿ ಇದೆ. ವಚನಕಾರರ ಭಾಷೆ ಅಣುವಿಜ್ಞಾನದ ಅರ್ಥವನ್ನು ಪ್ರಕಟಿಸಲು ಸಮರ್ಥವಾಗಿದೆ.

ವಿಜ್ಞಾನದ ವಿಷಯಗಳನ್ನು ಹೇಳುವ ಸಲುವಾಗಿಯೇ ಇಂದು ಪ್ರಮಾಣಿತ ವಿಜ್ಞಾನ ಭಾಷೆಯೊಂದನ್ನು ಕನ್ನಡದ ಈ ಅಂತಸ್ಥ ಸಾಮರ್ಥ್ಯವನ್ನು ಬಳಸಿಕೊಂಡು ಸೃಷ್ಟಿಸಬೇಕಾಗಿದೆ.

ಅಂತಹ ಭಾಷೆಯನ್ನು ಬಳಕೆಗೆ ತರುವುದು ಇಂದು ತೀರಾ ಅಗತ್ಯವಾಗಿದೆ. ಇಂತಹುದೊಂದು ಅಗತ್ಯವನ್ನು ಪೂರೈಸುವಲ್ಲಿ ಕನ್ನಡ ವಿಶ್ವವಿದ್ಯಾಲಯವು ಯೋಜನೆಗಳನ್ನು ರೂಪಿಸುತ್ತಿದೆ. ವಿಷಯ ತಜ್ಞರೂ, ಭಾಷಾತಜ್ಞರೂ ಕೂಡಿ ವಿಜ್ಞಾನದ ಪಠ್ಯಪುಸ್ತಕಗಳನ್ನು ನಿರ್ಮಿಸುವುದು ಈ ಯೋಜನೆಯ ಮೊದಲ ಹಂತದ ಕೆಲಸವಾಗಿದೆ.

ಈ ಪಠ್ಯಪುಸ್ತಕಗಳು ಕನ್ನಡ ಮಾಧ್ಯಮದ ವಿದ್ಯಾರ್ಥಿಗಳಿಗೆ ಮಾತ್ರ ಸೀಮಿತವಾಗಿಲ್ಲ. ಇಂಗ್ಲಿಷ್ ಮಾಧ್ಯಮದ ವಿದ್ಯಾರ್ಥಿಗಳು ಕೂಡ ಇವುಗಳಿಂದ ನೆರವು ಪಡೆಯಬಹುದು. ಪ್ರತಿಯೊಂದು ಪಠ್ಯದಲ್ಲಿಯೂ ಪಾರಿಭಾಷಿಕ ಶಬ್ದಗಳಿಗೆ ಅರ್ಥಕೋಶ ಕೂಡ ಇದೆ.

ಈ ಪಠ್ಯಪುಸ್ತಕಗಳನ್ನು ಕನ್ನಡದಲ್ಲಿ ಬರೆದುಕೊಟ್ಟ ಸಂಪಾದಕರಿಗೆ, ಲೇಖಕರಿಗೆ ನಾನು ಕನ್ನಡ ವಿಶ್ವವಿದ್ಯಾಲಯದ ಪರವಾಗಿ ಕೃತಜ್ಞನಾಗಿದ್ದೇನೆ.

**ಚಂದ್ರಶೇಖರ ಕಂಬಾರ**
**ಕುಲಪತಿಗಳು**

# ಯೋಜನೆ ಕುರಿತು

ನಮ್ಮ ಶಿಕ್ಷಣ ಮಾಧ್ಯಮ ಕನ್ನಡವೇ ಆಗಬೇಕು ಎಂಬ ಶಿಕ್ಷಣತಜ್ಞರ ಅಭಿಪ್ರಾಯವನ್ನು ಯಾರೂ ವಿರೋಧಿಸಲಾರರು. ಆದರೆ ಇಂಗ್ಲಿಷ್ ಮಾಧ್ಯಮದ ಭರಾಟೆಯಲ್ಲಿ ಕನ್ನಡದ ಬೆಳವಣಿಗೆ ಎಲ್ಲಿಗೂ ಸಾಲದು ಎಂಬುದನ್ನು ಅಲ್ಲಗಳೆಯಲಾಗದು. ವಿಜ್ಞಾನದ ವಿಭಾಗದಲ್ಲಂತೂ ಈ ಸಮಸ್ಯೆ ತೀವ್ರತರವಾಗಿದೆ. ವಿಜ್ಞಾನದ ವಿಷಯಗಳನ್ನು ಹೇಳುವ ಸಲುವಾಗಿಯೇ ಪ್ರಮಾಣಿತ ವಿಜ್ಞಾನ ಭಾಷೆಯೊಂದನ್ನು ಕನ್ನಡದಲ್ಲಿ ಸೃಷ್ಟಿಸಿ ಬಳಕೆಗೆ ತರುವುದು ತೀರಾ ಅಗತ್ಯ. ಶಿಕ್ಷಣದಲ್ಲಿ ಪಠ್ಯಪುಸ್ತಕಗಳ ಪಾತ್ರವೇನು ಎಂಬುದು ಎಲ್ಲರಿಗೂ ತಿಳಿದಿದೆ. ವಿಜ್ಞಾನದ ಪಠ್ಯಪುಸ್ತಗಳನ್ನು ಕನ್ನಡದಲ್ಲಿ ಸಿದ್ಧಪಡಿಸುವ ಹೊಣೆಗಾರಿಕೆಯನ್ನು ನಿರ್ವಹಿಸುವುದು ಒಬ್ಬಿಬ್ಬರಿಂದ ಆಗುವ ಮಾತಲ್ಲ.

ಕನ್ನಡದ ಸರ್ವತೋಮುಖ ಬೆಳವಣಿಗೆಯನ್ನು ತನ್ನ ಮುಖ್ಯ ಗುರಿಯಾಗಿಸಿಕೊಂಡು ಶ್ರಮಿಸುತ್ತಿರುವ ಸಂಸ್ಥೆ ಕನ್ನಡ ವಿಶ್ವವಿದ್ಯಾಲಯ. ಶಿಕ್ಷಣ ಕ್ಷೇತ್ರದ ಈ ಅಗತ್ಯದ ಹೊಣೆಯನ್ನು ಸಮರ್ಥವಾಗಿ ನಿರ್ವಹಿಸುವ ಯೋಜನೆಗಳನ್ನು ಅದು ರೂಪಿಸುತ್ತಿದೆ. ಪ್ರಸ್ತುತ ಪದವಿಪೂರ್ವ ತರಗತಿಗಳಿಗಾಗಿ ಕನ್ನಡದಲ್ಲಿ ವಿಜ್ಞಾನ ಪಠ್ಯಪುಸ್ತಕಗಳನ್ನು ಸಿದ್ಧಪಡಿಸುವ ಕೆಲಸವನ್ನು ಆರಂಭಿಸಿದೆ. ಪದವಿಪೂರ್ವ ತರಗತಿಗಳನ್ನೇ ಮೊದಲಿಗೆ ಪರಿಗಣಿಸಲು ಮುಖ್ಯ ಕಾರಣಗಳಿವೆ. ನಗರ ಪ್ರದೇಶಗಳಲ್ಲಿ ಮೇಲು ನೋಟಕ್ಕಾದರೂ ವಿಜ್ಞಾನದ ವಿದ್ಯಾರ್ಥಿಗಳು ಇಂಗ್ಲಿಷ್ ಮಾಧ್ಯಮಕ್ಕೇ ಶರಣಾಗಿದ್ದಾರೆ ಎನಿಸುತ್ತದೆ. ಆದರೆ ಈ ವಿದ್ಯಾರ್ಥಿಗಳಲ್ಲೂ ಕನ್ನಡದಲ್ಲಿ ವಿವರಣೆ ದೊರೆಯಲಾರದೇ ಎಂದು ನಿರೀಕ್ಷಿಸುವವರಿದ್ದಾರೆ. ನಮ್ಮ ಗ್ರಾಮಾಂತರ ಪ್ರದೇಶಗಳಲ್ಲಂತೂ, ಪ್ರೌಢಶಾಲೆಯವರೆಗೂ ಕನ್ನಡ ಮಾಧ್ಯಮದಲ್ಲೇ ಶಿಕ್ಷಣ. ನಂತರದ ಹಂತದಲ್ಲಿ ಇಂಗ್ಲಿಷ್ ಮಾಧ್ಯಮಕ್ಕೆ ಬರುತ್ತಾರೆ. ಇಂಗ್ಲಿಷ್ ಮಾಧ್ಯಮವೇ ಉಪಯೋಗಕರ ಎಂಬ ಅಸಂಗತ ಅಭಿಪ್ರಾಯ ಈ ಆಯ್ಕೆಗೆ ಕಾರಣವಾಗುತ್ತದೆ. ಕನ್ನಡ ಮಾಧ್ಯಮ ತೆಗೆದುಕೊಂಡರೆ ಅಗತ್ಯದ ಪಠ್ಯಪುಸ್ತಕಗಳು ಇಲ್ಲ ಎಂಬ ಸಮಸ್ಯೆ ಬೇರೆ. ಅಂದರೆ, ವಿಜ್ಞಾನವನ್ನು ಕನ್ನಡದಲ್ಲಿ ವಿವರಿಸುವವರಿದ್ದರೆ, ಅದರ ಉಪಯೋಗವನ್ನು ಪಡೆಯಲು ಕನ್ನಡ ಮಾಧ್ಯಮದ ವಿದ್ಯಾರ್ಥಿಗಳೇ ಅಲ್ಲದೆ ಇಂಗ್ಲಿಷ್ ಮಾಧ್ಯಮದ ವಿದ್ಯಾರ್ಥಿಗಳೂ ಕಾತುರರಾಗಿದ್ದಾರೆ.

ಈ ಸಮಸ್ಯೆಯನ್ನು ಪರಿಹರಿಸುವ ಮೊದಲ ಹೆಜ್ಜೆಯಾಗಿ ಕನ್ನಡ ವಿಶ್ವವಿದ್ಯಾಲಯ ಪದವಿಪೂರ್ವ ತರಗತಿಗಳಿಗೆ ವಿಜ್ಞಾನ ಪಠ್ಯಪುಸ್ತಕಗಳನ್ನು ಸಿದ್ಧಪಡಿಸುವ ಯೋಜನೆಯನ್ನು ಕೈಗೆತ್ತಿಕೊಂಡಿದೆ. ಈ ಬೃಹತ್ ಯೋಜನೆಯಲ್ಲಿ ವಿಜ್ಞಾನ ವಿಷಯಗಳಲ್ಲಿ ನುರಿತ ಅಧ್ಯಾಪಕರು, ಶಿಕ್ಷಣ ತಜ್ಞರು, ಭಾಷಾ ತಜ್ಞರು-ಹೀಗೆ ಹಲವರ ಸಲಹೆ, ಸೂಚನೆ, ಸಹಕಾರಗಳನ್ನು ಪಡೆಯಲಾಗಿದೆ.

ಭೌತಶಾಸ್ತ್ರ, ರಸಾಯನಶಾಸ್ತ್ರ, ಜೀವಶಾಸ್ತ್ರ, ಗಣಿತಶಾಸ್ತ್ರಗಳ ಪಠ್ಯಪುಸ್ತಕಗಳನ್ನು ಮೊದಲಿಗೆ ಸಿದ್ಧಪಡಿಸಲಾಗಿದೆ. ಪ್ರತಿ ವಿಭಾಗಕ್ಕೆ ವಿಶೇಷ ತಜ್ಞರನ್ನು ಮುಖ್ಯ ಸಂಪಾದಕರೆಂದು ನೇಮಿಸಲಾಯಿತು. ಇವರು ಅರ್ಹರಾದ ಅಧ್ಯಾಪಕರನ್ನು ಆಯ್ದು ಸಂಪಾದಕ ಮಂಡಳಿಗಳನ್ನು ರಚಿಸಿದರು. ವಿವಿಧ ಅಧ್ಯಾಯಗಳನ್ನು ನುರಿತ ಅಧ್ಯಾಪಕರ ನೆರವಿನಿಂದ ಬರೆದು ಸಿದ್ಧಪಡಿಸಿದರು. ಹೀಗೆ ಸಿದ್ಧಗೊಂಡ ಹಸ್ತಪ್ರತಿಗಳ ಭಾಷಾ ಪರಿಶೀಲನೆಯನ್ನು ತಜ್ಞರಿಂದ ನಡೆಸಲಾಯಿತು. ಕೊನೆಯದಾದರೂ, ಬಹುಮುಖ್ಯ ಹಂತವೊಂದನ್ನು ಹಮ್ಮಿಕೊಳ್ಳಲಾಯಿತು. ಅದೆಂದರೆ, ಹೈಸ್ಕೂಲುಗಳಲ್ಲಿ ಪೂರ್ಣರೂಪದಲ್ಲಿ ಅಧಿಕೃತವಾಗಿ ಕನ್ನಡ ಮಾಧ್ಯಮದಲ್ಲಿ ವಿಜ್ಞಾನವನ್ನು ಬೋಧಿಸುತ್ತಿದ್ದು, ಅದೇ ಶಾಲೆಗೆ ಸೇರಿದ ಇಂಗ್ಲಿಷ್ ಮೀಡಿಯಂ ಪದವಿಪೂರ್ವ ತರಗತಿಗಳ ವಿದ್ಯಾರ್ಥಿಗಳಿಗೆ ಹೆಚ್ಚಿನ ನೆರವಿನ ಕಾರಣವಾಗಿ, ಕನ್ನಡವನ್ನು ವಿಜ್ಞಾನ ಬೋಧನೆಯ ಮಾಧ್ಯಮವಾಗಿ ಬಳಸುತ್ತಿರುವ ಅಧ್ಯಾಪಕರನ್ನು ಗುರುತಿಸಿ, ಸಿದ್ಧಗೊಂಡ ನಮ್ಮ ಕನ್ನಡ ವಿಜ್ಞಾನ ಪಠ್ಯಪುಸ್ತಕಗಳ ಹಸ್ತಪ್ರತಿಗಳನ್ನು ಪರಿಶೀಲಿಸಲು ಕೋರಲಾಯಿತು. ಅವರು ಸೂಚಿಸಿದ ಹಲವು ಸಲಹೆ ಸೂಚನೆಗಳನ್ನು ಅಳವಡಿಸಿ ಹಸ್ತಪ್ರತಿಯನ್ನು ತಿದ್ದಿ, ಅಂತಿಮವಾಗಿ ಮುದ್ರಣಕ್ಕೆಂದು ಸಿದ್ಧಪಡಿಸಲಾಯಿತು.

ಯೋಜನೆಯ ಆರಂಭದಿಂದಲೂ ಈ ವಿಜ್ಞಾನ ಪಠ್ಯಪುಸ್ತಕಗಳನ್ನು ಕನ್ನಡದಲ್ಲಿ ಸಮರ್ಥವಾಗಿ ಸಿದ್ಧಪಡಿಸಲು ಎಚ್ಚರವನ್ನೂ ಶ್ರಮವನ್ನೂ ವಹಿಸಲಾಗಿದೆ. ಇಂತಹ ಒಂದು ಅರ್ಥಪೂರ್ಣ ಯೋಜನೆಯ ರೂವಾರಿ ಹಾಗೂ ಮಾರ್ಗದರ್ಶಕರಾದ ನಮ್ಮ ಮಾನ್ಯ ಕುಲಪತಿ ಡಾ. ಚಂದ್ರಶೇಖರ ಕಂಬಾರರು ಯೋಜನೆಯು ಸುಲಲಿತವಾಗಿ ನಡೆಯಲು ಕಾರಣರಾಗಿದ್ದಾರೆ. ಅವರ ನಿರಂತರ ಒತ್ತಾಸೆಯಿಂದಲೇ ಈ ಯೋಜನೆ ಮುಂದುವರೆದು, ಇದೀಗ ಒಂದು ಮುಖ್ಯ ಹಂತವನ್ನು ಪೂರ್ಣಗೊಳಿಸಿದೆ.

ಇಂತಹ ಬೃಹತ್ ಯೋಜನೆಯೊಂದರಲ್ಲಿ ನೆರವಿಗೆ ನಿಂತಿರುವ ವಿದ್ವಾಂಸರ ಪಟ್ಟಿ ದೊಡ್ಡದು. ಪ್ರತಿ ವಿಭಾಗದ ಮುಖ್ಯ ಸಂಪಾದಕರು, ಸಂಪಾದಕ ಮಂಡಳಿಗಳ ಸದಸ್ಯರು, ಲೇಖಕರು, ಭಾಷಾಪರಿಶೀಲಕರು ಹಾಗೂ ವಿಷಯ ಪರಿಶೀಲಕರನ್ನು ಪ್ರತ್ಯೇಕವಾಗಿ ನೆನೆಯುತ್ತೇನೆ. ನಮ್ಮ ವಿಶ್ವವಿದ್ಯಾಲಯದ ಪ್ರಸಾರಾಂಗದ ನಿರ್ದೇಶಕರನ್ನು, ನನ್ನ ಎಲ್ಲ ಸಹೋದ್ಯೋಗಿಗಳನ್ನು, ಅವರಿಂದ ಪಡೆದ ವಿವಿಧ ಬಗೆಯ ನೆರವಿಗಾಗಿ ವಂದಿಸುತ್ತೇನೆ.

ಕೊನೆಯದಾಗಿ, ಕನ್ನಡ ಮಾಧ್ಯಮದಲ್ಲಿ ವಿಜ್ಞಾನ ವಿಷಯಗಳನ್ನು ಕಲಿಯುವುದು ಹಾಗೂ ಬೋಧಿಸುವುದು ಸಾಧ್ಯವೇ ಎಂಬ ಸಂದೇಹವನ್ನು ನಿವಾರಿಸಿ, ವಿದ್ಯಾರ್ಥಿಗಳಲ್ಲಿ ಹಾಗೂ ಅಧ್ಯಾಪಕರಲ್ಲಿ ಕನ್ನಡ ಮಾಧ್ಯಮದ ಬಗ್ಗೆ ವಿಶ್ವಾಸವನ್ನು ಮೂಡಿಸುವಲ್ಲಿ ಕನ್ನಡ ವಿಶ್ವವಿದ್ಯಾಲಯದ ಈ ಮಹತ್ವಾಕಾಂಕ್ಷೆಯ ಯೋಜನೆ ಸಫಲವಾದರೆ ನಮ್ಮ ಶ್ರಮ ಸಾರ್ಥಕ.

ಡಾ. ಎಚ್. ಎಸ್. ಶ್ರೀಮತಿ

# ಮುಖ್ಯ ಸಂಪಾದಕರ ಮಾತು

ಶೈಕ್ಷಣಿಕ ವರ್ಷ ೧೯೯೫-೯೬ರಿಂದ ಪದವಿಪೂರ್ವ ತರಗತಿಗಳಿಗೆ ಹೊಸ ಪಠ್ಯಕ್ರಮವು ಜಾರಿಗೆ ಬಂದಿದೆಯಷ್ಟೆ. ಈ ಸಂದರ್ಭದಲ್ಲಿ ಗಣಿತಶಾಸ್ತ್ರದ ಹೊಸ ಪಠ್ಯಕ್ರಮಕ್ಕೆ ಅನುಗುಣವಾಗಿ ಪದವಿಪೂರ್ವ ಎರಡನೇ ತರಗತಿಗಾಗಿ ತಯಾರಿಸಿದ ಈ ಪಠ್ಯಪುಸ್ತಕವನ್ನು ವಿದ್ಯಾರ್ಥಿಗಳು ಹಾಗೂ ಶಿಕ್ಷಕರು ಸ್ವಾಗತಿಸುತ್ತಾರೆ ಎಂದು ಆಶಿಸುತ್ತೇನೆ.

ಆಡುಭಾಷೆಯಾದ ಕನ್ನಡದ ಮೂಲಕ ಗಣಿತಶಾಸ್ತ್ರವನ್ನು ಇನ್ನೂ ಚೆನ್ನಾಗಿ ಅರ್ಥಮಾಡಿಕೊಳ್ಳಬಹುದು ಎಂಬ ದೃಢ ವಿಶ್ವಾಸದಿಂದ ಗಣಿತದ ತತ್ವಗಳನ್ನು, ಪ್ರಮೇಯಗಳ ಸಾಧನೆಗಳನ್ನು, ಉದಾಹರಣೆಗಳನ್ನು ಹಾಗೂ ಅಭ್ಯಾಸಗಳನ್ನು ಆದಷ್ಟು ಸರಳವಾಗಿ ಕನ್ನಡ ಭಾಷೆಯಲ್ಲಿ ವಿವರಿಸಲಾಗಿದೆ. ಅಂತೆಯೇ ಗಣಿತಶಾಸ್ತ್ರದ ಹಾಗೂ ಪಠ್ಯಪುಸ್ತಕದಲ್ಲಿ ಕಾಪಾಡಿಕೊಂಡು ಬರಬೇಕಾದ ಭಾಷಾಗಾಂಭೀರ್ಯಕ್ಕೆ ಮತ್ತು ನಿಖರತೆಗೆ ವಿಶೇಷ ಗಮನವನ್ನು ನೀಡಲಾಗಿದೆ.

**ಹೊಸ ಪಠ್ಯಕ್ರಮದ ಮುಖ್ಯವಾದ ವಿಶೇಷಗಳು:**

೧. ಹಿಂದಿನ ಪಠ್ಯಕ್ರಮದಲ್ಲಿದ್ದ ಕೆಲವು ವಿಷಯಗಳನ್ನು ಈಗ ಪದವಿಪೂರ್ವ ಮೊದಲನೇ ವರ್ಷದ ಪಠ್ಯಕ್ರಮದಲ್ಲಿ ಸೇರ್ಪಡಿಸಿರುವುದರಿಂದ ಅವುಗಳನ್ನು ಇಲ್ಲಿ ಕೈ ಬಿಡಲಾಗಿದೆ.

೨. ಹೊಸ ವಿಷಯಗಳಾದ (ಅ) ಗಣಿತ ತರ್ಕ, (ಆ) ನಿರ್ದೇಶಕ ರೇಖಾಗಣಿತಕ್ಕೆ ಸಂಬಂಧಿಸಿದಂತೆ ವೃತ್ತಗಳ ಸಹಮೂಲಾಕ್ಷ ವ್ಯವಸ್ಥೆ, ಮಿತಿ ಬಿಂದುಗಳು ಮತ್ತು ಸಹವರ್ತಿ ವ್ಯವಸ್ಥೆ, (ಇ) ಕಲನಶಾಸ್ತ್ರದಲ್ಲಿ ಅವಿಚ್ಛಿನ್ನತೆ ಮತ್ತು ಅವಕಲನಗಳ ವಿಸ್ತಾರವಾದ ವಿಶ್ಲೇಷಣೆ ಹಾಗೂ (ಈ) ಅವಕಲಿತ ಸಮೀಕರಣಗಳು - ಇವುಗಳನ್ನು ಸೇರಿಸಲಾಗಿದೆ.

**ಪ್ರಸ್ತುತ ಪಠ್ಯಪುಸ್ತಕದ ವಿಶೇಷವಾದ ಅಂಶಗಳು :**

೧. ಪ್ರತಿಯೊಂದು ಅಧ್ಯಾಯದಲ್ಲೂ ನಿರೂಪಿಸಲಾದ ಗಣಿತ ತತ್ವಗಳನ್ನು, ಪ್ರಮೇಯಗಳನ್ನು ಮತ್ತು ವ್ಯಾಖ್ಯೆಗಳನ್ನು ಹೆಚ್ಚು ಸಂಖ್ಯೆಯ ವೈವಿಧ್ಯಮಯವಾದ ಉದಾಹರಣೆಗಳ ಮೂಲಕ ವಿವರಿಸಲಾಗಿದೆ.

೨. ಪ್ರತಿಯೊಂದು ಅಧ್ಯಾಯದ - ಹಲವೊಮ್ಮೆ ಉಪ ಅಧ್ಯಾಯಗಳ - ಕೊನೆಯಲ್ಲಿ ಬಹಳಷ್ಟು ಲೆಕ್ಕಗಳ ಅಭ್ಯಾಸಗಳನ್ನು ಕೊಡಲಾಗಿದೆ. ಎಲ್ಲಾ ಅಭ್ಯಾಸಗಳ ಲೆಕ್ಕಗಳಿಗೂ ಉತ್ತರಗಳನ್ನು ಪುಸ್ತಕದ ಕೊನೆಯಲ್ಲಿ ಸೇರಿಸಲಾಗಿದೆ.

೩. ಪುಸ್ತಕದ ಆದಿಯಲ್ಲಿ ಪದವಿಪೂರ್ವ ಶಿಕ್ಷಣ ಮಂಡಲಿಯ ಅಧಿಕೃತ ಪಠ್ಯಕ್ರಮವನ್ನು ಹಾಗೂ ಪುಸ್ತಕದ ಕೊನೆಯಲ್ಲಿ ಅಧಿಕೃತ ಮಾದರಿ ಪ್ರಶ್ನೆ ಪತ್ರಿಕೆಯನ್ನು ಕೊಡಲಾಗಿದೆ.

೪. ಈ ಪಠ್ಯಪುಸ್ತಕದಲ್ಲಿ ಬಳಸಲಾದ ಪಾರಿಭಾಷಿಕ ಶಬ್ದಗಳನ್ನು **ಕನ್ನಡ–ಇಂಗ್ಲಿಷ್** ಹಾಗೂ **ಇಂಗ್ಲಿಷ್–ಕನ್ನಡ** ಶಬ್ದಗಳ ಪಟ್ಟಿಗಳ ರೂಪದಲ್ಲಿ ಕೊಡಲಾಗಿದೆ. ಕೊನೆಯ ಪುಟದಲ್ಲಿ ವಿದ್ಯಾರ್ಥಿಗಳ ಹಾಗೂ ಅಧ್ಯಾಪಕರ ಇನ್ನೂ ಆಳವಾದ ಅಧ್ಯಯನಕ್ಕಾಗಿ ಗ್ರಂಥ ಋಣವನ್ನು ಸೇರಿಸಲಾಗಿದೆ.

೫. ವಿದ್ಯಾರ್ಥಿಗಳಿಗೆ ಆಸಕ್ತಿಯನ್ನು ಕೆರಳಿಸುವಂತಹ ಭಾರತೀಯ ಹಾಗೂ ಪಾಶ್ಚಿಮಾತ್ಯ ಗಣಿತಜ್ಞರ ಹೇಳಿಕೆಗಳನ್ನು ಸಂದರ್ಭೋಚಿತವಾಗಿ ಈ ಪುಸ್ತಕದಲ್ಲಿ ಸೇರ್ಪಡಿಸಲಾಗಿದೆ. ವಿಶೇಷವಾಗಿ ಭಾರತೀಯ ಗಣಿತಜ್ಞರ ಕೊಡುಗೆಗಳ ಬಗ್ಗೆ ಹೆಚ್ಚಿನ ವಿವರಗಳಿಗಾಗಿ ವಿದ್ಯಾರ್ಥಿಗಳು ಮತ್ತು ಅಧ್ಯಾಪಕರು ಕನ್ನಡ ವಿಶ್ವವಿದ್ಯಾಲಯದಿಂದ ಪ್ರಕಟಿತವಾದ **"ಭಾರತೀಯ ಗಣಿತ ಶಾಸ್ತ್ರ"** ಎಂಬ ಪುಸ್ತಕವನ್ನು ಅಭ್ಯಸಿಸಬಹುದು.

೬. ವಿದ್ಯಾರ್ಥಿಗಳ ಅಭ್ಯಾಸಕ್ಕೆ ಬಹಳ ಸಹಾಯವಾಗುವಂತೆ ಒಂದು ಅಂಕದ - ಸಣ್ಣ ಉತ್ತರಗಳನ್ನು ನೀಡಬೇಕಾಗಿರುವ ಬಹಳಷ್ಟು ಸಮಸ್ಯೆಗಳ ಪ್ರಶ್ನಾವಳಿ ಹಾಗೂ ಅವುಗಳ ಉತ್ತರಗಳನ್ನು ಕೊಡಲಾಗಿದೆ.

**ಕೃತಜ್ಞತೆ :** ಈ ಪುಸ್ತಕದ ಬೇರೆ ಬೇರೆ ಭಾಗಗಳ ಹಸ್ತಪ್ರತಿಯನ್ನು ಬಹಳ ಶ್ರದ್ಧೆ ಮತ್ತು ಆಸಕ್ತಿಗಳಿಂದ ಬರೆದುಕೊಟ್ಟ ನನ್ನ ಸಹಲೇಖಕ ಮಿತ್ರರನ್ನು ಹಾಗೂ ಸೂಕ್ತ ತಿದ್ದುಪಡಿಗಳನ್ನು ಮತ್ತು ಸಲಹೆಗಳನ್ನು ನೀಡಿ ಸಹಕರಿಸಿದ ಸಂಪಾದಕ ಮಂಡಲಿಯ ಪ್ರಾಧ್ಯಾಪಕರನ್ನು ಕೃತಜ್ಞತಾಪೂರ್ವಕವಾಗಿ ಸ್ಮರಿಸಿಕೊಳ್ಳುತ್ತೇನೆ.

ಈ ಯೋಜನೆಯಲ್ಲಿ ಪಾಲ್ಗೊಳ್ಳಲು ಅವಕಾಶ ಕಲ್ಪಿಸಿಕೊಟ್ಟ, ಕನ್ನಡ ವಿಶ್ವವಿದ್ಯಾಲಯದ ಕುಲಪತಿಗಳಾದ ಡಾ. ಚಂದ್ರಶೇಖರ ಕಂಬಾರರಿಗೂ, ಸಂಕಲನ ವಿಭಾಗದ ಮುಖ್ಯಸ್ಥರಾದ ಡಾ. ಎಚ್.ಎಸ್. ಶ್ರೀಮತಿಯವರಿಗೂ ಹಾಗೂ ಪ್ರಸಾರಾಂಗದ ಹಿಂದಿನ ನಿರ್ದೇಶಕರಾಗಿದ್ದ ಡಾ. ಕರೀಗೌಡ ಬೀಚನಹಳ್ಳಿಯವರಿಗೆ ಮತ್ತು ಈಗಿನ ನಿರ್ದೇಶಕರಾಗಿರುವ ಡಾ. ಎ.ವಿ. ನಾವಡ ಅವರಿಗೂ ಲೇಖಕರ ಹಾಗೂ ಸಂಪಾದಕ ಮಂಡಲಿಯ ಪರವಾಗಿ ಹೃತ್ಪೂರ್ವಕವಾದ ವಂದನೆಗಳು.

**ಡಾ. ಎಸ್. ಬಾಲಚಂದ್ರ ರಾವ್**
ಮುಖ್ಯ ಸಂಪಾದಕರು

# ಪರಿವಿಡಿ

"ಭಾಸ್ಕರನ ಚಕ್ರವಾಳ ವಿಧಾನವು ಎಲ್ಲಾ ಶ್ಲಾಘನೆಗೂ ಮೀರಿದೆ. ಸಂಖ್ಯಾ ಸಿದ್ಧಾಂತದಲ್ಲಿ ಲಾಗ್ರಾಂಜ್‌ನಿಗಿಂತ ಮೊದಲು ಗಳಿಸಿದ ಸಾಧನೆಗಳ ಪೈಕಿ ಅತ್ಯಂತ ಶ್ರೇಷ್ಠವಾದುದು."

- ಜರ್ಮನಿಯ ಖ್ಯಾತ ಗಣಿತಜ್ಞ ಹ್ಯಾಂಕೆಲ್

"ಪ್ರಚಂಡನಾದ ಸೂರ್ಯನು ತನ್ನ ಪ್ರಜ್ವಲಿಸುವ ಬೆಳಕಿನಿಂದ ನಕ್ಷತ್ರಗಳನ್ನು ಮರೆಮಾಚುವಂತೆ ಒಬ್ಬ ಮಹಾಜ್ಞಾನಿಯು ಬೀಜಗಣಿತದ ಸಮಸ್ಯೆಗಳನ್ನು ಮಂಡಿಸುವುದರಿಂದ - ಅದಕ್ಕಿಂತ ಹೆಚ್ಚಾಗಿ ಅವುಗಳ ಪರಿಹಾರಗಳನ್ನು ಕೊಡುವುದರಿಂದ - ಸಭೆಗಳಲ್ಲಿ ಇತರರ ಖ್ಯಾತಿಯನ್ನು ಕಾಂತಿಹೀನಗೊಳಿಸುತ್ತಾನೆ."

- ಬ್ರಹ್ಮಗುಪ್ತ

# ಅಧ್ಯಾಯ - 1

# ಗಣಸಿದ್ಧಾಂತ

## 1.1 ಗಣಗಳು, ಸಂಬಂಧಗಳು ಮತ್ತು ಉತ್ಪನ್ನಗಳು - ಪುನರ್ನಿರೂಪಣೆ

ಸಾಮಾನ್ಯ ಅರ್ಥದಲ್ಲಿ ವಸ್ತುಗಳ ಸಮುದಾಯವನ್ನು ಒಂದು 'ಗಣ'ವೆಂದು ಕರೆಯುತ್ತೇವೆ. ಈ ಪದದ ಬದಲಾಗಿ ಸಮೂಹ, ಶೇಖರಣೆ ಎಂಬ ಪದಗಳನ್ನೂ ಬಳಸುವುದುಂಟು. ಒಂದು ಗಣದಲ್ಲಿರುವ ಗಣಾಂಶಗಳೆಲ್ಲವೂ ಆ ಗಣಕ್ಕೆ ಸೇರಿರಲು ಒಂದು ಸಾಮಾನ್ಯ ಗುಣವನ್ನು ಹೊಂದಿರುತ್ತವೆ. $N$ ಸ್ವಾಭಾವಿಕ ಸಂಖ್ಯೆಗಳ ಸಮೂಹವನ್ನು ಪ್ರತಿನಿಧಿಸಿದರೆ ಅದನ್ನು

$N = \{1, 2, 3, \ldots\ldots\}$ ಎಂದು ಬರೆಯುತ್ತೇವೆ.

ಈ ಗಣದ ಗಣಾಂಶಗಳ ಸಂಖ್ಯೆಯು ಅನಂತವಾಗಿರುವುದರಿಂದ ಈ ಗಣವನ್ನು **"ಅನಂತಗಣ"**ವೆಂದು ಕರೆಯುತ್ತೇವೆ.

**ಉದಾಹರಣೆ :**

ಹತ್ತಕ್ಕಿಂತ ಕಡಿಮೆ ಇರುವ ಧನ ಪೂರ್ಣಾಂಕಗಳ ಗಣವನ್ನು $A$ ಎಂದು ಸೂಚಿಸೋಣ. ಅದನ್ನು ನಾವು

$A = \{ x | x<10 \}$ ಎಂದು ಬರೆಯುತ್ತೇವೆ.

ಈ ಗಣದ ಗಣಾಂಶಗಳನ್ನು ಎಣಿಸಲು ಸಾಧ್ಯವಿರುವುದರಿಂದ ಇದನ್ನು ನಾವು ಪರಿಮಿತ (ಪರ್ಯಾಪ್ತ) ಗಣವೆಂದು ಕರೆಯುತ್ತೇವೆ.

$A$ ಎಂಬ ಗಣದಲ್ಲಿ $x$ ಎಂಬುದು ಒಂದು ಗಣಾಂಶವಾಗಿದ್ದರೆ,

$x \in A$ ಎಂಬುದಾಗಿಯೂ, $x$ ಎಂಬುದು $A$ ಗಣದ ಗಣಾಂಶವಾಗಿಲ್ಲದಿದ್ದರೆ $x \notin A$ ಎಂಬುದಾಗಿಯೂ ಸೂಚಿಸುತ್ತೇವೆ.

**ಶೂನ್ಯಗಣ:** ಒಂದು ಗಣದಲ್ಲಿ ಗಣಾಂಶಗಳೇ ಇಲ್ಲದಿದ್ದರೆ, ಅಂತಹ ಗಣವನ್ನು **'ಶೂನ್ಯಗಣ'** ಎಂದು ಕರೆಯುತ್ತೇವೆ. ಶೂನ್ಯಗಣವನ್ನು $\emptyset$ ಎಂದು ಸೂಚಿಸುತ್ತೇವೆ.

**ಉದಾಹರಣೆ:**

(i) 23ಕ್ಕಿಂತ ಹೆಚ್ಚಾಗಿಯೂ ಮತ್ತು 29ಕ್ಕಿಂತ ಕಡಿಮೆಯಾಗಿಯೂ ಇರುವ ಅಭಾಜ್ಯ ಸಂಖ್ಯೆಗಳ ಗಣ

(ii) ಭಾರತದೇಶದ ಈವರೆಗಿನ ಮಹಿಳಾ ರಾಷ್ಟ್ರಾಧ್ಯಕ್ಷರ ಗಣ

**ಉಪಗಣ :** $A$ ಮತ್ತು $B$ ಎಂಬ ಎರಡು ಗಣಗಳಲ್ಲಿ, $A$ ಗಣದ ಎಲ್ಲಾ ಗಣಾಂಶಗಳೂ $B$ ಗಣದಲ್ಲಿದ್ದರೆ, $A$ ಗಣವನ್ನು $B$ ಗಣದ ಉಪಗಣವೆನ್ನುತ್ತೇವೆ. ಇದನ್ನು $A \subset B$ ಅಥವಾ $B \supset A$ ಎಂದು ಸೂಚಿಸಿ, $A$ಯು $B$ಯಲ್ಲಿ ಅಡಕವಾಗಿದೆ' ಅಥವಾ '$B$ಯು $A$ಯನ್ನು ಒಳಗೊಂಡಿದೆ'ಎಂದು ಹೇಳುತ್ತೇವೆ.

ಪ್ರತಿಗಣವೂ ತನ್ನದೇ ಉಪಗಣವಾಗಿರುತ್ತದೆ. ಅಂದರೆ, $A$ ಎಂಬುದು ಯಾವುದೇ ಗಣವಾಗಿದ್ದರೆ $A \subseteq A$. ಹಾಗೆಯೇ, ಶೂನ್ಯಗಣವು ಪ್ರತಿಯೊಂದು ಗಣದ ಉಪಗಣವಾಗಿರುತ್ತದೆ.

ಅಂದರೆ, $\emptyset \subset A$.

**ಉದಾಹರಣೆ :** $N = \{1, 2, 3, ....\}$ ಎಂಬುದು ಸ್ವಾಭಾವಿಕ ಸಂಖ್ಯೆಗಳಾಗಿದ್ದು,

$O = \{1, 3, 5, ....\}$ ಎಂಬುದು ಬೆಸ ಸಂಖ್ಯೆಗಳ ಗಣವಾಗಿದ್ದರೆ, $O \subset N$ ಎಂಬುದು ಸುಸ್ಪಷ್ಟ.

**ಸಮಗಣಗಳು :** $A$ ಮತ್ತು $B$ ಎಂಬ ಎರಡು ಗಣಗಳಲ್ಲಿ $A$ ಯ ಎಲ್ಲಾ ಗಣಾಂಶಗಳೂ $B$ ಯಲ್ಲಿದ್ದು, $B$ ಯ ಎಲ್ಲಾ ಗಣಾಂಶಗಳೂ $A$ ಯಲ್ಲಿದ್ದರೆ, $A$ ಮತ್ತು $B$ ಗಣಗಳನ್ನು ಸಮಗಣಗಳೆಂದು ಕರೆಯುತ್ತೇವೆ. ಇದನ್ನು $A = B$ ಎಂದು ಸೂಚಿಸುತ್ತೇವೆ. ಅಂದರೆ, $A \subset B$ ಮತ್ತು $B \subset A$ ಆಗಿದ್ದರೆ, $A = B$ ಆಗುತ್ತದೆ.

ಈ ಹಿಂದೆಯೇ ಹೇಳಿದಂತೆ, ಯಾವುದೇ ಗಣವು ಅದರದೇ ಉಪಗಣವಾಗಿರುತ್ತದೆ.

**ವಿಶ್ವಗಣ :** ಒಂದು ಪ್ರಕರಣದಲ್ಲಿ ಬಳಸುವ ಎಲ್ಲಾ ಗಣಗಳನ್ನು ಒಳಗೊಂಡಿರುವ ಗಣವನ್ನು ವಿಶ್ವಗಣ ಎಂದು ಕರೆಯುತ್ತೇವೆ. ಅದನ್ನು $U$ ಎಂಬುದಾಗಿ ಸೂಚಿಸುತ್ತೇವೆ

**ಗಣ ಪರಿಕರ್ಮಗಳು:**

(i) **ಸಂಯೋಗ:** ಎರಡು ಅಥವಾ ಹೆಚ್ಚು ಗಣಗಳಲ್ಲಿರುವ ಗಣಾಂಶಗಳನ್ನು ಒಟ್ಟುಗೂಡಿಸಿ ಪಡೆದ ಗಣವನ್ನು ದತ್ತಗಣಗಳ ಸಂಯೋಗ ಎಂದು ಕರೆಯುತ್ತೇವೆ. $A$ ಮತ್ತು $B$ ಯಾವುದೇ ಎರಡು ಗಣಗಳಾದರೆ ಅವುಗಳ ಸಂಯೋಗವನ್ನು ಸಾಂಕೇತಿಕವಾಗಿ

$$A \cup B = \{ x | x \in A \text{ or } x \in B \text{ or } x \in A \text{ and } B \}$$

ಎಂದು ಬರೆಯುತ್ತೇವೆ.

(ii) **ಛೇದನ:** ಎರಡೂ ಗಣಗಳಲ್ಲಿರುವ ಸಾಮಾನ್ಯ ಗಣಾಂಶಗಳನ್ನೊಳಗೊಂಡ ಗಣವನ್ನು ಅವುಗಳ ಛೇದನವೆಂದು ಕರೆಯುತ್ತೇವೆ.

$A$ ಮತ್ತು $B$ ಗಣಗಳ ಛೇದನವನ್ನು ಸಾಂಕೇತಿಕವಾಗಿ

$$A \cap B = \{ x | x \in A \text{ and } x \in B \}$$

ಎಂದು ಬರೆಯುತ್ತೇವೆ.

**ಅಂತರ:** $A$ ಮತ್ತು $B$ ಯಾವುದೇ ಎರಡು ಗಣಗಳಾಗಿರಲಿ. $A$ ಗಣದಲ್ಲಿದ್ದು, $B$ ಗಣದಲ್ಲಿಲ್ಲದಿರುವ ಅಂಶಗಳನ್ನುಳ್ಳ ಗಣವನ್ನು ದತ್ತಗಣಗಳ ಅಂತರವೆಂದು ಕರೆಯುತ್ತೇವೆ. ಅಂದರೆ

$$A - B = \{ x \in A | x \notin B \}$$

ಎಂದಾಗುವುದು.

**ಪೂರಕ:** $U$ ಒಂದು ವಿಶ್ವಗಣವಾಗಿದ್ದು, $A$ ಯಾವುದೇ ಗಣವಾದಾಗ $U-A$ ಅನ್ನು $A$ಯ ಪೂರಕವೆಂದು ಕರೆಯುತ್ತೇವೆ. ಅದನ್ನು $A^c$ ಎಂದು ಸೂಚಿಸುತ್ತೆವೆ.

ಅಂದರೆ $A^c = U - A = \{ x \in U \mid x \notin A \}$

ಎಂದಾಗುವುದು.

**ಕ್ರಮಯುಗ್ಮ ಮತ್ತು ಕಾರ್ಟೀಶಿಯಸ್ ಗುಣಲಬ್ಧ:** $(a,b)$ ಎಂಬ ಜೋಡಣೆಯಲ್ಲಿ $a$ ಮೊದಲನೇ ಅಂಶ, $b$ ಎರಡನೆಯ ಅಂಶ ಎಂದು ಪರಿಗಣಿಸಲಾಗುವುದು. $(a,b)$ ಮತ್ತು $(c,d)$ ಎಂಬ ಎರಡು ಕ್ರಮಯುಗ್ಮಗಳು ಸಮಾನವಾಗಿರಲು, $a = c$ ಮತ್ತು $b = d$ ಆಗಿರಬೇಕು. $A$ ಮತ್ತು $B$ ಎಂಬುವು ಶೂನ್ಯವಲ್ಲದ ಯಾವುದೇ ಎರಡು ಗಣಗಳ ಕಾರ್ಟೀಶಿಯನ್ ಗುಣಲಬ್ಧವನ್ನು $A \times B$ ಎಂದು ಸೂಚಿಸುತ್ತೇವೆ. ಅಂದರೆ

$$A \times B = \{ (a, b) \mid a \in A, \; b \in B \}$$

**ಉದಾಹರಣೆ:** $A = \{1, 2\}$ ಮತ್ತು $B = \{ 4, 5, 6 \}$ ಆದಾಗ,

$$A \times B = \{ (1,4), (1,5), (1,6), (2,4), (2,5), (2,6) \}$$

## 1.2 ಸಂಬಂಧಗಳು

$A$ ಒಂದು ಗಣವಾದರೆ, $A \times A$ ನ ಒಂದು ಉಪಗಣ $R$ ಅನ್ನು $A$ ಮೇಲಣ ಒಂದು '**ಸಂಬಂಧ**'ವೆಂದು ಕರೆಯುತ್ತೇವೆ.

$(a,b)$ ಕ್ರಮಯುಗ್ಮವು $R$ ನ ಅಂಶವಾದರೆ, $a R b$ ಎಂದು ಬರೆಯುತ್ತೇವೆ ಮತ್ತು ಅದನ್ನು $a$ ಎಂಬುದು $b$ ಯೊಡನೆ $R$ ಸಂಬಂಧ ಪಡೆದಿದೆ ಎಂದು ಹೇಳುತ್ತೇವೆ.

**ಸಮಾನತೆ ಸಂಬಂಧ:** $A$ ಒಂದು ಗಣವಾಗಿದ್ದು $R$ ಅದರ ಮೇಲಿನ ಸಮಾನತೆ ಸಂಬಂಧ ಎನಿಸಲು ಈ ಕೆಳಗಿನ ಗುಣಗಳನ್ನು ಹೊಂದಿರಬೇಕು :

(1) *ಪ್ರತಿಫಲನ* : ಪ್ರತಿಫಲನ ಸಂಬಂಧವೆಂದರೆ, $A$ ನ ಪ್ರತಿಯೊಂದು ಅಂಶ $a$ ಗೂ, $a\ R\ a$ ಆಗಿರಬೇಕು.

(2) *ಸಮಾಂಗತೆ* :ಸಮಾಂಗತೆ ಸಂಬಂಧವೆಂದರೆ, $A$ ನ ಪ್ರತಿ $a$, $b$ ಅಂಶಗಳಿಗೆ $aRb$ ಆಗಿದ್ದರೆ, $b\ R\ a$ ಯೂ ಆಗಿರಬೇಕು.

(3) *ವಾಹಕ* : ವಾಹಕ ಸಂಬಂಧವೆಂದರೆ, $A$ ನ ಪ್ರತಿ $a$, $b$ ಮತ್ತು $c$ ಅಂಶಗಳಿಗೆ $a\ R\ b$ ಮತ್ತು $b\ R\ c$ ಆಗಿದ್ದರೆ $a\ R\ c$ ಆಗಿರಬೇಕು.

## 1.3 ಉತ್ಪನ್ನಗಳು

$A$ ಎಂಬ ಗಣದ ಪ್ರತಿಯೊಂದು ಗಣಾಂಶ $x$ ಗೂ $B$ ಗಣದಲ್ಲಿ ಸಂಬಂಧಿತವಾದ ಏಕೈಕ ಗಣಾಂಶ $y$ ಎಂಬುದಿದ್ದರೆ, ಅಂತಹ ಸಂಬಂಧವನ್ನು ಕಲ್ಪಿಸುವ ನಿರ್ದಿಷ್ಟವಾದ ನಿಯಮವನ್ನು ಒಂದು ಉತ್ಪನ್ನ ಎಂದು ಕರೆಯುತ್ತೇವೆ. ಅಂತಹ ಒಂದು ನಿಯಮವನ್ನು(ಉತ್ಪನ್ನವನ್ನು) $f$ ಎಂದು ಸೂಚಿಸಿದರೆ, $y$ ಗಣಾಂಶವನ್ನು $x$ ಗಣಾಂಶದ 'ಛಾಯೆ' ಎಂದು ಕರೆಯುತ್ತೇವೆ. ಇದನ್ನು

$$y = f(x)$$

ಎಂದು ಸೂಚಿಸುತ್ತೇವೆ (ಚಿತ್ರ 1.1)




ಚಿತ್ರ 1.1

**ಸೂಚನೆ:** ಒಂದು ಉತ್ಪನ್ನವನ್ನು $x$ ಮತ್ತು $y$ ಗಣಾಂಶಗಳನ್ನು ಸಂಬಂಧಿಸುವಂತೆ ಒಂದು ಸಮೀಕರಣದ ಮೂಲಕ ವ್ಯಕ್ತಪಡಿಸಬಹುದು. ಉದಾಹರಣೆಗೆ,

$$y = 3x + 5.$$

ಉತ್ಪನ್ನದ ವ್ಯಾಖ್ಯೆಯನ್ನು ಸಂಬಂಧಗಳ ಮೂಲಕ ಈ ಕೆಳಕಂಡತೆಯೂ ಪರಿಗಣಿಸಬಹುದು.

**ಉತ್ಪನ್ನಗಳು (ಸಂಬಂಧಗಳ ಮೂಲಕ):** $A$ ಮತ್ತು $B$ ಯಾವುದೇ ಎರಡು ಗಣಗಳಾದಾಗ $A$ ಗಣದಿಂದ $B$ ಗಣಕ್ಕೆ ಉತ್ಪನ್ನ $f$ ಎಂಬುದು $A \times B$ ಎಂಬ ಗಣದ ಉಪಗಣ ಮತ್ತು ಪ್ರತಿ $a \in A$ ಗೂ ಏಕೈಕ $b \in B$ ಇದ್ದು $(a,b) \in f$ ಆಗಿರಬೇಕು.

ಸಾಂಕೇತಿಕವಾಗಿ, $f : A \rightarrow B$ ಎಂದು ಬರೆಯುತ್ತೇವೆ.

ಇಲ್ಲಿ $A$ ಅನ್ನು $f$ ನ ಕ್ಷೇತ್ರವೆಂದು, $B$ ಅನ್ನು ಅದರ ಸಹಕ್ಷೇತ್ರ ಎಂದೂ ಕರೆಯುತ್ತೇವೆ.

**ಒಳಗಣ ಮತ್ತು ಮೇಳಣ ಉತ್ಪನ್ನಗಳು:**

$A$ ಗಣದಿಂದ $B$ ಗಣಕ್ಕೆ ಚಿತ್ರಿಸುವ ಉತ್ಪನ್ನದ ವಾಖ್ಯೆಯನ್ನು ಗಮನಿಸಿ. $A$ ಗಣದ ಯಾವುದೇ ಅಂಶ $a$ ಗೆ ಛಾಯೆಯಾಗಿ $B$ ನಲ್ಲಿ $b$ ಅಂಶವಿದ್ದರೆ, $\{(a,b)\}$ ಗಣವೇ ಉತ್ಪನ್ನ $f$ ಆದರೆ, $B$ ಗಣದ ಪ್ರತಿ ಅಂಶವೂ $A$ ನ ಯಾವುದೇ ಅಂಶದ ಛಾಯೆಯಾಗಿ ಇರಬಹುದು, ಇಲ್ಲದಿರಬಹುದು. $B$ ಗಣದ ಪ್ರತಿ ಅಂಶವೂ $A$ ಯ ಯಾವುದಾದರೊಂದು ಅಂಶದ ಛಾಯೆಯಾಗಿದ್ದರೆ, ಚಿತ್ರಣವು $A$ ಯನ್ನು $B$ ಯ "ಮೇಲಕ್ಕೆ" ಚಿತ್ರಿಸುತ್ತದೆ ಎಂದೂ ಹೀಗಿಲ್ಲದಿದ್ದರೆ $A$ ಅನ್ನು $B$ ಯ "ಒಳಕ್ಕೆ" ಚಿತ್ರಿಸುತ್ತದೆ ಎಂದೂ ಹೇಳುತ್ತೇವೆ. ಇದರಲ್ಲಿ $B$ ಗಣದ ಅಂಶವು $A$ ಗಣದ ಎರಡು, ಮೂರು ಅಂಶಗಳ ಛಾಯೆಯಾಗಿರಬಹುದು ಅಥವಾ ಒಂದೇ ಅಂಶದ ಛಾಯೆ ಆಗಿರಲೂಬಹುದು.

$B$ ಗಣದ ಪ್ರತಿಯೊಂದು ಅಂಶವೂ $A$ ಗಣದ ಒಂದು ಅಂಶದ ಮತ್ತು ಒಂದೇ ಒಂದು ಅಂಶದ ಛಾಯೆಯಾಗಿದ್ದರೆ, $A$ ಗಣಕ್ಕೂ ಮತ್ತು $B$ ಗಣಕ್ಕೂ *ಏಕ-ಏಕ* ಹೊಂದಾಣಿಕೆ ಇರುತ್ತದೆ. ಆಗ $A$, $B$ ಗಳನ್ನು *ಸಮಸಂಯೋಗಿಗಳು* ಎಂದು ಕರೆಯುತ್ತೇವೆ.

$f : A \rightarrow B$ ಒಂದು ಏಕ-ಏಕ ಉತ್ಪನ್ನವಾಗಿದ್ದರೆ, $f^{-1} : B \rightarrow A$ ಅನ್ನು

$f^{-1} = \{ (y,x) \mid (x,y) \in f \}$ ಎಂದು ಪರಿಗಣಿಸಲಾಗುವುದು.

**ಉದಾಹರಣೆ :** $f : R \rightarrow R$ ಅನ್ನು $f(x) = 2x - 3$ ಎನ್ನುವುದಾದರೆ, $f^{-1}$ ಅನ್ನು ಕಂಡುಹಿಡಿಯಿರಿ.

ಈಗ, $f(x) = y$ ಎಂದು ಪರಿಗಣಿಸೋಣ.

ಆಗ, $y = 2x - 3$ ಎಂದಾಗುವುದು ಮತ್ತು

$x = \dfrac{3 + y}{2}$ ಅಥವಾ $f^{-1}(y) = \dfrac{3 + y}{2}$ ಎಂದಾಗುವುದು.

ಆದ್ದರಿಂದ $f^{-1}(x) = \dfrac{3+x}{2}$ ಎಂದು ಪರಿಗಣಿಸಲಾಗುವುದು.

**ಗುಣಲಬ್ಧ ಉತ್ಪನ್ನ:** $f$ ಉತ್ಪನ್ನವು $A$ ಗಣದಿಂದ $B$ ಗಣಕ್ಕೆ ಚಿತ್ರಿಸಲಿ. $g$ ಉತ್ಪನ್ನವು $B$ ಯಿಂದ $C$ ಗಣಕ್ಕೆ ಚಿತ್ರಿಸಲಿ. ಆಗ $f$ ಮತ್ತು $g$ ಉತ್ಪನ್ನಗಳ ಗುಣಲಬ್ಧವನ್ನು $g \circ f$ ಎಂದು ಬರೆಯುತ್ತೇವೆ. ಈ ಉತ್ಪನ್ನವು $A$ ಗಣದಿಂದ $C$ ಗಣಕ್ಕೆ ಚಿತ್ರಿಸುತ್ತದೆ ಮತ್ತು ಪ್ರತಿಯೊಂದು $x \in A$ ಗೂ

$(g \circ f)(x) = g(f(x))$ ಎಂದು ಪರಿಗಣಿಸಲಾಗುವುದು.

**ಉದಾಹರಣೆ :** $R$ ಎಂಬುದು ನೈಜಸಂಖ್ಯಾ ಗಣವಾಗಿದ್ದು, $f : R \rightarrow R$ ಅನ್ನು $f(x) = 3x - 1$ ಎಂದು ಮತ್ತು $g : R \rightarrow R$ ಅನ್ನು $g(x) = 5x^2$ ಎಂದು ವ್ಯಾಖ್ಯಾನಿಸಿದರೆ $g \circ f$ ಅನ್ನು ಕಂಡುಹಿಡಿಯಿರಿ.

ಉತ್ಪನ್ನಗಳ ಗುಣಲಬ್ಧವು $(g \circ f)(x) = g(f(x))$ ಎಂದಾಗುವುದು.

ಅಂದರೆ $(g \circ f)(x) = g(3x - 1) = 5(3x - 1)^2$

$= 45x^2 - 30x + 5$

ಎಂದಾಗುವುದು.

## ಅಭ್ಯಾಸ - 1

1. $A = \{ x \mid x^2 - 5x + 6 = 0 \}$, $B = \{ 2, 4 \}$ ಮತ್ತು $C = \{ 4, 5 \}$ ಆದಾಗ $(A - B) \times (B - C)$ ಅನ್ನು ಕಂಡುಹಿಡಿಯಿರಿ.

2. ಉತ್ಪನ್ನ $f : R \rightarrow R$ ಅನ್ನು $f(x) = 2x + 5$ ಎಂದು ವ್ಯಾಖ್ಯಾನಿಸಿದಾಗ, $f$ ಏಕ - ಏಕ ಉತ್ಪನ್ನವೇ ಎಂದು ಪರೀಕ್ಷಿಸಿ.

3. $A = \{ a, b \}$, $B = \{ 1, 2, 3, 4, 5 \}$ ಮತ್ತು $C = \{ 3, 5, 7, 9 \}$ ಆದಾಗ $(A \times B) \cap (A \times C)$ ಅನ್ನು ಕಂಡುಹಿಡಿಯಿರಿ.

4. $f : R \rightarrow R$ ಅನ್ನು $f(x) = x^2 - 3x + 5$ ಎಂದು ವ್ಯಾಖ್ಯಾನಿಸಿದರೆ, $f^{-1}(3)$ ಕಂಡುಹಿಡಿಯಿರಿ.

5. $f : R \to R$ ಮತ್ತು $g : R \to R$ ಎರಡು ಉತ್ಪನ್ನಗಳನ್ನು $f(x) = x^2 + x + 1$ ಮತ್ತು $g(x) = 2x - 1$ ಎಂದು ವ್ಯಾಖ್ಯಾನಿಸಿದರೆ (i) $f \circ g(x)$ (ii) $f \circ f(2)$ (iii) $g \circ g(3)$ ಅನ್ನು ಕಂಡುಹಿಡಿಯಿರಿ

6. ಉತ್ಪನ್ನ $f : R \to R$ ಅನ್ನು $f(x) = 2x + 1$ ಎಂದು ಮತ್ತು ಉತ್ಪನ್ನ $g : R \to R$ ಅನ್ನು $g(x) = x^2 - 2$ ಎಂದು ವ್ಯಾಖ್ಯಾನಿಸಿದರೆ $g \circ f$ ಮತ್ತು $f \circ g$ ಗಳನ್ನು ಕಂಡುಹಿಡಿಯಿರಿ.

## 1.4 ಪರಿಮಿತ ಮತ್ತು ಅಪರಿಮಿತ ಗಣಗಳು

ಧನ ಪೂರ್ಣಾಂಕಗಳ ಗಣ $N = \{1, 2, 3, 4, .....\}$ ಎಂಬುದು ಗಣಿತದ ವಿದ್ಯಾರ್ಥಿಗಳಿಗೆ ಚಿರಪರಿಚಿತ. ಯಾವುದೇ ಗಣ $A$ಯು $N$ಗೆ ಸಮಸಂಯೋಗಿ ಆಗಿದ್ದರೆ, ಆಗ $A$ ಅನ್ನು "ಪ್ರಗಣನೀಯ"ವೆಂದು ಕರೆಯುತ್ತೇವೆ. ಒಂದು ಗಣದಲ್ಲಿ ನಿರ್ದಿಷ್ಟ ಸಂಖ್ಯೆಗಳಷ್ಟು ಅಂಶಗಳಿದ್ದರೆ, ಅದನ್ನು 'ಪರಿಮಿತ ಗಣ' ಎನ್ನುತ್ತೇವೆ.

ಗಣ $A$ ಪ್ರಗಣನೀಯವಾಗಿದ್ದರೆ ಆಗ ಅದನ್ನು ನಾವು ಎಣಿಸಲು ಸಾಧ್ಯವಾದ ಗಣವೆಂದು ಕರೆಯುತ್ತೇವೆ. ಪ್ರಗಣನೀಯವಲ್ಲದ ಗಣವನ್ನು ಅಪರಿಮಿತ ಅಥವಾ ಅನಂತ ಮತ್ತು ಎಣಿಸಲು ಅಸಾಧ್ಯವಾದ ಗಣವೆಂದು ಕರೆಯುತ್ತೇವೆ.

**ಉದಾಹರಣೆ :** $N = \{1,2, 3 ......\}$ ಮತ್ತು

$E = \{2, 4, 6, ....\}$ ಆಗಿದ್ದು

ಉತ್ಪನ್ನ $f : N \to E$ ಅನ್ನು ಪ್ರತಿ $n \in N$ ಗೂ $f(n) = 2n$ ಎಂದು ತೆಗೆದುಕೊಂಡಾಗ

$N$ ಗಣವು $E$ ಗಣಕ್ಕೆ ಸಮಸಂಯೋಗಿ ಆಗಿದೆ. ಆದ್ದರಿಂದ

$E$ ಗಣವನ್ನು ಪ್ರಗಣನೀಯ ಗಣವೆಂದು ಕರೆಯುತ್ತೇವೆ.

**ಸೂಚನೆ:** ಎಣಿಸಲು ಸಾಧ್ಯವಾದ ಗಣದ ಅಂಶಗಳನ್ನು ಒಂದು ಶ್ರೇಣಿಯ ರೂಪದಲ್ಲಿ ಬರೆಯಬಹುದು. ಈ ಮೂಲಕ ದತ್ತಗಣವು ಎಣಿಸಲು ಸಾಧ್ಯವೋ ಅಥವಾ ಎಣಿಸಲು ಅಸಾಧ್ಯವೋ ಎಂಬುದನ್ನು ನಿರ್ಧರಿಸಬಹುದು.

---

*"ಅನಂತ ! ಬೇರೆ ಯಾವ ಪ್ರಶ್ನೆಯೂ ಮಾನವನ ಅಂತರಂಗವನ್ನು ಇಷ್ಟೊಂದು ಗಾಢವಾಗಿ ತಟ್ಟಿಲ್ಲ."*

**- ಡೇವಿಡ್ ಹಿಲ್ಬರ್ಟ್**

*"ಗಣಿತವು ಅನಂತದ ವಿಜ್ಞಾನ !"* **- ಹರ್ಮನ್‌ವೈಲ್**

# ಅಧ್ಯಾಯ - 2
# ಗಣಿತ ತರ್ಕ

## 2.1 ಪೀಠಿಕೆ

ಗಣಿತ ತರ್ಕದ ಬಗ್ಗೆ ಮೊದಲು ಚಿಂತನೆ ಮಾಡಿದವರು ಗಣಿತಶಾಸ್ತ್ರಜ್ಞ ಲೈಬ್ನಿಜ್ (1646–1716). ನಂತರದ ದಿನಗಳಲ್ಲಿ ಜಾರ್ಜ್ ಬೂಲ್, ಡಿಮಾರ್ಗನ್, ಸಿ. ಎಸ್. ಪೀಯರ್ಸ್, ಜಿ. ಫ್ರೆಜ್ ಮತ್ತು ಜಿ. ಪಿಯಾನೊ ಇವರುಗಳು ಗಣಿತತರ್ಕದ ಬಗ್ಗೆ ಇನ್ನಷ್ಟು ಆಳವಾದ ತಿಳುವಳಿಕೆಯನಿತ್ತರು. ಆನಂತರ ವೈಟ್‌ಹೆಡ್ ಮತ್ತು ರಝಲ್ ಅವರುಗಳ ಪ್ರಸಿದ್ಧವಾದ ಪುಸ್ತಕ ಹಾಗೂ ಡೆವಿಡ್ ಹಿಲ್‌ಬರ್ಟ್ ಮತ್ತು ಪಾಲ್‌ಬರ್ನೆಸ್ ಅವರುಗಳ ವ್ಯಾಪಕವಾದ ಚಿಂತನೆಯಿಂದ ಈ ಗಣಿತ ತರ್ಕ ಒಂದು ಸ್ಪಷ್ಟ ಬೆಳವಣಿಗೆಯನ್ನು ಪಡೆಯಿತು.

## 2.2 ಉಕ್ತಿಗಳು

**ವ್ಯಾಖ್ಯೆ:** ಒಂದು ದತ್ತ ಸನ್ನಿವೇಶದಲ್ಲಿ 'ನಿಜ' ಅಥವಾ 'ಸುಳ್ಳು' ಎಂದು ಹೇಳಬಹುದಾದ ಹೇಳಿಕೆಯನ್ನು *ಉಕ್ತಿ* ಎಂದು ಕರೆಯುತ್ತೇವೆ.

**ಉದಾಹರಣೆಗಳು:**

(1) ತ್ರಿಕೋನದ ಕೋನಗಳ ಒಟ್ಟು ಮೊತ್ತ 180°

(2) ಪ್ರತಿಯೊಂದು ನೈಜ ಸಂಖ್ಯೆಯನ್ನು ಮಿಶ್ರಸಂಖ್ಯೆಯಂತೆ ಬರೆಯಬಹುದು

(3) ಎಲ್ಲ ಹುಡುಗಿಯರೂ ಸುಂದರವಾಗಿರುತ್ತಾರೆ.

ಈ ಮೇಲಿನ (1), (2) ವಾಕ್ಯಗಳನ್ನು ನಿಜವೆಂದೂ (3) ನೇ ವಾಕ್ಯವನ್ನು ಸುಳ್ಳೆಂದು ಹೇಳಬಹುದಾದ್ದರಿಂದ, ಇವುಗಳನ್ನು ನಾವು ಉಕ್ತಿಗಳೆಂದು ಕರೆಯುತ್ತೇವೆ.

## 2.3 ಉಕ್ತಿಯ ನಿಜಮೌಲ್ಯ

**ವ್ಯಾಖ್ಯೆ:** ಒಂದು ಉಕ್ತಿಯ ನಿಜತ್ವ ಅಥವಾ ಸುಳ್ಳುತನವನ್ನು ಅದರ ನಿಜಮೌಲ್ಯವೆಂದು ಕರೆಯುತ್ತೇವೆ.

ನಿಜತ್ವವನ್ನು $T$ ಎಂದೂ ಸುಳ್ಳುತನವನ್ನು $F$ ಎಂದೂ ಸೂಚಿಸುತ್ತೇವೆ.

## 2.4 ಸಂಯೋಜಕಗಳು

ತಾರ್ಕಿಕವಾದ ಒಂದು ವಾದದಲ್ಲಿ ಅನೇಕ ಉಕ್ತಿಗಳನ್ನು ನಾವು ಕಾಣುತ್ತೇವೆ. ದತ್ತ ಉಕ್ತಿಗಳಿಂದ ಹೊಸ ಉಕ್ತಿಗಳನ್ನೂ ಪಡೆಯಬಹುದು. ಈ ರೀತಿ ಹೊಸ ಉಕ್ತಿಗಳನ್ನು ಪಡೆಯುವಾಗ ನಾವುಗಳು "ಅಲ್ಲ" ಅಥವಾ "ಹೌದು" ಎಂಬ ಪದಗಳನ್ನು ಜೋಡಿಸುತ್ತೇವೆ. ಎರಡು ಅಥವಾ ಹೆಚ್ಚಿನ ಉಕ್ತಿಗಳನ್ನು ರಚಿಸುವಾಗ "ಮತ್ತು", "ಅಥವಾ", "ಆಗಿದ್ದರೆ,....ಆಗ", "ಆದರೆ, ಆದರೆ ಮಾತ್ರ" ಎಂಬ ಪದಗಳನ್ನು ಜೋಡಿಸುತ್ತೇವೆ. ಈ ರೀತಿ ಉಕ್ತಿಗಳ ರಚನೆಯಲ್ಲಿ ಬಳಸುವ ಪದಗಳ ಜೋಡಣೆಯನ್ನು ***ಸಂಯೋಜಕ***ಗಳೆಂದು ಕರೆಯುತ್ತೇವೆ.

ಹೊಸ ಉಕ್ತಿಯ ಜೋಡಣೆಯ ರಚನೆಯಲ್ಲಿ "ಅಲ್ಲ" ಅಥವಾ "ಹೌದು" ಎಂಬ ಪದ ಜೋಡಣೆಯನ್ನು ***ಏಕಸಂಯೋಜಕ***ವೆಂದೂ ಮತ್ತು ಉಳಿದ ಸಂಯೋಜಕಗಳನ್ನು ***ದ್ವಿಸಂಯೋಜಕ***ಗಳೆಂದೂ ಕರೆಯುತ್ತೇವೆ. ಒಂದು ಅಥವಾ ಹೆಚ್ಚು ಸಂಯೋಜಕಗಳಿಂದ ಕೂಡಿಸುವ ಉಕ್ತಿಯನ್ನು ***ಸಂಯುಕ್ತೋಕ್ತಿ*** ಎಂದು ಕರೆಯುತ್ತೇವೆ.

ಒಂದು ಸಂಯುಕ್ತೋಕ್ತಿಯಲ್ಲಿ ಸೇರಿರುವ ಪ್ರತ್ಯೇಕ ಉಕ್ತಿಗಳನ್ನು ಅದರ ಬಿಡಿ ಉಕ್ತಿಗಳೆಂದು ಕರೆಯುತ್ತೇವೆ. ಸಂಯುಕ್ತೋಕ್ತಿಗಳಿಲ್ಲದಿರುವ ಉಕ್ತಿಗಳನ್ನು ಸರಳೋಕ್ತಿಗಳೆಂದು ಕರೆಯುತ್ತೇವೆ.

## 2.5 ಸಮುಚ್ಚಯ

"ಮತ್ತು" ಎಂಬ ಪದದಿಂದ ಸಂಯೋಜಿತವಾಗಿರುವ ಎರಡು ಬಿಡಿ ಉಕ್ತಿಗಳ ಸಂಯುಕ್ತೋಕ್ತಿಗಳನ್ನು ***ಸಮುಚ್ಚಯ*** ಎಂದು ಕರೆಯುತ್ತೇವೆ.

**ಉದಾ:** 1. ಆಕಾಶವು ನೀಲಿಯಾಗಿದೆ

2. ಹವೆಯು ತಂಪಾಗಿದೆ

ಇವೆರಡು ಉಕ್ತಿಗಳನ್ನು"ಮತ್ತು" ಎನ್ನುವ ಪದ ಜೋಡಣೆಯಿಂದ ಈ ರೀತಿ ಬರೆಯಬಹುದು : ಆಕಾಶವು ನೀಲಿಯಾಗಿದೆ ಮತ್ತು ಹವೆಯು ತಂಪಾಗಿದೆ. ಸಾಮಾನ್ಯವಾಗಿ ನಾವು ಉಕ್ತಿಗಳನ್ನು $p$, $q$, $r$ ಎಂದು ಸೂಚಿಸುತ್ತೇವೆ. $p$ ಮತ್ತು $q$ ಗಳ ಸಮುಚ್ಚಯ "$p$ ಮತ್ತು $q$" ಅನ್ನು ಸಾಂಕೇತಿಕವಾಗಿ $p \wedge q$ ಎಂದು ನಿರೂಪಿಸುತ್ತೇವೆ. $\wedge$ ಸಂಕೇತವು "ಮತ್ತು" ಎಂಬುದನ್ನು ಸೂಚಿಸುತ್ತದೆ.

ಉದಾ: 1. ಗುಲಾಬಿಯು ಒಂದು ಹೂವು.

2. ಗುಲಾಬಿಯು ಸುಂದರವಾಗಿದೆ.

ಈ ಉಕ್ತಿಗಳ ಸಮುಚ್ಚಯವು "ಗುಲಾಬಿಯು ಒಂದು ಹೂವು ಮತ್ತು ಗುಲಾಬಿಯು ಸುಂದರವಾಗಿದೆ." ಇದನ್ನು ಸಾಂಕೇತಿಕವಾಗಿ $p \wedge q$ ಎಂದು ಬರೆಯಬಹುದು. ಇದರಲ್ಲಿ $p$ ಮತ್ತು $q$ಗಳು ಮೇಲಿನ ಉಕ್ತಿಗಳನ್ನು ಕ್ರಮವಾಗಿ ಪ್ರತಿನಿಧಿಸುತ್ತವೆ.

ಒಂದು ಸಮುಚ್ಚಯದ ನಿಜ ಮೌಲ್ಯವನ್ನು ನಿರ್ಣಯಿಸುವಲ್ಲಿ ಈ ಒಂದು ನಿಯಮವನ್ನು ಪಾಲಿಸುತ್ತೇವೆ. ಅದೇನೆಂದರೆ, $p$ ಮತ್ತು $q$ ಪ್ರತ್ಯೇಕವಾಗಿ ನಿಜವಾಗಿರುವಾಗ ಮಾತ್ರ $p \wedge q$ ನಿಜವಾಗಿರುವುದು, ಬೇರೆ ಎಲ್ಲಾ ಸಂದರ್ಭಗಳಲ್ಲಿಯೂ ಅದು ಸುಳ್ಳಾಗಿರುವುದು.

**ನಿಜಮೌಲ್ಯಗಳ ಕೋಷ್ಟಕ 1**

| $p$ | $q$ | $p \wedge q$ |
|---|---|---|
| $T$ | $T$ | $T$ |
| $T$ | $F$ | $F$ |
| $F$ | $T$ | $F$ |
| $F$ | $F$ | $F$ |

## 2.6 ಪರ್ಯಾಯ

**ವ್ಯಾಖ್ಯೆ:** $p$ ಮತ್ತು $q$ ಯಾವುದೇ ಎರಡು ಉಕ್ತಿಗಳಾದಾಗ "ಅಥವಾ" ಎಂಬ ಸಂಯೋಜಕದಿಂದ ರಚಿತವಾದ ಸಂಯುಕ್ತೋಕ್ತಿಯನ್ನು ನಾವು ಸಾಂಕೇತಿಕವಾಗಿ $p \vee q$ ಎಂದು ನಿರೂಪಿಸುತ್ತೇವೆ. "$\vee$" ಸಂಕೇತ "ಅಥವಾ" ಎಂಬ ಪದವನ್ನು ಸೂಚಿಸುತ್ತದೆ. ಈ ರೀತಿ "ಅಥವಾ" ಎಂಬ ಪದದಿಂದ ಸಂಯೋಜಿತವಾಗಿರುವ ಸಂಯುಕ್ತೋಕ್ತಿಯನ್ನು ನಾವು **ಪರ್ಯಾಯ** ಎಂದು ಕರೆಯುತ್ತೇವೆ.

ಉದಾ: 1. ಸೀತೆಯು ಜನಕರಾಜನ ಮಗಳು

2. ಸೀತೆಯು ಶ್ರೀರಾಮನ ಹೆಂಡತಿ

ಈ ಉಕ್ತಿಗಳ ಪರ್ಯಾಯವನ್ನು ಈ ರೀತಿ ಬರೆಯಬಹುದು:

"ಸೀತೆಯು ಜನಕರಾಜನ ಮಗಳು ಅಥವಾ ಸೀತೆಯು ಶ್ರೀರಾಮನ ಹೆಂಡತಿ".

$p$ ಮತ್ತು $q$ ಯಾವುದೇ ಎರಡು ಉಕ್ತಿಗಳಾದಾಗ $p \vee q$ ನ ನಿಜಮೌಲ್ಯ ಕೋಷ್ಟಕವನ್ನು ರಚಿಸುವಲ್ಲಿ ಈ ಮುಂದಿನ ನಿಯಮವನ್ನು ಪಾಲಿಸುತ್ತೇವೆ. $p$ ಮತ್ತು $q$ ಎರಡರಲ್ಲಿ ಕನಿಷ್ಠ ಪಕ್ಷ ಒಂದು ನಿಜವಾದ್ದಲ್ಲಿ $p \vee q$ ಅನ್ನು ನಿಜವೆಂದೂ ಉಳಿದೆಲ್ಲಾ ಸಂದರ್ಭಗಳಲ್ಲಿ ಸುಳ್ಳೆಂದು ಪರಿಗಣಿಸುತ್ತೇವೆ.

**ನಿಜಮೌಲ್ಯಗಳ ಕೋಷ್ಟಕ 2**

| $p$ | $q$ | $p \vee q$ |
|---|---|---|
| $T$ | $T$ | $T$ |
| $T$ | $F$ | $T$ |
| $F$ | $T$ | $T$ |
| $F$ | $F$ | $F$ |

ಅಂದರೆ, $p$ ಮತ್ತು $q$ ಎರಡು ಉಕ್ತಿಗಳೂ ಸುಳ್ಳಾದಾಗ ಮಾತ್ರ $p \vee q$ ಪರ್ಯಾಯೋಕ್ತಿಯೂ ಸುಳ್ಳಾಗಿರುತ್ತದೆ.

## 2.7 ನಿಬಂಧಿತ

**ವ್ಯಾಖ್ಯೆ :** $p$ ಮತ್ತು $q$ಗಳು ಯಾವುದೇ ಎರಡು ಉಕ್ತಿಗಳಾಗಿರುವಾಗ "$p$ ಆಗಿದ್ದರೆ ಆಗ $q$" ಎನ್ನುವ ರೂಪದ ಸಂಯುಕ್ತೋಕ್ತಿಯನ್ನು *ನಿಬಂಧಿತ* ಎಂದು ಕರೆಯುತ್ತೇವೆ. ಇವುಗಳಲ್ಲಿ $p$ ಅನ್ನು ದತ್ತವೆಂದೂ, $q$ ಅನ್ನು ತೀರ್ಮಾನವೆಂದೂ ಕರೆಯುತ್ತೇವೆ. ಸಾಂಕೇತಿಕವಾಗಿ ಇದನ್ನು ನಾವು $p \rightarrow q$ ಎಂದು ಸೂಚಿಸುತ್ತೇವೆ.

ಉದಾ: 1. $ABC$ ತ್ರಿಕೋನವು ಒಂದು ಸಮಭುಜ ತ್ರಿಕೋನ

2. $\hat{A} = \hat{B} = \hat{C} = 60^\circ$

ಈ ಉಕ್ತಿಗಳನ್ನು ನಿಬಂಧಿತ ಸಂಯೋಜಕದ ಜೋಡಣೆಯಿಂದ, "$ABC$ ತ್ರಿಕೋನವು ಒಂದು ಸಮಭುಜ ತ್ರಿಕೋನವಾದರೆ ಆಗ $\hat{A} = \hat{B} = \hat{C} = 60^\circ$ ಆಗಿರುತ್ತದೆ." $p$ ಮತ್ತು $q$ ಎರಡು ಯಾವುದೇ ಉಕ್ತಿಗಳಾಗಿರುವಾಗ ನಿಬಂಧಿತದ ನಿಜಮೌಲ್ಯವನ್ನು ನಿರ್ಧರಿಸಲು ನಾವು ಈ ಮುಂದಿನ ನಿಯಮವನ್ನು ಪಾಲಿಸುತ್ತೇವೆ. $p$ಯು ನಿಜ ಮತ್ತು $q$ ಸುಳ್ಳಾಗಿರುವಾಗ ಮಾತ್ರ $p \rightarrow q$ ಸುಳ್ಳಾಗಿರುತ್ತದೆ. ಮಿಕ್ಕ ಎಲ್ಲಾ ಸಂದರ್ಭಗಳಲ್ಲಿಯೂ ಅದು ನಿಜವಾಗಿರುವುದು.

ನಿಜ ಮೌಲ್ಯಗಳ ಕೋಷ್ಟಕ 3

| $p$ | $q$ | $p \rightarrow q$ |
|---|---|---|
| $T$ | $T$ | $T$ |
| $T$ | $F$ | $F$ |
| $F$ | $T$ | $T$ |
| $F$ | $F$ | $T$ |

## 2.8 ಸಮತೋಕ್ತಿಗಳು

ವ್ಯಾಖ್ಯೆ : $p$ ಮತ್ತು $q$ ಯಾವುದೇ ಎರಡು ಉಕ್ತಿಗಳಾಗಿರುವಾಗ, " $p$ ಆಗಿದ್ದರೆ ಮಾತ್ರ $q$ ಮತ್ತು $q$ ಆಗಿದ್ದರೆ ಮಾತ್ರ $p$" ಎನ್ನುವ ಸಂಯುಕ್ತೋಕ್ತಿಯನ್ನು ***ಸಮತೋಕ್ತಿ*** ಎಂದು ಕರೆಯುತ್ತೇವೆ. ಸಾಂಕೇತಿಕವಾಗಿ ಇದನ್ನು $p \leftrightarrow q$ ಎಂದು ನಿರೂಪಿಸುತ್ತೇವೆ. ಇದನ್ನು *ದ್ವಿಬಂಧಿತ*ವೆಂದೂ ಕರೆಯುತ್ತೇವೆ.

ಉದಾ: 1. $2n$ ಸರಿ ಸಂಖ್ಯೆ

2. ಪ್ರತಿಯೊಂದು ಸರಿಸಂಖ್ಯೆಯು 2ರಿಂದ ಭಾಗಿಸಲ್ಪಡುತ್ತದೆ.

ಇದನ್ನು ಒಂದು ಸಮತೋಕ್ತಿಯ ರೂಪದಲ್ಲಿ ಹೀಗೆ ಬರೆಯಬಹುದು : $2n$ ಸರಿ ಸಂಖ್ಯೆಯಾಗಿದ್ದರೆ 2 ರಿಂದ ಭಾಗಿಸಲ್ಪಡುತ್ತದೆ ಮತ್ತು 2 ರಿಂದ ಭಾಗಿಸಲ್ಪಟ್ಟರೆ $2n$ ಸರಿ ಸಂಖ್ಯೆಯಾಗಿರುತ್ತದೆ.

ಸಮತೋಕ್ತಿಯ ನಿಜಮೌಲ್ಯವನ್ನು ನಿರ್ಣಯಿಸಲು ನಾವು ಈ ಮುಂದಿನ ನಿಯಮವನ್ನು ಪಾಲಿಸುತ್ತೇವೆ: $p$ ಮತ್ತು $q$ ಎರಡೂ ನಿಜವಾಗಿರುವಾಗ ಅಥವಾ ಎರಡೂ ಸುಳ್ಳಾಗಿರುವಾಗ $p \leftrightarrow q$ ನಿಜವಾಗಿರುತ್ತದೆ ಮತ್ತು ಉಳಿದೆಲ್ಲ ಸಂದರ್ಭಗಳಲ್ಲಿ ಅದು ಸುಳ್ಳಾಗಿರುತ್ತದೆ.

ನಿಜಮೌಲ್ಯಗಳ ಕೋಷ್ಟಕ 4

| $p$ | $q$ | $p \rightarrow q$ | $q \rightarrow p$ | $p \leftrightarrow q$ |
|---|---|---|---|---|
| $T$ | $T$ | $T$ | $T$ | $T$ |
| $T$ | $F$ | $F$ | $T$ | $F$ |
| $F$ | $T$ | $T$ | $F$ | $F$ |
| $F$ | $F$ | $T$ | $T$ | $T$ |

## 2.9 ನಕಾರ

ವ್ಯಾಖ್ಯೆ: $p$ ಉಕ್ತಿಯಲ್ಲಿ "ಇಲ್ಲ" ಎನ್ನುವ ಪದವನ್ನು ಯುಕ್ತ ಸ್ಥಳದಲ್ಲಿ ಬರೆಯುವುದರಿಂದ ಪಡೆಯುವ ಉಕ್ತಿಯನ್ನು $p$ ಉಕ್ತಿಯ *ನಕಾರ* ಎಂದು ಕರೆಯುತ್ತೇವೆ. ಸಾಂಕೇತಿಕವಾಗಿ ಅದನ್ನು $\sim p$ ಎಂದು ಸೂಚಿಸುತ್ತೇವೆ.

ಉದಾ: ಭೂಮಿಯು ಗೋಲಾಕಾರವಾಗಿದೆ ಎನ್ನುವುದನ್ನು $p$ ಸೂಚಿಸಿದರೆ, ಭೂಮಿಯು ಗೋಲಾಕಾರವಾಗಿಲ್ಲ ಎನ್ನುವ ಅದರ ನಕಾರವನ್ನು $\sim p$ ಸೂಚಿಸುತ್ತದೆ.

ನಕಾರದ ನಿಜಮೌಲ್ಯವನ್ನು ನಿರ್ಣಯಿಸಲು ಮುಂದಿನ ನಿಯಮವನ್ನು ಪಾಲಿಸುತ್ತೇವೆ. ಯಾವುದೇ ಉಕ್ತಿ $p$ ನಿಜವಾಗಿರುವಾಗ $\sim p$ ಸುಳ್ಳಾಗಿರುತ್ತದೆ. ವಿಪರ್ಯವಾಗಿಯೂ ಇದು ಸರಿ ಎಂಬುದು ಸ್ಪಷ್ಟ. ಅಂದರೆ, $p$ ಸುಳ್ಳಾಗಿರುವಾಗ $\sim p$ ನಿಜವಾಗಿರುತ್ತದೆ.

**ನಿಜಮೌಲ್ಯ ಕೋಷ್ಟಕ 5**

| $p$ | $\sim p$ |
|---|---|
| $T$ | $F$ |
| $F$ | $T$ |

## 2.10 ವಿಲೋಮ ಮತ್ತು ಪ್ರತಿಧನ

$p$ ಮತ್ತು $q$ ಯಾವುದೇ ಎರಡು ಉಕ್ತಿಗಳಾಗಿರುವಾಗ $p \rightarrow q$ ದತ್ತ ನಿಬಂಧಿತವಾಗಿದ್ದರೆ

(i) $q \rightarrow p$ ಅನ್ನು ಇದರ *ವಿಲೋಮ* ಎಂದೂ

(ii) $\sim p \rightarrow \sim q$ ಅನ್ನು ಇದರ *ಪ್ರತಿಲೋಮ* ಎಂದೂ

(iii) $\sim q \rightarrow \sim p$ ಅನ್ನು ಇದರ *ಪ್ರತಿಧನ* ಎಂದೂ ಕರೆಯುತ್ತೇವೆ.

ಉದಾ: "ಆಕಾಶದಲ್ಲಿ ಮೋಡಗಳಿದ್ದರೆ ಆಗ ಮಳೆ ಬರುತ್ತದೆ" ಎನ್ನುವುದು ದತ್ತ ನಿಬಂಧಿತವಾದರೆ,

(i) ಇದರ ವಿಲೋಮ, $q \rightarrow p$: ಮಳೆ ಬಂದರೆ ಆಗ ಆಕಾಶದಲ್ಲಿ ಮೋಡಗಳಿರುತ್ತವೆ;

(ii) ಇದರ ಪ್ರತಿಲೋಮ, $\sim p \rightarrow \sim q$ : ಆಕಾಶದಲ್ಲಿ ಮೋಡಗಳಿಲ್ಲದಿದ್ದರೆ ಮಳೆ ಬರುವುದಿಲ್ಲ; ಮತ್ತು

(iii) ಇದರ ಪ್ರತಿಧನ, $\sim q \rightarrow \sim p$ : ಮಳೆ ಬರದಿದ್ದಾಗ ಆಕಾಶದಲ್ಲಿ ಮೋಡಗಳಿರುವುದಿಲ್ಲ.

## 2.11 ತಾರ್ಕಿಕ ಸಮಾನತೆ

ವ್ಯಾಖ್ಯೆ: ನಿಜಮೌಲ್ಯ ಒಂದೇ ಆಗಿರುವಂತಹ ಎರಡು ಸರಳ ಉಕ್ತಿಗಳು ***ತಾರ್ಕಿಕವಾಗಿ ಸಮಾನವಾಗಿವೆ*** ಎಂದು ಹೇಳುತ್ತೇವೆ.

ಅಂದರೆ, ಯಾವುದೇ ಎರಡು ನಿಜ ಉಕ್ತಿಗಳು ಅಥವಾ ಎರಡು ಸುಳ್ಳು ಉಕ್ತಿಗಳು ತಾರ್ಕಿಕವಾಗಿ ಸಮಾನವಾಗಿರುವುವು.

$p$ ಮತ್ತು $q$ ಯಾವುದೇ ಎರಡು ಉಕ್ತಿಗಳಾದರೆ ಅವುಗಳ ತಾರ್ಕಿಕ ಸಮಾನತೆಯನ್ನು ಸಾಂಕೇತಿಕವಾಗಿ $p \equiv q$ ಎಂದು ನಿರೂಪಿಸುತ್ತೇವೆ.

**ನಿಜಮೌಲ್ಯಗಳ ಕೋಷ್ಟಕ 6**

| $p$ | $q$ | $p \rightarrow q$ | $\sim q$ | $\sim p$ | $\sim q \rightarrow \sim P$ |
|---|---|---|---|---|---|
| $T$ | $T$ | $T$ | $F$ | $F$ | $T$ |
| $T$ | $F$ | $F$ | $T$ | $F$ | $F$ |
| $F$ | $T$ | $T$ | $F$ | $T$ | $T$ |
| $F$ | $F$ | $T$ | $T$ | $T$ | $T$ |

ಮೇಲಿನ ಕೋಷ್ಟಕವನ್ನು ಗಮನಿಸಿದರೆ $p \rightarrow q$ ಮತ್ತು $\sim q \rightarrow \sim p$ ಈ ಸಂಯುಕ್ತೋಕ್ತಿಗಳಲ್ಲಿ ಒಂದು ನಿಜವಾಗಿದ್ದಾಗ ಇನ್ನೊಂದೂ ನಿಜವಾಗಿಯೂ ಮತ್ತು ಒಂದು ಸುಳ್ಳಾದಾಗ ಇನ್ನೊಂದೂ ಸುಳ್ಳಾಗಿರುತ್ತದೆ. ಆದ್ದರಿಂದ ಈ ಸಂಯುಕ್ತೋಕ್ತಿಗಳನ್ನು ತಾರ್ಕಿಕವಾಗಿ ಸಮಾನವಾಗಿವೆ ಎಂದು ಹೇಳುತ್ತೇವೆ. ಅಂದರೆ

$$(p \rightarrow q) \equiv (\sim q \rightarrow \sim p)$$

## 2.12 ನಿತ್ಯಸತ್ಯಗಳು

ವಾಖ್ಯೆ: ಒಂದು ಸಂಯುಕ್ತೋಕ್ತಿಯ ಬಿಡಿ ಉಕ್ತಿಗಳು ನಿಜವಾಗಿರಲಿ ಅಥವಾ ಸುಳ್ಳಾಗಿರಲಿ ಆದರೆ ಆ ಸಂಯುಕ್ತೋಕ್ತಿಯು ಯಾವಾಗಲೂ ನಿಜವಾಗಿದ್ದರೆ ಅದನ್ನು **ನಿತ್ಯಸತ್ಯ**ವೆಂದು ಕರೆಯುತ್ತೇವೆ.

ಉದಾ: $p$ : ಹಣ್ಣು ಸಿಹಿಯಾಗಿದೆ

$\sim p$ : ಹಣ್ಣು ಸಿಹಿಯಾಗಿಲ್ಲ

$p \vee \sim p$ ಯ ನಿಜಮೌಲ್ಯ ಕೋಷ್ಟಕವು ಈ ಕೆಳಗಿನಂತಿರುತ್ತದೆ.

**ನಿಜಮೌಲ್ಯಗಳ ಕೋಷ್ಟಕ 7**

| $p$ | $\sim p$ | $p \vee \sim p$ |
|---|---|---|
| *T* | *F* | *T* |
| *F* | *T* | *T* |

ಇಂತಹ ಸಂಯುಕ್ತೋಕ್ತಿಯನ್ನು ನಿತ್ಯಸತ್ಯವೆಂದು ಕರೆಯುತ್ತೇವೆ.

## 2.13 ಅಸಮಂಜಸತೆ

**ವ್ಯಾಖ್ಯೆ:** ಒಂದು ಸಂಯುಕ್ತೋಕ್ತಿಯು ಯಾವಾಗಲೂ ಸುಳ್ಳಾಗಿದ್ದರೆ ಅದನ್ನು *ಅಸಮಂಜಸತೆ* ಎಂದು ಕರೆಯುತ್ತೇವೆ.

$p$ ಒಂದು ಯಾವುದೇ ಉಕ್ತಿಯಾಗಿದ್ದರೆ, $p \wedge \sim p$ ಯ ನಿಜಮೌಲ್ಯವನ್ನು ಕೋಷ್ಟಕ '8 ರಲ್ಲಿ ತೋರಿಸಲಾಗಿದೆ.

**ನಿಜಮೌಲ್ಯಗಳ ಕೋಷ್ಟಕ 8**

| $p$ | $\sim p$ | $p \wedge \sim p$ |
|---|---|---|
| *T* | *F* | *F* |
| *F* | *T* | *F* |

ಇಂತಹ ಸಂಯುಕ್ತೋಕ್ತಿಯನ್ನು ಅಸಮಂಜಸತೆ ಎಂದು ಕರೆಯುತ್ತೇವೆ.

**ಪ್ರಮೇಯ 1 :** *ಒಂದು ನಿಬಂಧಿತವೂ ಅದರ ವಿಲೋಮವೂ ತಾರ್ಕಿಕವಾಗಿ ಸಮಾನವಲ್ಲ.*

ಉದಾ: "ದತ್ತ ಸಂಖ್ಯೆಯು 8ಕ್ಕಿಂತ ದೊಡ್ಡದಾಗಿದ್ದರೆ ಆಗ ಅದು 5ಕ್ಕಿಂತ ದೊಡ್ಡದಾಗಿದೆ". ಈ ನಿಬಂಧಿತವು ನಿಜವಾಗಿದೆ. ಆದರೆ ಇದರ ವಿಲೋಮ, "ದತ್ತ ಸಂಖ್ಯೆಯು 5ಕ್ಕಿಂತ ದೊಡ್ಡದಾಗಿದ್ದರೆ ಆಗ ಅದು 10 ಕ್ಕಿಂತ ದೊಡ್ಡದಾಗಿದೆ." ಇದು ನಿಜವೇ ಆಗಬೇಕೆಂದಿಲ್ಲ. ಆದ್ದರಿಂದ ಎರಡು ಉಕ್ತಿಗಳ ನಿಜಮೌಲ್ಯವು ಬೇರೆ ಬೇರೆ ಆದಾಗ ಅವುಗಳು ತಾರ್ಕಿಕವಾಗಿ ಸಮಾನವಲ್ಲ.

**ಪ್ರಮೇಯ 2 :** ***ಒಂದು ನಿಬಂಧಿತವೂ ಅದರ ಪ್ರತಿಲೋಮವೂ ತಾರ್ಕಿಕವಾಗಿ ಸಮಾನವಲ್ಲ.***

ಉದಾ: "ಒಬ್ಬ ವಿದ್ಯಾಥಿಯು ಪರೀಕ್ಷೆಯಲ್ಲಿ ಕಾಪಿ ಮಾಡಿದರೆ ಆಗ ಪಾಸಾಗುತ್ತಾನೆ" ಈ ನಿಬಂಧಿತವು ನಿಜವಾಗಿದೆ ಎಂದಿರಲಿ. ಆದರೆ ಇದರ ಪ್ರತಿಲೋಮ, "ಒಬ್ಬ ವಿದ್ಯಾರ್ಥಿಯು ಪರೀಕ್ಷೆಯಲ್ಲಿ ಕಾಪಿ ಮಾಡದಿದ್ದರೆ ಆಗ ಪಾಸಾಗುವುದಿಲ್ಲ". ಇದು ಸುಳ್ಳಾಗಿರಬಹುದು.

ಆದ್ದರಿಂದ ನಿಬಂಧಿತವೂ ಅದರ ಪ್ರತಿಲೋಮವೂ ತಾರ್ಕಿಕವಾಗಿ ಸಮಾನವಲ್ಲ.

**ಪ್ರಮೇಯ 3 :** ***ಒಂದು ನಿಬಂಧಿತವೂ ಅದರ ಪ್ರತಿಧನವೂ ತಾರ್ಕಿಕವಾಗಿ ಸಮಾನವಾಗಿರುವುವು.***

ಉದಾ: "ಒಬ್ಬ ವಿದ್ಯಾರ್ಥಿಯು ಪರೀಕ್ಷೆಯಲ್ಲಿ ಕಾಪಿಮಾಡಿದರೆ ಪಾಸಾಗುತ್ತಾನೆ." ಈ ನಿಬಂಧಿತವು ನಿಜವಾಗಿದೆ ಎಂದಿರಲಿ. ಇದರ ಪ್ರತಿಧನವು "ಒಬ್ಬ ವಿದ್ಯಾರ್ಥಿಯು ಪಾಸಾಗಿಲ್ಲದಿದ್ದರೆ ಆಗ ಅವನು ಕಾಪಿ ಮಾಡಿರುವುದಿಲ್ಲ". ಇದು ನಿಜವಾಗಿದೆ. ಆದ್ದರಿಂದ ಒಂದು ನಿಬಂಧಿತವೂ ಅದರ ಪ್ರತಿಧನವೂ ತಾರ್ಕಿಕವಾಗಿ ಸಮಾನವಾಗಿರುವುವು.

ಈ ಒಂದು ಮುಖ್ಯವಾದ ಪ್ರಮೇಯವನ್ನು ನಾವು ಗಣಿತಶಾಸ್ತ್ರದಲ್ಲಿ ಹಲವಾರು ಪ್ರಮೇಯಗಳನ್ನು ಮತ್ತು ಫಲಿತಾಂಶಗಳನ್ನು ಸಾಧಿಸಲು ಉಪಯೋಗಿಸುತ್ತೇವೆ. ಹೇಗೆಂದರೆ, $p \rightarrow q$ ಎಂಬುದರ ನಿಜಮೌಲ್ಯವನ್ನು ಸ್ಥಿರಪಡಿಸಲು $\sim q \rightarrow \sim p$ ಎಂಬುದರ ನಿಜಮೌಲ್ಯವನ್ನು ಸ್ಥಿರಪಡಿಸಿದರೆ ಸಾಕು.

**ಪ್ರಮೇಯ 4:** ***ಒಂದು ನಿಬಂಧಿತ ಮತ್ತು ಅದರ ವಿಲೋಮ ಇವೆರಡರ ನಿಜಮೌಲ್ಯ ಒಂದೇ ಆಗಿದ್ದರೆ ಆಗ ಅವುಗಳ ಬಿಡಿ ಉಕ್ತಿಗಳು ತಾರ್ಕಿಕವಾಗಿ ಸಮಾನವಾಗಿರುವುವು.*** ಈ ಪ್ರಮೇಯದ ವಿಲೋಮವೂ ಸತ್ಯವಾಗಿದೆ.

ಅಂದರೆ, $p \rightarrow q$, $q \rightarrow p$ ಇವೆರಡರ ನಿಜಮೌಲ್ಯಗಳು ಒಂದೇ ಆಗಿರುವಾಗ $p$ ಮತ್ತು $q$ಗಳು ತಾರ್ಕಿಕವಾಗಿ ಸಮಾನವಾಗಿರುವುವು. ವಿಲೋಮವಾಗಿ, $p$ ಮತ್ತು $q$ ತಾರ್ಕಿಕವಾಗಿ ಸಮಾನವಾಗಿರುವಾಗ $p \rightarrow q$ ಮತ್ತು $q \rightarrow p$ ಗಳ ನಿಜಮೌಲ್ಯಗಳೂ ಒಂದೇ ಆಗಿರುವುವು.

ಸಾಧನೆ:

ನಿಜಮೌಲ್ಯಗಳ ಕೋಷ್ಟಕ 9

| $p$ | $q$ | $p \to q$ | $q \to p$ | $p \leftrightarrow q$ |
|---|---|---|---|---|
| T | T | T | T | T |
| T | F | F | T | F |
| F | T | T | F | F |
| F | F | T | T | T |

**ಪ್ರಮೇಯ 5 :** ***ಎರಡು ಉಕ್ತಿಗಳ ಸಮುಚ್ಚಯ ನಕಾರವು ಅವುಗಳ ನಕಾರಗಳ ಪರ್ಯಾಯಕ್ಕೆ ಸಮಾನವಾಗಿರುವುವು.***

ಅಂದರೆ, $\sim (p \wedge q) \equiv \sim p \vee \sim q$ ಎಂದಾಗುವುದು.

ಉದಾ: "ದತ್ತಸಂಖ್ಯೆಯು ಸರಿ ಸಂಖ್ಯೆ ಮತ್ತು ಸರಿ ಸಂಖ್ಯೆಯು 2ರಿಂದ ಭಾಗಿಸಲ್ಪಡುತ್ತದೆ."

ಇದರ ನಕಾರವು "ದತ್ತಸಂಖ್ಯೆಯು ಸರಿ ಸಂಖ್ಯೆ ಅಲ್ಲ ಅಥವಾ ಸರಿ ಸಂಖ್ಯೆಯು 2ರಿಂದ ಭಾಗಿಸಲ್ಪಡುವುದಿಲ್ಲ" ಎಂದಾಗುವುದು.

ಆದ್ದರಿಂದ, ಒಂದು ಸಮುಚ್ಚಯವು ನಿಜವಾಗಲು ಎರಡು ಬಿಡಿ ಉಕ್ತಿಗಳೂ ನಿಜವಾಗಬೇಕು. ಅದರ ನಕಾರವು ನಿಜವಾಗಲು ಕನಿಷ್ಠಪಕ್ಷ ನಕಾರಗೊಂಡ ಒಂದು ಬಿಡಿ ಉಕ್ತಿಯಾದರೂ ನಿಜವಾಗಬೇಕು.

**ಪ್ರಮೇಯ 6 :** ***ಎರಡು ಉಕ್ತಿಗಳ ಪರ್ಯಾಯದ ನಕಾರವು ಅವುಗಳ ನಕಾರಗಳ ಸಮುಚ್ಚಯಕ್ಕೆ ಸಮಾನವಾಗಿರುವುದು.***

ಅಂದರೆ $\sim (p \vee q) \equiv \sim p \wedge \sim q$

"ದತ್ತಸಂಖ್ಯೆಯು 2ಕ್ಕಿಂತ ದೊಡ್ಡದಾಗಿದೆ ಅಥವಾ 5ಕ್ಕಿಂತ ದೊಡ್ಡದಾಗಿದೆ." ಇದರ ನಕಾರವು "ದತ್ತ ಸಂಖ್ಯೆಯು 2ಕ್ಕಿಂತ ದೊಡ್ಡದಾಗಿಲ್ಲ ಮತ್ತು 5ಕ್ಕಿಂತ ದೊಡ್ಡದಾಗಿಲ್ಲ" ಎಂದಾಗುವುದು.

ಒಂದು ಪರ್ಯಾಯವು ನಿಜವಾಗಲು ಅದರ ಯಾವುದೇ ಒಂದು ಬಿಡಿ ಉಕ್ತಿಯು ನಿಜವಾಗಿದ್ದರೂ ಸಾಕು. ಅದರ ನಕಾರವು ನಿಜವಾಗಲು, ನಕಾರಗೊಂಡ ಎರಡು ಬಿಡಿ ಉಕ್ತಿಗಳೂ ನಿಜವಾಗಿರಬೇಕು.

ಪ್ರಮೇಯ 7:  ~ (~$p$) ↔  $p$ ಯು ಒಂದು ನಿತ್ಯಸತ್ಯವಾಗಿದೆ.

**ನಿಜಮೌಲ್ಯಗಳ ಕೋಷ್ಟಕ 10**

| $p$ | ~$p$ | ~(~$p$) | ~(~$p$) ↔ $p$ |
|---|---|---|---|
| T | F | T | T |
| F | T | F | T |

ಮೇಲಿನ ಕೋಷ್ಟಕದಲ್ಲಿ ಗಮನಿಸಬೇಕಾದ ಅಂಶವೆಂದರೆ, ಒಂದನೇ ಮತ್ತು ಮೂರನೇ ಉದ್ದಸಾಲಿನ ನಿಜಮೌಲ್ಯಗಳು ಸಮಾನವಾಗಿರುವುದರಿಂದ ಅವುಗಳು ತಾರ್ಕಿಕವಾಗಿ ಸಮಾನವಾಗಿವೆ ಮತ್ತು ಕೊನೆಯ ಎಲ್ಲಾ ನಿಜಮೌಲ್ಯಗಳು T ಆಗಿರುವುದರಿಂದ ~(~$p$) ↔ $p$ ಒಂದು ನಿತ್ಯಸತ್ಯವಾಗಿದೆ.

ಪ್ರಮೇಯ 8 :  [($p$ → $q$) ↔ (~$q$) → (~$p$)]  ಒಂದು ನಿತ್ಯಸತ್ಯವಾಗಿದೆ.

**ನಿಜಮೌಲ್ಯಗಳ ಕೋಷ್ಟಕ 11**

| $p$ | $q$ | ~$p$ | ~$q$ | $p$ → $q$ | ~$q$ → ~$p$ | ($p$ → $q$) ↔ ~$q$ → ~$p$ |
|---|---|---|---|---|---|---|
| T | T | F | F | T | T | T |
| T | F | F | T | F | F | T |
| F | T | T | F | T | T | T |
| F | F | T | T | T | T | T |

ಮೇಲಿನ ಕೋಷ್ಟಕವನ್ನು ಗಮನಿಸಿದಾಗ, 5ನೇ ಮತ್ತು 6ನೇ ಉದ್ದಸಾಲುಗಳ ನಿಜಮೌಲ್ಯಗಳು ಒಂದೇ ಆಗಿವೆ ಮತ್ತು 7ನೇ ಉದ್ದಸಾಲಿನ ನಿಜಮೌಲ್ಯಗಳೂ T ಆಗಿರುವುದರಿಂದ ( $p$ → $q$) ↔  (~$q$) → (~$p$) ಒಂದು ನಿತ್ಯಸತ್ಯವಾಗಿದೆ.

## ಅಭ್ಯಾಸ - 2

1. ಕೆಳಗೆ ಸೂಚಿಸಿರುವ ಉಕ್ತಿಗಳನ್ನು ಸಾಂಕೇತಿಕವಾಗಿ ಬರೆಯಿರಿ.

   (a) ಶಾರದೆ ಚೆನ್ನಾಗಿ ಹಾಡುತ್ತಾಳೆ ಮತ್ತು ಶಾಂತಲೆ ಚೆನ್ನಾಗಿ ನಾಟ್ಯವಾಡುತ್ತಾಳೆ.

   (b) ಮಳೆ ಬಂದರೆ ಆಗ ಬೆಳೆ ಆಗುತ್ತದೆ.

2. ಕೆಳಗೆ ಸೂಚಿಸಿರುವ ಉಕ್ತಿಗಳನ್ನು ಆಧರಿಸಿ ದತ್ತ ಸಂಯುಕ್ತೋಕ್ತಿಗಳನ್ನು ಸಾಂಕೇತಿಕವಾಗಿ ಬರೆಯಿರಿ.

   $p$ : ಮಕ್ಕಳು ಜಾಣರಾಗುತ್ತಾರೆ.

   $q$ : ಮಕ್ಕಳು ಶಾಲೆಗೆ ಹೋಗುತ್ತಾರೆ.

   $r$ : ಶಾಲೆಗೆ ರಜೆ ನೀಡಲಾಗಿದೆ.

   $s$ : ಅವರು ಸಂತೋಷಪಡುತ್ತಾರೆ.

   (a) ಮಕ್ಕಳು ಶಾಲೆಗೆ ಹೋಗುವುದಿಲ್ಲ ಮತ್ತು ಅವರು ಸಂತೋಷಪಡುತ್ತಾರೆ.

   (b) ಶಾಲೆಗೆ ರಜೆ ನೀಡಲಾದರೆ ಆಗ ಮಕ್ಕಳು ಶಾಲೆಗೆ ಹೋಗುವುದಿಲ್ಲ.

   (c) ಮಕ್ಕಳು ಶಾಲೆಗೆ ಹೋಗುವುದಿಲ್ಲವಾದರೆ ಆಗ ಮಕ್ಕಳು ಜಾಣರಲ್ಲ ಮತ್ತು ಅವರು ಸಂತೋಷಪಡುತ್ತಾರೆ.

   (d) ಮಕ್ಕಳು ಜಾಣರಾಗಿದ್ದರೆ ಮಾತ್ರ ಮಕ್ಕಳು ಶಾಲೆಗೆ ಹೋಗುತ್ತಾರೆ ಮತ್ತು ಶಾಲೆಗೆ ಹೋದರೆ ಮಾತ್ರ ಮಕ್ಕಳು ಜಾಣರಾಗುತ್ತಾರೆ.

3. ಕೆಳಗಿನ ಪ್ರತಿಯೊಂದು ಉಕ್ತಿಯ ನಿಜಮೌಲ್ಯಕೋಷ್ಟಕವನ್ನು ಬರೆಯಿರಿ.

   (i) $\sim (p \rightarrow \sim q)$

   (ii) $\sim p \vee q$

   (iii) $(p \wedge q) \rightarrow (p \vee q)$

   (iv) $\sim (p \wedge q) \vee (q \leftrightarrow p)$

4. ಕೆಳಗಿನ ಸಂಯುಕ್ತೋಕ್ತಿಗಳ ನಕಾರವನ್ನು ಬರೆಯಿರಿ.

(1) $p \vee (q \wedge r)$

(2) $p \wedge (q \rightarrow r)$

(3) $\sim p \rightarrow q$

(4) $\sim p \leftrightarrow [p \wedge (\sim q)]$

5. ಕೆಳಗಿನ ನಿಬಂಧಿತಗಳ ವಿಲೋಮ, ಪ್ರತಿಲೋಮ ಮತ್ತು ಪ್ರತಿಧನಗಳನ್ನು ಬರೆಯಿರಿ.

(1) $\sim p \rightarrow \sim q$ (2) $p \rightarrow (q \rightarrow r)$

6. ಕೆಳಗಿನ ಸಂಯುಕ್ತೋಕ್ತಿಗಳನ್ನು ನಿತ್ಯಸತ್ಯಗಳೆಂದು ಸಾಧಿಸಿ.

(i) $\sim (p \wedge q) \leftrightarrow (\sim p) \vee (\sim q)$

(ii) $\sim (p \rightarrow q) \leftrightarrow p \wedge (\sim q)$

(iii) $[(p \vee q) \wedge (\sim p)] \rightarrow q$

7. $p$ ಉಕ್ತಿಯು $x + 1 = 9$ ಎಂದೂ $q$ ಉಕ್ತಿಯು $x = 6$ ಎಂದೂ ಇದ್ದು $p \rightarrow q$ ಆಗಿದ್ದರೆ, ಇದರ ವಿಲೋಮ ಮತ್ತು ಪ್ರತಿಧನಗಳನ್ನು ಬರೆಯಿರಿ.

8. "$ABCD$ ಚತುರ್ಭುಜದಲ್ಲಿ ವಿರುದ್ಧ ಕೋನಗಳ ಮೊತ್ತವು $180^{\circ}$ ಆಗಿದ್ದರೆ ಮತ್ತು ಆಗಿದ್ದರೆ ಮಾತ್ರ ಆ ಚತುರ್ಭುಜವು ಚಕ್ರೀಯವಾಗಿರುತ್ತದೆ" ಇದರ ನಕಾರವನ್ನು ಬರೆಯಿರಿ.

## ಅಧ್ಯಾಯ - 3

# ಕೋಶಗಳು ಮತ್ತು ನಿರ್ಧಾರಕಗಳು

**3.1 ಕೋಶಗಳು:** *ಗಣವೊಂದರಲ್ಲಿನ $mn$ ಅಂಶಗಳ $m$ ಅಡ್ಡಸಾಲು ಮತ್ತು $n$ ಕಂಬಸಾಲುಗಳಲ್ಲಿನ ಜೋಡಣೆಯನ್ನು $m \times n$ ದರ್ಜೆಯ ಕೋಶವೆಂದು ಕರೆಯುತ್ತೇವೆ. ಕೋಶವನ್ನು ಮಾತೃಕೆ ಎಂದೂ ಕರೆಯುತ್ತೇವೆ.*

ಈ ಕೋಶವನ್ನು

$$A = \begin{bmatrix} a_{11} & a_{12} & \cdots\cdots & a_{1n} \\ a_{21} & a_{22} & \cdots\cdots & a_{2n} \\ a_{m1} & a_{m2} & \cdots\cdots & a_{mn} \end{bmatrix}$$

ಎಂದು ಸೂಚಿಸುತ್ತೇವೆ. ಈ ಕೋಶದಲ್ಲಿನ ಯಾವುದೇ ಅಂಶವನ್ನು $a_{ij}$ ಎಂದು ಸೂಚಿಸುತ್ತೇವೆ. ಅದು $i$ ಅಡ್ಡಸಾಲಿನ ಮತ್ತು $j$ ಕಂಬಸಾಲಿನಲ್ಲಿರುವ ಅಂಶವೆಂದು ಪರಿಗಣಿಸಲಾಗುವುದು.

### ವಿವಿಧ ನಮೂನೆಯ ಕೋಶಗಳು :

1. **ಅಡ್ಡಸಾಲುಕೋಶ:** ಒಂದೇ ಒಂದು ಅಡ್ಡಸಾಲಿರುವ ಕೋಶವನ್ನು ಅಡ್ಡಸಾಲು ಕೋಶವೆಂದು ಕರೆಯುತ್ತೆವೆ.

   **ಉದಾಹರಣೆ :** $A = [\ 1 \quad 2 \quad 3\ ]$

2. **ಕಂಬಸಾಲು ಕೋಶ:** ಒಂದೇ ಒಂದು ಕಂಬ ಸಾಲಿರುವ ಕೋಶವನ್ನು ಕಂಬಸಾಲು ಕೋಶವೆಂದು ಕರೆಯುತ್ತೇವೆ.

   **ಉದಾಹರಣೆ:** $A = \begin{bmatrix} 2 \\ 3 \\ 5 \end{bmatrix}$

3. **ಚೌಕುಳಿ ಕೋಶ:** ಕೋಶವೊಂದರಲ್ಲಿ ಅಡ್ಡಸಾಲುಗಳ ಮತ್ತು ಕಂಬಸಾಲುಗಳ ಸಂಖ್ಯೆ

ಒಂದೇ ಆಗಿದ್ದರೆ ಅಂತಹ ಕೋಶವನ್ನು ಚೌಕುಳಿಕೋಶವೆಂದು ಕರೆಯುತ್ತೆವೆ.

ಉದಾ: $A = \begin{bmatrix} 2 & 4 \\ 6 & 5 \end{bmatrix}$

4. **ಕರ್ಣಕೋಶ:** ಚೌಕುಳಿಕೋಶದಲ್ಲಿ ಪ್ರಧಾನ ಕರ್ಣದ ಮೇಲಿರುವ ಅಂಶಗಳನ್ನು ಹೊರತುಪಡಿಸಿ ಉಳಿದ ಎಲ್ಲ ಅಂಶಗಳು ಸೊನ್ನೆಯಾಗಿದ್ದಲ್ಲಿ ಅಂತಹ ಕೋಶವನ್ನು ಕರ್ಣಕೋಶವೆಂದು ಕರೆಯುತ್ತೇವೆ.

ಉದಾಹರಣೆ: $A = \begin{bmatrix} 4 & 0 & 0 \\ 0 & 3 & 0 \\ 0 & 0 & 7 \end{bmatrix}$

5. **ಏಕಮಾನ ಕೋಶ:** ಕರ್ಣಕೋಶದಲ್ಲಿನ ಪ್ರಧಾನ ಕರ್ಣದ ಎಲ್ಲ ಅಂಶಗಳು 1 ಆಗಿದ್ದಲ್ಲಿ ಅಂತಹ ಕೋಶವನ್ನು ಏಕಮಾನ ಕೋಶವೆಂದು ಕರೆಯುತ್ತೇವೆ.

ಉದಾಹರಣೆ: $A = \begin{bmatrix} 1 & 0 & 0 \\ 0 & 1 & 0 \\ 0 & 0 & 1 \end{bmatrix}$

6. **ಶೂನ್ಯಕೋಶ:** ಕೋಶವೊಂದರಲ್ಲಿನ ಎಲ್ಲ ಅಂಶಗಳು ಶೂನ್ಯವಾಗಿದ್ದಲ್ಲಿ ಅಂತಹ ಕೋಶವನ್ನು ಶೂನ್ಯಕೋಶವೆಂದು ಕರೆಯುತ್ತೇವೆ.

**ಕೋಶಗಳ ಸಂಕಲನ :** $A$ ಮತ್ತು $B$ ಕೋಶಗಳು ಒಂದೇ ದರ್ಜೆಗಳಾದಲ್ಲಿ ಅವುಗಳನ್ನು ಸಂಕಲಿಸಬಹುದು.

ಉದಾಹರಣೆ: $A = \begin{bmatrix} a_1 & b_1 \\ a_2 & b_2 \end{bmatrix}$ ಮತ್ತು $B = \begin{bmatrix} x_1 & y_1 \\ x_2 & y_2 \end{bmatrix}$ ಎಂದಾದರೆ

$A + B = \begin{bmatrix} a_1 + x_1 & b_1 + y_1 \\ a_2 + x_2 & b_2 + y_2 \end{bmatrix}$ ಎಂದಾಗುವುದು.

ಇದೇ ರೀತಿ ಒಂದೇ ದರ್ಜೆಯ ಕೋಶಗಳನ್ನು ವ್ಯವಕಲನ ಮಾಡಬಹುದು.

ಅಂದರೆ, $A-B = \begin{bmatrix} a_1 - x_1 & b_1 - y_1 \\ a_2 - x_2 & b_2 - y_2 \end{bmatrix}$ ಎಂದಾಗುವುದು.

**ಕೋಶಗಳ ಗುಣಾಕಾರ:** *A* ಕೋಶವು $m \times n$ ದರ್ಜೆಯದಾಗಿದ್ದು, *B* ಕೋಶವು $n \times p$ ದರ್ಜೆಯದಾಗಿದ್ದಲ್ಲಿ *AB* ಗುಣಲಬ್ಧವು $m \times n$ ದರ್ಜೆಯ ಕೋಶವಾಗಿರುತ್ತದೆ. ಅಂದರೆ ಕೋಶಗಳೆರಡನ್ನು ಗುಣಿಸಲು ಮೊದಲನೆಯದರ ಕಂಬ ಸಾಲುಗಳ ಸಂಖ್ಯೆಯು ಎರಡನೆಯದರ ಅಡ್ಡಸಾಲುಗಳ ಸಂಖ್ಯೆಗೆ ಸಮನಾಗಿರಬೇಕು.

ಉದಾಹರಣೆ : $A = \begin{bmatrix} a & b \\ c & d \end{bmatrix}_{2x2}$ ಮತ್ತು $B = \begin{bmatrix} x \\ y \end{bmatrix}_{2x1}$ ಆದಲ್ಲಿ ಆಗ

$$AB = \begin{bmatrix} ax + by \\ cx + dy \end{bmatrix}_{2x1}$$ ಎಂದಾಗುವುದು.

**ಸ್ಥಿರ ಸಂಖ್ಯೆಯಿಂದ ಕೋಶದ ಗುಣಾಕಾರ** : *k* ಒಂದು ಸ್ಥಿರ ಸಂಖ್ಯೆಯಾಗಿದ್ದು

$A = \begin{bmatrix} a & b \\ c & d \end{bmatrix}$ ಒಂದು 2x2 ಕೋಶವಾಗಿದ್ದರೆ

$kA = \begin{bmatrix} ka & kb \\ kc & kd \end{bmatrix}$ ಎಂದಾಗುವುದು.

ಅಂದರೆ, *A* ಕೋಶವೊಂದನ್ನು *k* ಸ್ಥಿರ ಸಂಖ್ಯೆಯಿಂದ ಗುಣಿಸಿದಾಗ, ಎಲ್ಲ ಅಂಶಗಳು *k* ಯಿಂದ ಗುಣಿಸಲ್ಪಡುತ್ತವೆ.

## 3.2 ನಿರ್ಧಾರಕಗಳು

$$A = \begin{bmatrix} a_{11} & a_{12} \\ a_{21} & a_{22} \end{bmatrix}$$

ಒಂದು ಚೌಕುಳಿಕೋಶವಾಗಿರಲಿ ಮತ್ತು $\Delta$ ಒಂದು ಎರಡನೇ ದರ್ಜೆಯ ಕೋಶಗಳ ಗಣದಿಂದ ಸಹಜಸಂಖ್ಯೆಗಳ ಗಣವೊಂದಕ್ಕೆ ಚಿತ್ರಿಸುವ ಚಿತ್ರಣವಾಗಿರಲಿ

ಅಂದರೆ $\Delta : M(2, R) \rightarrow R$ ಚಿತ್ರಣವನ್ನು

$$\Delta \begin{bmatrix} a_{11} & a_{12} \\ a_{21} & a_{22} \end{bmatrix} = a_{11}\,a_{22} - a_{12}\,a_{21}$$

ಎಂದು ವ್ಯಾಖ್ಯಾಯಿಸಿ. ಇಂತಹ ಚಿತ್ರಣವನ್ನು ನಿರ್ಧಾರಕ ಚಿತ್ರಣವೆಂದು ಕರೆಯುತ್ತೇವೆ. ಮತ್ತು ನೈಜ ಸಂಖ್ಯೆಯನ್ನು ಚೌಕುಳಿಕೋಶದ ನಿರ್ಧಾರಕವೆಂದು ಕರೆಯುತ್ತೇವೆ.

ಹಾಗೂ ಅದನ್ನು $|A| = \begin{vmatrix} a_{11} & a_{12} \\ a_{21} & a_{22} \end{vmatrix}$ ಎಂದು ಬರೆಯಲಾಗುವುದು.

ಇದೇ ರೀತಿ $\Delta$ ಚಿತ್ರಣವನ್ನು ಮೂರನೇ ದರ್ಜೆಯ ಕೋಶಗಳ ಗಣದಿಂದ ಸಹಜ ಸಂಖ್ಯೆಗಳ ಗಣಕ್ಕೆ ಚಿತ್ರಿಸುವ ಫಲವಾಗಿ, $\Delta : M(3, R) \rightarrow R$ ಅನ್ನು

$$\Delta \begin{bmatrix} a_{11} & a_{12} & a_{13} \\ a_{21} & a_{22} & a_{23} \\ a_{31} & a_{32} & a_{33} \end{bmatrix} = a_{11}(a_{22}\,a_{33} - a_{23}\,a_{32}) - a_{12}(a_{21}\,a_{33} - a_{23}\,a_{31}) + a_{13}(a_{21}\,a_{32} - a_{22}\,a_{31})$$

ಎಂದಾಗುವುದು. ಹಾಗೂ ಈ ನಿರ್ಧಾರಕವನ್ನು ಕೆಳಕಂಡಂತೆ ಸೂಚಿಸಲಾಗುವುದು :

$$\begin{vmatrix} a_{11} & a_{12} & a_{13} \\ a_{21} & a_{22} & a_{23} \\ a_{31} & a_{32} & a_{33} \end{vmatrix}$$

## ನಿರ್ಧಾರಕಗಳ ಗುಣಲಕ್ಷಣಗಳು

1. ನಿರ್ಧಾರಕದ ಅಡ್ಡಸಾಲುಗಳನ್ನು ಮತ್ತು ಕಂಬಸಾಲುಗಳನ್ನು ಅದಲುಬದಲು ಮಾಡಿರುವುದರಿಂದ ನಿರ್ಧಾರಕದ ಬೆಲೆ ವ್ಯತ್ಯಾಸಗೊಳ್ಳುವುದಿಲ್ಲ.

$|A| = \begin{vmatrix} a_1 & b_1 & c_1 \\ a_2 & b_2 & c_2 \\ a_3 & b_3 & c_3 \end{vmatrix}$ ಎಂದಿರಲಿ.

ಆಗ $A = a_1(b_2c_3 - c_2b_3) - b_1(a_2c_3 - c_2a_3) + c_1(a_2b_3 - b_2a_3)$ ಎಂದಾಗುವುದು.

ಈಗ, $|A|$ ನ ಅಡ್ಡಸಾಲುಗಳನ್ನು ಮತ್ತು ಕಂಬಸಾಲುಗಳನ್ನು ಅದಲುಬದಲುಮಾಡಿದ ನಿರ್ಧಾರಕವು $|A'|$ ಎಂದಿರಲಿ. ಅಂದರೆ

$$|A'| = \begin{vmatrix} a_1 & a_2 & a_3 \\ b_1 & b_2 & b_3 \\ c_1 & c_2 & c_3 \end{vmatrix}$$

$|A'|$ ಅನ್ನು ಮೊದಲನೇ ಕಂಬಸಾಲಿನಿಂದ ವ್ಯಾಕೋಚಿಸಿದಾಗ

$|A'| = a_1(b_2c_3-c_2b_3)-b_1(a_2c_3-a_3c_2)+c_1(a_2b_3-b_2a_3)$ ಎಂದಾಗುವುದು. ಇದರಿಂದ $|A| = |A'|$ ಎನ್ನುವುದು ಸಿದ್ಧವಾಗುವುದು.

2. ನಿರ್ಧಾರಕದ ಯಾವುದೇ ಎರಡು ಅಡ್ಡ ಸಾಲುಗಳನ್ನು ಅಥವಾ ಕಂಬಸಾಲುಗಳನ್ನು ಅದಲುಬದಲು ಮಾಡಿದರೆ, ನಿರ್ಧಾರಕದ ಬೆಲೆಯು –1 ರಿಂದ ಗುಣಿಸಲ್ಪಡುತ್ತದೆ.

$$|A| = \begin{vmatrix} a_1 & b_1 & c_1 \\ a_2 & b_2 & c_2 \\ a_3 & b_3 & c_3 \end{vmatrix}$$ ಎಂದಿರಲಿ.

ಆಗ $|A| = a_1(b_2c_3-c_2b_3)-b_1(a_2c_3-c_2a_3)+c_1(a_2b_3-b_2a_3)$ ಎಂದಾಗುವುದು.

ಈಗ, $|A|$ ನ ಮೊದಲನೇ ಮತ್ತು ಎರಡನೇ ಅಡ್ಡಸಾಲುಗಳನ್ನು ಅದಲುಬದಲು ಮಾಡಿದಾಗ

$$\begin{vmatrix} a_2 & b_2 & c_2 \\ a_1 & b_1 & c_1 \\ a_3 & b_3 & c_3 \end{vmatrix}$$

ಎಂದಾಗುವುದು. ಈ ನಿರ್ಧಾರಕವನ್ನು ಎರಡನೇ ಅಡ್ಡಸಾಲಿನಿಂದ ವ್ಯಾಕೋಚಿಸಿದಾಗ

$$\begin{vmatrix} a_2 & b_2 & c_2 \\ a_1 & b_1 & c_1 \\ a_3 & b_3 & c_3 \end{vmatrix} = -a_1(b_2c_3-c_2b_3)+b_1(a_2c_3-c_2a_3)-c_1(a_2b_3-b_2a_3)$$

$$= -[a_1(b_2c_3-c_2b_3)-b_1(a_2c_3-c_2a_3) + c_1(a_2b_3-b_2a_3)]$$

$= -|A|$ ಎಂದಾಗುವುದು.

ಆದ್ದರಿಂದ ಯಾವುದೇ ಎರಡು ಅಡ್ಡಸಾಲು ಅಥವಾ ಕಂಬಸಾಲುಗಳನ್ನು ಅದಲುಬದಲು ಮಾಡಿದಾಗ ನಿರ್ಧಾರಕವು –1 ರಿಂದ ಗುಣಿಸಲ್ಪಡುತ್ತದೆ ಎನ್ನುವುದು ಸಿದ್ಧವಾಗುತ್ತದೆ.

3. ನಿರ್ಧಾರಕದ ಎರಡು ಅಡ್ಡಸಾಲುಗಳ ಅಥವಾ ಎರಡು ಕಂಬಸಾಲುಗಳ ಅಂಶಗಳು ಒಂದೇ ಆಗಿದ್ದಲ್ಲಿ, ಅಂತಹ ನಿರ್ಧಾರಕದ ಬೆಲೆಯು ಶೂನ್ಯವಾಗಿರುತ್ತದೆ.

$$|A| = \begin{vmatrix} a_1 & b_1 & c_1 \\ a_1 & b_1 & c_1 \\ a_3 & b_3 & c_3 \end{vmatrix}$$ ಎಂದಿರಲಿ.

ಈ ನಿರ್ಧಾರಕವನ್ನು ವ್ಯಾಕೋಚಿಸಿದಾಗ

$$\begin{aligned} |A| &= a_1(b_1c_3-c_1b_3)-b_1(a_1c_3-c_1a_3)+c_1(a_1b_3-b_1a_3) \\ &= a_1b_1c_3-a_1c_1b_3-b_1a_1c_3+b_1c_1a_3+c_1a_1b_3-c_1b_1a_3 \\ &= 0 \end{aligned}$$

4. ನಿರ್ಧಾರಕದ ಯಾವುದೇ ಅಡ್ಡಸಾಲಿನ ಅಥವಾ ಕಂಬಸಾಲಿನ ಎಲ್ಲ ಅಂಶಗಳು ಒಂದೇ ಸಂಖ್ಯೆಯಿಂದ ಗುಣಿಸಲ್ಪಟ್ಟರೆ, ನಿರ್ಧಾರಕವು ಆ ಸಂಖ್ಯೆಯಿಂದ ಗುಣಿಸಲ್ಪಡುತ್ತದೆ.

$$|A| = \begin{vmatrix} a_1 & b_1 & c_1 \\ a_2 & b_2 & c_2 \\ a_3 & b_3 & c_3 \end{vmatrix}$$ ಎಂದಿರಲಿ.

ಈ ನಿರ್ಧಾರಕದ ಮೊದಲನೇ ಅಡ್ಡಸಾಲಿನ ಅಂಶಗಳನ್ನು $k$ ನಿಂದ ಗುಣಿಸಿ, ನಂತರ ವ್ಯಾಕೋಚಿಸಿದಾಗ

$$\begin{aligned} \begin{vmatrix} ka_1 & kb_1 & kc_1 \\ a_2 & b_2 & c_2 \\ a_3 & b_3 & c_3 \end{vmatrix} &= ka_1(b_2c_3-c_2b_3)-kb_1(a_2c_3-c_2a_3)+kc_1(a_2b_3-b_2a_3) \\ &= k[a_1(b_2c_3-c_2b_3)-b_1(a_2c_3-c_2a_3)+c_1(a_2b_3-b_2a_3)] \\ &= k|A| \end{aligned}$$ ಎಂದಾಗುವುದು.

5. ನಿರ್ಧಾರಕದ ಒಂದು ಅಡ್ಡಸಾಲಿನ ಅಥವಾ ಕಂಬಸಾಲಿನ ಪ್ರತಿಯೊಂದು ಅಂಶವು ಎರಡು ಅಂಶಗಳ ಮೊತ್ತವಾಗಿದ್ದರೆ, ಅಂತಹ ನಿರ್ಧಾರಕವನ್ನು ಎರಡು ನಿರ್ಧಾರಕಗಳ ಮೊತ್ತವಾಗಿ ಬರೆಯಬಹುದು.

$$|A| = \begin{vmatrix} a_1+x & b_1+y & c_1+z \\ a_2 & b_2 & c_2 \\ a_3 & b_3 & c_3 \end{vmatrix}$$ ಎಂದಿರಲಿ.

ಈ ನಿರ್ಧಾರಕವನ್ನು ವ್ಯಾಕೋಚಿಸಿದಾಗ

$$|A| = (a_1+x)\begin{vmatrix} b_2 & c_2 \\ b_3 & c_3 \end{vmatrix} -(b_1+y)\begin{vmatrix} a_2 & c_2 \\ a_3 & c_3 \end{vmatrix} + (c_1+z)\begin{vmatrix} a_2 & b_2 \\ a_3 & b_3 \end{vmatrix}$$

$$= a_1\begin{vmatrix} b_2 & c_2 \\ b_3 & c_3 \end{vmatrix} - b_1\begin{vmatrix} a_2 & c_2 \\ a_3 & c_3 \end{vmatrix} + c_1\begin{vmatrix} a_2 & b_2 \\ a_3 & b_3 \end{vmatrix}$$

$$+ x\begin{vmatrix} b_2 & c_2 \\ b_3 & c_3 \end{vmatrix} - y\begin{vmatrix} a_2 & c_2 \\ a_3 & c_3 \end{vmatrix} + z\begin{vmatrix} a_2 & b_2 \\ a_3 & b_3 \end{vmatrix}$$

$$= \begin{vmatrix} a_1 & b_1 & c_1 \\ a_2 & b_2 & c_2 \\ a_3 & b_3 & c_3 \end{vmatrix} + \begin{vmatrix} x & y & z \\ a_2 & b_2 & c_2 \\ a_3 & b_3 & c_3 \end{vmatrix}$$ ಎಂದಾಗುವುದು.

6. ನಿರ್ಧಾರಕದ ಒಂದು ಅಡ್ಡಸಾಲಿನಲ್ಲಿರುವ ಅಥವಾ ಕಂಬಸಾಲಿನಲ್ಲಿರುವ ಅಂಶಗಳನ್ನು ಅವುಗಳ ಸಹಗುಣಕಳಿಂದ ಗುಣಿಸಿ ಪಡೆಯುವ ಮೊತ್ತದಿಂದ ನಿರ್ಧಾರಕದ ಬೆಲೆಯು ವ್ಯತ್ಯಾಸವಾಗುವುದಿಲ್ಲ.

$$|A| = \begin{vmatrix} a_1 & b_1 & c_1 \\ a_2 & b_2 & c_2 \\ a_3 & b_3 & c_3 \end{vmatrix}$$ ಎಂದಿರಲಿ.

ಮೊದಲನೆ ಅಡ್ಡಸಾಲಿನ ಅಂಶಗಳಿಗೆ $l$ ನಿಂದ ಗುಣಿಸಲ್ಪಟ್ಟ ಎರಡನೇ ಸಾಲಿನ ಅಂಶಗಳನ್ನು ಮತ್ತು $k$ ನಿಂದ ಗುಣಿಸಲ್ಪಟ್ಟ ಮೂರನೇ ಸಾಲಿನ ಅಂಶಗಳನ್ನು ಕ್ರಮವಾಗಿ ಸಂಕಲಿಸಿದಾಗ

$$\begin{vmatrix} a_1+la_2+ka_3 & b_1+lb_2+kb_3 & c_1+lc_2+kc_3 \\ a_2 & b_2 & c_2 \\ a_3 & b_3 & c_3 \end{vmatrix}$$ ಎಂದಾಗುವುದು.

ಮೇಲಿನ 4ನೇ ಮತ್ತು 5ನೇ ಗುಣಲಕ್ಷಣಗಳನ್ನು ಉಪಯೋಗಿಸಿದಾಗ ನಿರ್ಧಾರಕವು

$$\begin{vmatrix} a_1 & b_1 & c_1 \\ a_2 & b_2 & c_2 \\ a_3 & b_3 & c_3 \end{vmatrix} + l\begin{vmatrix} a_2 & b_2 & c_2 \\ a_2 & b_2 & c_2 \\ a_3 & b_3 & c_3 \end{vmatrix} + k\begin{vmatrix} a_3 & b_3 & c_3 \\ a_2 & b_2 & c_2 \\ a_3 & b_3 & c_3 \end{vmatrix}$$ ಎಂದಾಗುವುದು.

3ನೇ ಗುಣಲಕ್ಷಣವನ್ನು ಉಪಯೋಗಿಸಿದಾಗ

$$\begin{vmatrix} a_1 & b_1 & c_1 \\ a_2 & b_2 & c_2 \\ a_3 & b_3 & c_3 \end{vmatrix} + l(0) + k(0) = |A|$$ ಎಂದಾಗುವುದು.

ಆದ್ದರಿಂದ ನಿರ್ಧಾರಕದ ಬೆಲೆಯು ವ್ಯತ್ಯಾಸವಾಗುವುದಿಲ್ಲ ಎನ್ನುವುದು ಸಿದ್ಧವಾಗುವುದು.

7. $A$ ಮತ್ತು $B$ ಎರಡು $2\times2$ ದರ್ಜೆಯ ಚೌಕುಳಿ ಕೋಶಗಳಾಗಿರಲಿ. ಆಗ $|AB| = |A|\,|B|$ ಎಂದಾಗುವುದು.

$$A = \begin{bmatrix} a & b \\ c & d \end{bmatrix}$$ ಮತ್ತು $$B = \begin{bmatrix} w & x \\ y & z \end{bmatrix}$$ ಎಂದಿರಲಿ.

ಈ ಕೋಶಗಳ ಗುಣಲಬ್ಧವು, $$AB = \begin{bmatrix} aw+by & ax+bz \\ cw+dy & cx+dz \end{bmatrix}$$ ಎಂದಾಗುವುದು.

ಮೇಲಿನ ಕೋಶಗಳ ನಿರ್ಧಾರಕಗಳು

$$|A| = ad - bc, \quad |B| = wz - xy$$

ಮತ್ತು $$\begin{aligned} |AB| &= (aw+by)(cx+dz)-(ax+bz)(cw+dy) \\ &= adwz-adxy-bcwz-bcxy \\ &= ad[wz-xy]-bc[wz-xy] \\ &= (ad-bc)(wz-xy) = |A|\;|B| \end{aligned}$$

ಆದ್ದರಿಂದ $|AB| = |A|\,|B|$ ಎನ್ನುವುದು ಸಿದ್ಧವಾಗುವುದು. ಇದೇ ರೀತಿ $3\times3$ ದರ್ಜೆ ಕೋಶಗಳಿಗೂ ಈ ಗುಣಲಕ್ಷಣವನ್ನು ಸಾಧಿಸಬಹುದು.

ಉದಾಹರಣೆ

1. $$\begin{vmatrix} 13 & 16 & 19 \\ 14 & 17 & 20 \\ 15 & 18 & 21 \end{vmatrix} = 0$$ ಎಂದು ಸಾಧಿಸಿ.

ನಿರ್ಧಾರಕಗಳಲ್ಲಿ ಅಡ್ಡಸಾಲುಗಳನ್ನು $R_1$, $R_2$, $R_3$ ಎಂದು ಮತ್ತು ಕಂಬಸಾಲುಗಳನ್ನು $C_1, C_2, C_3$ ಏಂದು ಸೂಚಿಸುತ್ತೇವೆ ಈ ನಿರ್ಧಾರಕದಲ್ಲಿ $C_2 - C_1$ ಮತ್ತು $C_3 - C_2$ ಮಾಡಿದಾಗ

$$\begin{vmatrix} 13 & 3 & 3 \\ 14 & 3 & 3 \\ 15 & 3 & 3 \end{vmatrix} = 0$$

(ಕಾರಣ $C_2$ ಮತ್ತು $C_3$ ಅಂಶಗಳು ಒಂದೇ ಆಗಿರುವುದರಿಂದ)

2. $\begin{vmatrix} 1 & a & a^2 \\ 1 & b & b^2 \\ 1 & c & c^2 \end{vmatrix} = (a-b)(b-c)(c-a)$ ಎಂದು ಸಾಧಿಸಿ.

ಈ ನಿರ್ಧಾರಕದಲ್ಲಿ $R_1 - R_2$ ಮತ್ತು $R_2 - R_3$ ಮಾಡಿದಾಗ

$$\begin{vmatrix} 0 & a-b & a^2-b^2 \\ 0 & b-c & b^2-c^2 \\ 1 & c & c^2 \end{vmatrix}$$

$$= (a-b)(b-c) \begin{vmatrix} 0 & 1 & a+b \\ 0 & 1 & b+c \\ 1 & c & c^2 \end{vmatrix}$$

ಎಂದಾಗುವುದು. ಈ ಹಂತದಲ್ಲಿ ನಿರ್ಧಾರಕವನ್ನು ಮೊದಲನೇ ಕಂಬಸಾಲಿನಿಂದ ವ್ಯಾಕೋಚಿಸಿದಾಗ

$$(a-b)(b-c)\ [b+c-a-b] = (a-b)(b-c)(c-a)$$

ಎಂದಾಗುವುದು.

## ಅಭ್ಯಾಸ – 3.1

1. $A = \begin{bmatrix} 9 & -2 & 0 \\ 0 & 4 & 1 \\ 2 & 3 & 0 \end{bmatrix}$ ಮತ್ತು $B = \begin{bmatrix} 1 & 0 & 0 \\ 4 & 2 & 3 \\ 7 & 0 & 1 \end{bmatrix}$ ಆದರೆ

   $AB$ ಮತ್ತು $BA$ ಗಳನ್ನು ಕಂಡುಹಿಡಿಯಿರಿ.

2. $\begin{bmatrix} 2x+y \\ 2x-4y \end{bmatrix} = \begin{bmatrix} 1 & 2 \\ 4 & 0 \end{bmatrix} \begin{bmatrix} 1 \\ -1 \end{bmatrix}$ ಆದರೆ $x$ ಮತ್ತು $y$ ಗಳ

   ಬೆಲೆಗಳನ್ನು ಕಂಡುಹಿಡಿಯಿರಿ.

3. $A = [x \quad y \quad z]$, $B = \begin{bmatrix} a & h & g \\ h & b & f \\ g & f & c \end{bmatrix}$ ಮತ್ತು

   $C = \begin{pmatrix} x \\ y \\ z \end{pmatrix}$ ಆದರೆ $A(BC) = (AB)C$ ಎಂದು ಸಾಧಿಸಿ.

4. $\begin{vmatrix} 2 & -1 & 4 \\ 0 & 5 & -4 \\ 4 & -2 & 8 \end{vmatrix} = 0$ ಎಂದು ಸಾಧಿಸಿ.

5. $\begin{vmatrix} 1+a & 1 & 1 \\ 1 & 1+a & 1 \\ 1 & 1 & 1+a \end{vmatrix} = 3a^2+a^3$ ಎಂದು ಸಾಧಿಸಿ.

6. $\begin{vmatrix} 1+a & 1 & 1 \\ 1 & 1+b & 1 \\ 1 & 1 & 1+c \end{vmatrix} = ab+bc+ca+abc$ ಎಂದು ಸಾಧಿಸಿ.

7. $\begin{vmatrix} 3 & 3^2 & 3^3 \\ 3^2 & 3^3 & 3^4 \\ 3^3 & 3^4 & 3^5 \end{vmatrix} = 0$ ಎಂದು ಸಾಧಿಸಿ.

8. $\begin{vmatrix} a-x & a-y & a-z \\ b-x & b-y & b-z \\ c-x & c-y & c-z \end{vmatrix} = 0$ ಎಂದು ಸಾಧಿಸಿ.

9. $\begin{vmatrix} 0 & xy^2 & xz^2 \\ x^2y & 0 & yz^2 \\ x^2z & y^2z & 0 \end{vmatrix} = 2x^3y^3z^3$ ಎಂದು ಸಾಧಿಸಿ.

10. $\begin{vmatrix} p & q+r & 1 \\ q & r+p & 1 \\ r & p+q & 1 \end{vmatrix} = 0$ ಎಂದು ಸಾಧಿಸಿ.

11. $\begin{vmatrix} a+x & a-x & a-x \\ a-x & a+x & a-x \\ a-x & a-x & a+x \end{vmatrix} = 0$ ಆದರೆ x ನ ಬೆಲೆಯನ್ನು ಕಂಡುಹಿಡಿಯಿರಿ.

12. $\begin{vmatrix} a+b+2c & a & b \\ c & b+c+2a & b \\ c & a & c+a+2b \end{vmatrix} = 2(a+b+c)^3$ ಎಂದು ಸಾಧಿಸಿ.

### 3.3.1 ಲಾಘುವ, ಸಹಗುಣಕ ಮತ್ತು ಸಂಗತಕೋಶ

**ಲಾಘುವ:** *A* ಒಂದು ಚೌಕುಳಿಕೋಶವಾಗಿರಲಿ. *A* ನಲ್ಲಿರುವ ಯಾವುದೇ ಒಂದು ಅಂಶದ ಲಾಘುವವು, ಆ ಅಂಶವಿರುವ ಅಡ್ಡಸಾಲು ಮತ್ತು ಕಂಬಸಾಲುಗಳನ್ನು ಹೊರತುಪಡಿಸಿ ಉಳಿದಿರುವ ಉಪಕೋಶದ ನಿರ್ಧಾರಕವಾಗಿರುತ್ತದೆ.

**ಉದಾಹರಣೆ:**

$A = \begin{vmatrix} a_{11} & a_{12} & a_{13} \\ a_{21} & a_{22} & a_{23} \\ a_{31} & a_{32} & a_{33} \end{vmatrix}$ ಎಂದಾದರೆ

$a_{23}$ ಅಂಶದ ಲಾಘುವವು,

$M_{23} = \begin{vmatrix} a_{11} & a_{12} \\ a_{31} & a_{32} \end{vmatrix}$ ಎಂದಾಗುವುದು

ಆದ್ದರಿಂದ $a_{ij}$ ಅಂಶದ ಲಾಘುವವು $M_{ij}$, $i$ ನೇ ಅಡ್ಡಸಾಲು ಮತ್ತು $j$ ನೇ ಕಂಬಸಾಲನ್ನು ಹೊರತುಪಡಿಸಿ ಸಿಗುವ ನಿರ್ಧಾರಕವಾಗಿರುತ್ತದೆ.

**ಸಹಗುಣಕ :**

$$A = \begin{bmatrix} a_{11} & a_{12} & a_{13} \\ a_{21} & a_{22} & a_{23} \\ a_{31} & a_{32} & a_{33} \end{bmatrix}$$ ಎಂದಿರಲಿ.

ಈ ಚೌಕುಳಿಕೋಶದಲ್ಲಿನ $a_{31}$ನ ಲಾಘುವ $M_{31} = \begin{vmatrix} a_{12} & a_{13} \\ a_{22} & a_{23} \end{vmatrix}$

ಎಂದಾಗುವುದು. ಆಗ $(-1)^{3+1} M_{31}$ ಗುಣಲಬ್ಧವನ್ನು $a_{31}$ ಅಂಶದ ***ಸಹಗುಣಕ***ವೆಂದು ಕರೆಯುತ್ತೇವೆ.

ಅಂದರೆ $a_{ij}$ ಅಂಶದ ಲಾಘುವವು $M_{ij}$ ಆದರೆ ಅದರ **ಸಹಗುಣಕವು** $(-1)^{i+j} M_{ij}$ ಎಂದಾಗುವುದು.

**ಸಂಗತಕೋಶ:**

$$A = \begin{bmatrix} a_{11} & a_{12} & a_{13} \\ a_{21} & a_{22} & a_{23} \\ a_{31} & a_{32} & a_{33} \end{bmatrix}$$ ಒಂದು ಚೌಕುಳಿ ಕೋಶವಾಗಿರಲಿ.

ಈ ಕೋಶದ ಸಹಗುಣಕಗಳ ಕೋಶವು $\begin{bmatrix} c_{11} & c_{12} & c_{13} \\ c_{21} & c_{22} & c_{23} \\ c_{31} & c_{32} & c_{33} \end{bmatrix}$ ಎಂದಾದರೆ ಈ ಕೋಶದ

ಅದಲು ಕೋಶವು $\begin{bmatrix} c_{11} & c_{21} & c_{31} \\ c_{12} & c_{22} & c_{32} \\ c_{13} & c_{23} & c_{33} \end{bmatrix}$ ಎಂದಾಗುವುದು. ಈ ಕೋಶವನ್ನು

$A$ ನ ***ಸಂಗತಕೋಶ***ವೆಂದು ಕರೆಯುತ್ತೇವೆ. ಇದನ್ನು ಸಂಕ್ಷಿಪ್ತವಾಗಿ Adj $A$ ಎಂದು ಬರೆಯಲಾಗುವುದು.

## 3.3.2 ವೈಶೇಷಿಕ ಮತ್ತು ಅವೈಶೇಷಿಕ ಕೋಶಗಳು

$A$ ಒಂದು ಚೌಕುಳಿಕೋಶವಾಗಿದ್ದು ಅದರ ನಿರ್ಧಾರಕವು $|A| = 0$ ಆಗಿದ್ದರೆ ಅಂತಹ ಕೋಶವನ್ನು ***ವೈಶೇಷಿಕ ಕೋಶ***ವೆಂದು ಕರೆಯುತ್ತೇವೆ. ಒಂದು ವೇಳೆ $|A| \neq 0$ ಇದ್ದಲ್ಲಿ ಅಂತಹ ಕೋಶವನ್ನು ***ಅವೈಶೇಷಿಕ ಕೋಶ***ವೆಂದು ಕರೆಯುತ್ತೇವೆ.

### 3.3.3 ಕೋಶದ ಪ್ರತಿಲೋಮ

$A$ ಒಂದು ಚೌಕುಳಿ ಕೋಶವಾಗಿದ್ದು, $AB = BA = I$ ಆಗುವಂತೆ ಇನ್ನೊಂದು ಚೌಕುಳಿ ಕೋಶ $B$ ಇದ್ದರೆ. $B$ ಅನ್ನು $A$ನ ಪ್ರತಿಲೋಮವೆಂದು ಕರೆಯುತ್ತೇವೆ. ಇಲ್ಲಿ $I$ ಎಂಬುದು ಅದೇ ದರ್ಜೆಯ ಏಕಮಾನ ಕೋಶ.

ಪ್ರಮೇಯ : $A$ ಒಂದು ಯಾವುದೇ ಚೌಕುಳಿ ಕೋಶವಾಗಿದ್ದರೆ,

$$A(\mathrm{Adj}A) = (\mathrm{Adj}A)A = |A|\ I$$

ಸಾಧನೆ :

$$A = \begin{bmatrix} a_{11} & a_{12} & a_{13} \\ a_{21} & a_{22} & a_{23} \\ a_{31} & a_{32} & a_{33} \end{bmatrix}$$ ಎಂದಿರಲಿ.

$A$ನ ಸಹಗುಣಕ ಕೋಶ $= \begin{bmatrix} c_{11} & c_{12} & c_{13} \\ c_{21} & c_{22} & c_{23} \\ c_{31} & c_{32} & c_{33} \end{bmatrix}$ ಎಂದಾಗುವುದು.

ಆಗ, $A$ನ ಸಂಗತಕೋಶ $= \begin{bmatrix} c_{11} & c_{21} & c_{31} \\ c_{12} & c_{22} & c_{32} \\ c_{13} & c_{23} & c_{33} \end{bmatrix}$ ಎಂದಿರಲಿ.

ಈಗ, $A$ ಮತ್ತು $\mathrm{Adj}A$ ಗಳ ಗುಣಲಬ್ಧವನ್ನು ಪರಿಗಣಿಸಿದಾಗ

$$A(\mathrm{Adj}A) = \begin{bmatrix} |A| & 0 & 0 \\ 0 & |A| & 0 \\ 0 & 0 & |A| \end{bmatrix}$$ ಎಂದಾಗುವುದು

ಅಥವಾ $A(\mathrm{Adj}A) = |A| \begin{bmatrix} 1 & 0 & 0 \\ 0 & 1 & 0 \\ 0 & 0 & 1 \end{bmatrix} = |A|\ I$ ಎಂದಾಗುವುದು

ಇದೇ ರೀತಿ $(\mathrm{Adj}A)A = |A|\ I$ ಎಂದು ಸಾಧಿಸಬಹುದು.

ಆದ್ದರಿಂದ, $A(\mathrm{Adj}A) = (\mathrm{Adj}A)A = |A|\ I$ ಎನ್ನುವುದು ಸಿದ್ಧವಾಗುವುದು.

ಕೋಶದ ಪ್ರತಿಲೋಮದ ಸ್ಪಷ್ಟನೆಗನುಗುಣವಾಗಿ ಯಾವುದೇ $A$ ಎಂಬ ಅವೈಶೇಷಿಕ ಕೋಶಕ್ಕೆ ಅದರ ಪ್ರತಿಲೋಮ ಕೋಶ $B$ ಆಗಿರುವುದಕ್ಕೆ ಇರುವ ನಿಯಮವು

$$AB = BA = I \quad .... (1)$$

ಎಂಬುದನ್ನು ಈಗಾಗಲೇ ತಿಳಿದುಕೊಂಡಿದ್ದೇವೆ. ಹಿಂದಿನ ಪ್ರಮೇಯದಲ್ಲಿ

$$A(\text{Adj}A) = (\text{Adj}A)A = |A| \, I \quad .... (2)$$

ಎನ್ನುವುದು ಸಾಧಿತವಾಗಿದೆ.

ಇಲ್ಲಿ $A$ ಒಂದು ಅವ್ಯೈಶೇಷಿಕ ಕೋಶವಾದರೆ ಆಗ $|A| \neq 0$. ಆದ್ದರಿಂದ ಸಮೀಕರಣ (2)ನ್ನು $|A|$ ನಿಂದ ಭಾಗಿಸಿದಾಗ

$$A\left(\frac{\text{Adj}A}{|A|}\right) = \left(\frac{\text{Adj}A}{|A|}\right) A = I \quad .... (3)$$

ಎಂದಾಗುವುದು

ಸಮೀಕರಣ (1) ಮತ್ತು (3) ಇವುಗಳನ್ನು ಹೋಲಿಸಿದಾಗ $A$ ಕೋಶದ ಪ್ರತಿಲೋಮ $A^{-1}$ ಗೆ ಸೂತ್ರವನ್ನು ಪಡೆಯಬಹುದು. ಅಂದರೆ

$$A^{-1} = \frac{\text{Adj}A}{|A|} \text{ (ಇಲ್ಲಿ } |A| \neq 0)$$

**ಉದಾಹರಣೆಗಳು**

1. $A = \begin{pmatrix} 1 & 1 & 1 \\ 1 & 2 & -3 \\ 2 & -1 & 3 \end{pmatrix}$ ಆದರೆ $A$ಯ ಸಂಗತಕೋಶವನ್ನು ಕಂಡುಹಿಡಿಯಿರಿ.

ಮೊದಲು, ಒಂದನೇ ಅಡ್ಡಸಾಲಿನ ಅಂಶಗಳಿಗೆ ಸಹಗುಣಕಗಳನ್ನು ಕಂಡು ಹಿಡಿಯೋಣ. ಆ ಅಡ್ಡಸಾಲಿನ

ಮೊದಲನೇ ಅಂಶ 1 ರ ಸಹಗುಣಕ $= (-1)^{1+1}(6-3) = 3$

ಎರಡನೇ ಅಂಶ 1 ರ ಸಹಗುಣಕ $= (-1)^{1+2}(3+6) = -9$

ಮೂರನೇ ಅಂಶ 1 ರ ಸಹಗುಣಕ $= (-1)^{1+3}(-1-4) = -5$

ಇದೇ ರೀತಿ, 2ನೇ ಮತ್ತು 3ನೇ ಅಡ್ಡಸಾಲಿನ ಅಂಶಗಳ ಸಹಗುಣಕಗಳು ಕ್ರಮವಾಗಿ $-4, 1, 3$ ಮತ್ತು $-5, 4, 1$ ಆಗಿರುತ್ತವೆ. ಆದ್ದರಿಂದ $A$ ನ ಸಂಗತಕೋಶವು

$$\text{Adj } A = \begin{bmatrix} 3 & -4 & -5 \\ -9 & 1 & 4 \\ -5 & 3 & 1 \end{bmatrix}$$ ಆಗುತ್ತದೆ

(ಅಂದರೆ ಸಂಗತಕೋಶವು ಸಹಗುಣಕಗಳ ಕೋಶದ *ಅವಲು ಕೋಶವಾಗಿರುತ್ತದೆ*).

**2.** $$A = \begin{pmatrix} 2 & -2 & 4 \\ 2 & 3 & 2 \\ -1 & 1 & -1 \end{pmatrix}$$ ಕೋಶದ ಪ್ರತಿಲೋಮಕೋಶವನ್ನು ಕಂಡುಹಿಡಿಯಿರಿ.

ಮೊದಲು $|A|$ ಅನ್ನು ಕಂಡುಹಿಡಿಯೋಣ:

$$|A| = 2(-5)+2(0)+4(5)= 10$$

ಎಂದಾಗುತ್ತದೆ. ಆನಂತರ

$$\text{Adj}A = \begin{pmatrix} -5 & 2 & -16 \\ 0 & 2 & 4 \\ 5 & 0 & 10 \end{pmatrix}$$ ಎಂದಾಗುತ್ತದೆ.

ಆದ್ದರಿಂದ, $A^{-1} = \dfrac{\text{Adj}A}{|A|}$ ಸೂತ್ರದ ಪ್ರಕಾರ

$$A^{-1} = \begin{pmatrix} -1/2 & 1/5 & -8/5 \\ 0 & 1/5 & 2/5 \\ 1/2 & 0 & 1 \end{pmatrix}$$

ಎಂದಾಗುತ್ತದೆ.

# ಅಭ್ಯಾಸ – 3.2

I. ಕೆಳಗೆ ಸೂಚಿಸಿರುವ ಕೋಶಗಳ ಸಂಗತಕೋಶಗಳನ್ನು ಕಂಡುಹಿಡಿಯಿರಿ.

(1) $\begin{pmatrix} 1 & 1 & 2 \\ 2 & -1 & 1 \\ 2 & 2 & 1 \end{pmatrix}$ (2) $\begin{pmatrix} -1 & -2 & -2 \\ 2 & 1 & -2 \\ 2 & -2 & 1 \end{pmatrix}$ (3) $\begin{pmatrix} 1 & 2 & 3 \\ 3 & 4 & 5 \\ 6 & 7 & 9 \end{pmatrix}$

II ಕೆಳಗೆ ಸೂಚಿಸಿರುವ ಕೋಶಗಳ ಪ್ರತಿಲೋಮಗಳನ್ನು ಕಂಡುಹಿಡಿಯಿರಿ ಮತ್ತು $A(\text{Adj}A) = (\text{Adj}A)A = |A|\,I$ ಎನ್ನುವುದನ್ನು ಸಾಧಿಸಿ.

(1) $\begin{pmatrix} 1 & -2 & -1 \\ 2 & 3 & 1 \\ 0 & 5 & -2 \end{pmatrix}$ (2) $\begin{pmatrix} 2 & 1 & 2 \\ 2 & 2 & 1 \\ 1 & 2 & 2 \end{pmatrix}$ (3) $\begin{pmatrix} 3 & -3 & 4 \\ 2 & -3 & 4 \\ 0 & -1 & 1 \end{pmatrix}$

## 3.4 ಸರಳ ಸಮೀಕರಣಗಳ ಪರಿಹಾರ

(i) ಕೋಶ ಪದ್ಧತಿ (ii) ಕ್ರೇಮರ್‌ನ ನಿಯಮ.

**3.4.1 ಕೋಶ ಪದ್ಧತಿ** : $x$, $y$, $z$ ನಲ್ಲಿರುವ ಸರಳ ಸಮೀಕರಣಗಳನ್ನು

$$a_1x+b_1y+c_1z = d_1$$

$$a_2x+b_2y+c_2z = d_2$$

$$a_3x+b_3y+c_3z = d_3$$

ಎಂದು ಪರಿಗಣಿಸೋಣ.

$x,y,z$ ಗಳ ಸಹಾಂಕಗಳ ಕೋಶ $A = \begin{pmatrix} a_1 & b_1 & c_1 \\ a_2 & b_2 & c_2 \\ a_3 & b_3 & c_3 \end{pmatrix}$

ಸ್ಥಿರಾಂಕಗಳ ಕೋಶ $B = \begin{pmatrix} d_1 \\ d_2 \\ d_3 \end{pmatrix}$ ಎಂದೂ ಮತ್ತು ಚರಾಂಕಗಳ ಕೋಶ

$$X = \begin{pmatrix} x \\ y \\ z \end{pmatrix}$$ ಆಗಿರಲಿ.

ಆಗ ಮೇಲಿನ ಸಮೀಕರಣಗಳನ್ನು ಒಟ್ಟಾಗಿ $AX=B$ ಎಂದು ಬರೆಯಬಹುದು. ಇದನ್ನು ***ಕೋಶ ಸಮೀಕರಣ***ವೆಂದು ಕರೆಯುತ್ತೇವೆ. ಈ ಸಮೀಕರಣವನ್ನು $A^{-1}$ ನಿಂದ ಗುಣಿಸಿದಾಗ

$$A^{-1}\ (AX) = A^{-1}\ (B)$$

ಅಥವಾ $(A^{-1}\ A)\ X = A^{-1}B$

ಅಥವಾ $IX = A^{-1}\ B$

ಆದ್ದರಿಂದ $X = A^{-1}\ B$

ಎಂದಾಗುವುದು. ಈ ಸಮೀಕರಣದಿಂದ $x$, $y$, $z$ ಗಳ ಬೆಲೆಯನ್ನು ಕಂಡುಹಿಡಿಯಬಹುದು.

**ಉದಾಹರಣೆ:** $x+y+z = 6,\ x-y+z = 2,\ 2x+y-z = 1$

ಈ ಸಮೀಕರಣಗಳ ಪರಿಹಾರವನ್ನು ಕಂಡುಹಿಡಿಯಿರಿ.

ಇಲ್ಲಿ $A = \begin{pmatrix} 1 & 1 & 1 \\ 1 & -1 & 1 \\ 2 & 1 & -1 \end{pmatrix},\ X = \begin{pmatrix} x \\ y \\ 2 \end{pmatrix},\quad B = \begin{pmatrix} 6 \\ 2 \\ 1 \end{pmatrix}$

$\therefore |A| = 1(0)-1(-3)+1(3) = 6$ ಆಗುವುದು.

ಮತ್ತು $\text{Adj } A = \begin{pmatrix} 0 & 2 & 2 \\ 3 & -3 & 0 \\ 3 & 1 & -2 \end{pmatrix}$ ಎಂದಾಗುವುದು.

ಆಗ $X = A^{-1}\ B = \dfrac{\text{Adj}A}{|A|}\ B$

$$\therefore \begin{pmatrix} x \\ y \\ z \end{pmatrix} = \frac{1}{6} \begin{pmatrix} 0 & 2 & 2 \\ 3 & -3 & 0 \\ 3 & 1 & -2 \end{pmatrix} \begin{pmatrix} 6 \\ 2 \\ 1 \end{pmatrix} = \begin{pmatrix} 1 \\ 2 \\ 3 \end{pmatrix}$$

ಆದ್ದರಿಂದ $x = 1,\ y = 2,\ z = 3$ ಆಗುವುದು.

**3.4.2 ಕ್ರೇಮರ್‌ನ ನಿಯಮ:** $x$, $y$, $z$ ನಲ್ಲಿರುವ ಸರಳ ಸಮೀಕರಣಗಳನ್ನು

$$a_1x+b_1y+c_1z = d_1$$

$$a_2x+b_2y+c_2z = d_2$$

$$a_3x+b_3y+c_3z = d_3$$

ಎಂದು ಪರಿಗಣಿಸೋಣ.

$x,y,z$ ನ ಸಹಾಂಕಗಳ ನಿರ್ಧಾರಕ $\Delta = \begin{vmatrix} a_1 & b_1 & c_1 \\ a_2 & b_2 & c_2 \\ a_3 & b_3 & c_3 \end{vmatrix}$ ಎಂದು ಸೂಚಿಸಿ

$$\Delta_1 = \begin{vmatrix} d_1 & b_1 & c_1 \\ d_2 & b_2 & c_2 \\ d_3 & b_3 & c_3 \end{vmatrix}$$

ಎಂಬುದಾಗಿ $\Delta$ದಲ್ಲಿನ ಮೊದಲನೇ ಕಂಬಸಾಲಿನ ಅಂಶಗಳ ಬದಲಾಗಿ ಸ್ಥಿರಾಂಕಗಳ ಕಂಬಸಾಲನ್ನು ಪರಿಗಣಿಸುವುದರಿಂದ ಪಡೆಯಬಹುದು.

ಇದೇ ರೀತಿ $\Delta_2$, $\Delta_3$ ನಿರ್ಧಾರಕಗಳನ್ನು ಕ್ರಮವಾಗಿ $\Delta$ದಲ್ಲಿನ ಎರಡನೇ ಮತ್ತು ಮೂರನೇ ಕಂಬಸಾಲುಗಳ ಅಂಶಗಳ ಬದಲಾಗಿ ಸ್ಥಿರಾಂಕಗಳನ್ನು ಪರಿಗಣಿಸಿದಾಗ

$$\Delta_2 = \begin{vmatrix} a_1 & d_1 & c_1 \\ a_2 & d_2 & c_2 \\ a_3 & d_3 & c_3 \end{vmatrix} \quad \text{ಮತ್ತು} \quad \Delta_3 = \begin{vmatrix} a_1 & b_1 & d_1 \\ a_2 & b_2 & d_2 \\ a_3 & b_3 & d_3 \end{vmatrix}$$

ಎಂದಾಗುವುದು. ಆಗ $x$, $y$, $z$ ಗಳ ಬೆಲೆಗಳನ್ನು

$$x = \frac{\Delta_1}{\Delta} \quad , \quad y = \frac{\Delta_2}{\Delta} \quad \text{ಮತ್ತು} \quad z = \frac{\Delta_3}{\Delta}$$

ಈ ಸೂತ್ರಗಳಿಂದ ಪಡೆಯಬಹುದು.

ಉದಾಹರಣೆ: $x+y+z = 6$

$x+2y+3z = 14$

$-x+y-z = -2$

ಈ ಸಮೀಕರಣಗಳ ಪರಿಹಾರವನ್ನು ಕಂಡುಹಿಡಿಯಿರಿ.

ಕೊಟ್ಟಿರುವ ಸಮೀಕರಣಗಳಿಗೆ ಸಂಬಂಧಿಸಿದ ನಿರ್ಧಾರಕಗಳು ಹೀಗಿವೆ:

$$\Delta = \begin{vmatrix} 1 & 1 & 1 \\ 1 & 2 & 3 \\ -1 & 1 & -1 \end{vmatrix} = 1(-5)-1(2)+1(3) = -4$$

$$\Delta_1 = \begin{vmatrix} 6 & 1 & 1 \\ 14 & 2 & 3 \\ -2 & 1 & -1 \end{vmatrix} = 6(-5)-1(-8)+1(18) = -4$$

$$\Delta_2 = \begin{vmatrix} 1 & 6 & 1 \\ 1 & 14 & 3 \\ -1 & -2 & -1 \end{vmatrix} = 1(-8)-6(2)+1(12) = -8$$

$$\Delta_3 = \begin{vmatrix} 1 & 1 & 6 \\ 1 & 2 & 14 \\ -1 & 1 & -2 \end{vmatrix} = 1(-18)-1(12)+6(3) = -12$$

ಈಗ ಕ್ರೇಮರ್‌ನ ನಿಯಮಕ್ಕನುಗುಣವಾಗಿ

$$x = \frac{\Delta_1}{\Delta} = \frac{-4}{-4} = 1, \quad y = \frac{\Delta_2}{\Delta} = \frac{-8}{-4} = 2,$$

$$z = \frac{\Delta_3}{\Delta} = \frac{-12}{-4} = 3$$

ಎಂದಾಗುವುದು.

**ಸೂಚನೆ :** **ಗೇಬ್ರಿಯಲ್ ಕ್ರೇಮರ್** (1704–1752) ಎಂಬಾತನು ಸ್ವಿಜರ್ಲ್ಯಾಂಡಿನ ಗಣಿತಜ್ಞ. ಜಿನಿವಾದಲ್ಲಿ 1750ರಲ್ಲಿ ಪ್ರಕಟವಾದ ವಕ್ರರೇಖೆಗಳ ಸಿದ್ಧಾಂತಕ್ಕೆ ಸಂಬಂಧಿಸಿದ ಈತನ ಪುಸ್ತಕವು ಪ್ರಖ್ಯಾತವಾಯಿತು.

## ಅಭ್ಯಾಸ – 3.3

I ಕೆಳಗಿನ ಸರಳ ಸಮೀಕರಣಗಳ ಪರಿಹಾರಗಳನ್ನು ಕೋಶಪದ್ಧತಿಯಿಂದ ಕಂಡುಹಿಡಿಯಿರಿ.

(1) $x+2y+3z = 14$
$2x-y+5z = 15$
$3x-2y-4z = -13$

(2) $4x+y = 7$
$3y+4z = 5$
$3z+5x = 2$

(3) $x+2y+3z = 6$
$2x+4y+2z = 7$
$3x+2y+9z = 16$

(4) $x-3y+2z = 0$
$2x+5y+z = 1$
$3x+y-2z = 2$

II ಕೆಳಗಿನ ಸರಳ ಸಮೀಕರಣಗಳ ಪರಿಹಾರಗಳನ್ನು ಕ್ರೇಮರ್‌ನ ನಿಯಮದಂತೆ ಕಂಡುಹಿಡಿಯಿರಿ.

(1) $2x+3y-4z = -8$
$3x+2y+4z = 3$
$5x-4y+5z = 18$

(2) $5x-3y+9 = 0$
$8x+14y+5 = 0$

(3) $4x+y = 7$
$3y+4z = 5$
$3z+5x = 2$

(4) $x+y+z = 4$
$2x+5y-2z = 3$
$3x+7y-7z = 4$

## 3.5 ಚೌಕುಳಿ ಕೋಶದ ಲಾಕ್ಷಣಿಕ ಸಮೀಕರಣ ಮತ್ತು ಅದರ ಮೂಲಗಳು

$A$ ಯಾವುದೇ ಒಂದು ಚೌಕುಳಿ ಕೋಶವಾಗಿದ್ದಾಗ $A-\lambda I$ ಅನ್ನು ಅದರ ***ಲಾಕ್ಷಣಿಕಕೋಶ***ವೆಂದೂ, $|A-\lambda I| = 0$ ಆ ಕೋಶದ ***ಲಾಕ್ಷಣಿಕ ಸಮೀಕರಣ***ವೆಂದೂ ಕರೆಯುತ್ತೇವೆ. ಈ ಸಮೀಕರಣದ ಮೂಲಗಳು $\lambda_1, \lambda_2$ .... ಗಳನ್ನು ***ಲಾಕ್ಷಣಿಕ ಮೂಲ***ಗಳೆಂದು ಕರೆಯುತ್ತೇವೆ. ಈ ಮೂಲಗಳನ್ನು ಗುಪ್ತಮೂಲ, ***ಆಯಿಗನ್ ವ್ಯಾಲ್ಯೂಸ್*** ಎಂದೂ ಕರೆಯುತ್ತೇವೆ.

### 3.5.1 ಕೇಲಿ–ಹ್ಯಾಮಿಲ್ಟನ್ ಪ್ರಮೇಯ : *ಪ್ರತಿ ಚೌಕುಳಿಕೋಶವು ತನ್ನದೇ ಆದ ಲಾಕ್ಷಣಿಕ ಸಮೀಕರಣವನ್ನು ತೃಪ್ತಿಗೊಳಿಸುವುದು.*

ಇಲ್ಲಿ ಎರಡನೇ ದರ್ಜೆ ಮತ್ತು ಮೂರನೇ ದರ್ಜೆ ಕೋಶಗಳಿಗೆ ಕೇಲಿ–ಹ್ಯಾಮಿಲ್ಟನ್ ಪ್ರಮೇಯವನ್ನು ಸಾಧಿಸೋಣ :

(i) $A$ ಒಂದು ಎರಡನೇ ದರ್ಜೆಯ ಕೋಶವಾಗಿರಲಿ.

ಅಂದರೆ, $A = \begin{bmatrix} a_1 & b_1 \\ a_2 & b_2 \end{bmatrix}$ ಎಂದು ಮತ್ತು ಏಕಮಾನ ಕೋಶ, $I = \begin{bmatrix} 1 & 0 \\ 0 & 1 \end{bmatrix}$

ಆಗಿರಲಿ. $A$ ಕೋಶದ ಲಾಕ್ಷಣಿಕ ಸಮೀಕರಣವು

$\left| A - \lambda I \right| = 0$ ಎಂದಾಗುವುದು.

ಅಂದರೆ, $\begin{vmatrix} a_1-\lambda & b_1 \\ a_2 & b_2-\lambda \end{vmatrix} = 0$ ಎಂದು. ಇದನ್ನು ವ್ಯಾಕೋಚಿಸಿದಾಗ

$$(a_1-\lambda)\ (b_2-\lambda) - a_2\ b_1 = 0$$

ಅಥವಾ $\lambda^2 - \lambda\ (a_1-b_2)+a_1\ b_2-b_1\ a_2 = 0$

ಎಂದಾಗುವುದು. ಇದಕ್ಕನುಗುಣವಾಗಿ $A$ ಕೋಶವನ್ನೊಳಗೊಂಡ ಸಮೀಕರಣವು

$$A^2-A(a_1-b_2)+I\ (a_1\ b_2-b_1\ a_2) = 0 \qquad \text{.... (1)}$$

ಎಂದಾಗುವುದು. ಸಮೀಕರಣ (1)ನ್ನು ಸಾಧಿಸಬೇಕು. ಸಮೀಕರಣ (1) ರ ಎಡಬದಿಯ ಪದಗಳನ್ನು ಗಣನೆಗೆ ತೆಗೆದುಕೊಳ್ಳೋಣ; ಅಂದರೆ

$$\begin{bmatrix} a_1^2+b_1a_2 & a_1\ b_1+b_1\ b_2 \\ a_2\ a_1+b_2a_2 & a_2\ b_1+b_2^2 \end{bmatrix} - \begin{bmatrix} a_1^2+a_1b_2 & b_1a_1+b_1\ b_2 \\ a_2\ a_1+b_2a_2 & a_1\ b_2+b_2^2 \end{bmatrix} + \begin{bmatrix} a_1\ b_2-b_1a_2 & 0 \\ 0 & a_1\ b_2-b_1\ a_2 \end{bmatrix}$$

$$= \begin{bmatrix} 0 & 0 \\ 0 & 0 \end{bmatrix}$$

ಇದು ಸಮೀಕರಣ (1) ರ ಬಲಬದಿಗೆ ಸಮಾನಾಗಿರುವುದರಿಂದ, ಕೇಲಿ-ಹ್ಯಾಮಿಲ್ಟನ್ ಪ್ರಮೇಯವು ಸಾಧಿತವಾಗಿದೆ.

(ii) ಇದೇ ರೀತಿ, $A$ ಒಂದು ಮೂರನೇ ದರ್ಜೆಯ ಕೋಶವಾಗಿರಲಿ ಮತ್ತು $I$ ಒಂದು ಮೂರನೇ ದರ್ಜೆಯ ಏಕಮಾನ ಕೋಶವಾಗಿರಲಿ. $A$ ಕೋಶದ ಲಾಕ್ಷಣಿಕ ಸಮೀಕರಣವು $|A-\lambda I| = 0$ ಎಂದಾಗುವುದು.

ಅಂದರೆ $A = \begin{bmatrix} a_1 & b_1 & c_1 \\ a_2 & b_2 & c_2 \\ a_3 & b_3 & c_3 \end{bmatrix}$ ಮತ್ತು $I = \begin{bmatrix} 1 & 0 & 0 \\ 0 & 1 & 0 \\ 0 & 0 & 1 \end{bmatrix}$ ಆದಾಗ

$$| A - \lambda I | = \begin{bmatrix} a_1-\lambda & b_1 & c_1 \\ a_2 & b_2-\lambda & c_2 \\ a_3 & b_3 & c_3-\lambda \end{bmatrix} = 0$$ ಎಂದಾಗುವುದು

ಇದನ್ನು ವ್ಯಾಕೋಚಿಸಿದಾಗ

$$-\lambda^3+\lambda^2(b_2+c_3)+\lambda(-a_2 b_2-a_2 c_3-b_2 c_3+b_3 c_2 b_1 a_2+c_1 a_3)$$
$$+(a_1 b_2 c_3-a_1 b_3 c_2-b_1 a_2 c_3+b_1 c_2 a_3+c_1 a_2 b_3-c_1 a_3 b_3) = 0$$

ಅಥವಾ $\lambda^3-\lambda^2(b_2+c_3)-\lambda(-a_2 b_2-a_2 c_3-b_2 c_3+b_3 c_2 b_1 a_2+c_1 a_3)$
$$-(a_1 b_2 c_3-a_1 b_3 c_2-b_1 a_2 c_3+b_1 c_2 a_3+c_1 a_2 b_3-c_1 a_3 b_3) = 0$$

ಎಂದಾಗುವುದು. ಹಿಂದಿನ ಸಾಧನೆಯ ಪ್ರಕಾರ (ಎರಡನೇ ದರ್ಜೆಯ ಕೋಶದಲ್ಲಿ ಮಾಡಿರುವಂತೆ)

$$A^3-A^2(b_2+c_3)-A(-a_2 b_2-a_2 c_3-b_2 c_3+b_3 c_2 b_1 a_2+c_1 a_3)$$
$$-(a_1 b_2 c_3-a_1 b_3 c_2-b_1 a_2 c_3+b_1 c_2 a_3+c_1 a_2 b_3-c_1 a_3 b_3) = 0$$

ಎಂದು ಸಾಧಿಸಬಹುದು.

## ಉದಾಹರಣೆಗಳು

1. $$A = \begin{bmatrix} 0 & 1 & 2 \\ 1 & 0 & -1 \\ 2 & -1 & 0 \end{bmatrix}$$

ಕೋಶದ ಲಾಕ್ಷಣಿಕ ಮೂಲಗಳನ್ನು ಕಂಡುಹಿಡಿಯಿರಿ.

ದತ್ತಕೋಶದ ಲಾಕ್ಷಣಿಕ ಸಮೀಕರಣವು, $| A - \lambda I | = 0$ ಆಗಿರುತ್ತದೆ. ಅಂದರೆ

$$\begin{vmatrix} -\lambda & 1 & 2 \\ 1 & -\lambda & -1 \\ 2 & -1 & -\lambda \end{vmatrix} = 0$$

ಅಥವಾ $\lambda^3 - 6\lambda + 4 = 0$

ಅಥವಾ $(\lambda-2)(\lambda^2+2\lambda-2) = 0$

ಆದ್ದರಿಂದ $A$ನ ಲಾಕ್ಷಣಿಕ ಮೂಲಗಳು $2, -1 \pm \sqrt{3}$ ಆಗಿರುತ್ತವೆ.

2.

$$A = \begin{bmatrix} 1 & 2 & 3 \\ 0 & -4 & 2 \\ 0 & 0 & 7 \end{bmatrix}$$

ಈ ಕೋಶದ ಲಾಕ್ಷಣಿಕ ಮೂಲಗಳನ್ನು ಕಂಡುಹಿಡಿಯಿರಿ.

$A$ ಕೋಶದ ಲಾಕ್ಷಣಿಕ ಸಮೀಕರಣವು $|A - \lambda I| = 0$ ಆಗಿರುತ್ತದೆ. ಅಂದರೆ

$$\begin{vmatrix} 1-\lambda & 2 & 3 \\ 0 & -4-\lambda & 2 \\ 0 & 0 & 7-\lambda \end{vmatrix} = 0$$

ಅಥವಾ $(1-\lambda)\ (-4-\lambda)\ (7-\lambda) = 0$ ಎಂದಾಗುತ್ತದೆ.

ಆದ್ದರಿಂದ $A$ನ ಲಾಕ್ಷಣಿಕ ಮೂಲಗಳು 1, –4, 7 ಆಗಿರುತ್ತವೆ.

### 3.5.2 ಕೇಲಿ–ಹ್ಯಾಮಿಲ್ಟನ್ ಪ್ರಮೇಯದಿಂದ ಕೋಶದ ಪ್ರತಿಲೋಮ

$A$ ಒಂದು ಎರಡನೇ ದರ್ಜೆಯ ಕೋಶವಾಗಿರಲಿ. ಅಂದರೆ

$$A = \begin{bmatrix} a_1 & b_1 \\ a_2 & b_2 \end{bmatrix} \quad \text{ಮತ್ತು } I = \begin{bmatrix} 1 & 0 \\ 0 & 1 \end{bmatrix} \text{ ಆಗಿರಲಿ.}$$

ಆಗ ಇದರ ಲಾಕ್ಷಣಿಕ ಸಮೀಕರಣವು, $|(A - \lambda I)| = 0$. ಅಂದರೆ

$$\begin{vmatrix} a_1-\lambda & b_1 \\ a_2 & b_2-\lambda \end{vmatrix} = 0$$

ಅಥವಾ $\lambda^2-\lambda\ (a_1 - b_2)\ + a_1\ b_2 - b_1\ a_2 = 0$

ಎಂದಾಗುವುದು. ಈಗ, ಕೇಲಿ–ಹ್ಯಾಮಿಲ್ಟನ್ ಪ್ರಮೇಯಕ್ಕೆ ಅನುಗುಣವಾಗಿ, $A$ ಕೋಶವನ್ನೊಳಗೊಂಡ ಸಮೀಕರಣವು

$$A^2 - A\ (a_1 - b_2) + I\,(a_1\, b_2 - b_1\, a_2) = 0$$

ಎಂದಾಗುವುದು. ಈ ಸಮೀಕರಣವನ್ನು $A^{-1}$ ಇಂದ ಗುಣಿಸಿದಾಗ

$$A + A^{-1}(a_1 b_2 - b_1 a_2) = 0$$

ಅಥವಾ $$A^{-1} = \frac{-1}{(a_1 b_2 - b_1 a_2)} A$$

ಎಂದಾಗುವುದು. ಈ ರೀತಿ, $A^{-1}$ ಅನ್ನು ಪಡೆಯಬಹುದು. ಅದೇ ವಿಧಾನವನ್ನನುಸರಿಸಿ ಮೂರನೇ ದರ್ಜೆ ಕೋಶದ ಪ್ರತಿಲೋಮವನ್ನು ಕಂಡುಹಿಡಿಯಬಹುದು.

**ಉದಾಹರಣೆ :**

$$A = \begin{bmatrix} 1 & 2 & 2 \\ 0 & 2 & 1 \\ 2 & 0 & 3 \end{bmatrix}$$

ಆಗಿರಲಿ. ಕೇಲಿ–ಹ್ಯಾಮಿಲ್ಟನ್ ಪ್ರಮೇಯವನ್ನು ಉಪಯೋಗಿಸಿ, $A$ನ ಪ್ರತಿಲೋಮವನ್ನು ಕಂಡುಹಿಡಿಯಿರಿ.

ಈ ಕೋಶದ ಲಾಕ್ಷಣಿಕ ಸಮೀಕರಣವು $|A - \lambda I| = 0$

ಅಂದರೆ, $\lambda^3 - 6\lambda^2 + 7\lambda + 2 = 0$

ಕೇಲಿ–ಹ್ಯಾಮಿಲ್ಟನ್ ಪ್ರಮೇಯದ ಮೇರೆಗೆ

$$A^3 - 6A^2 + 7A + 2I = 0$$

ಎಂದಾಗುವುದು. ಇದನ್ನು $A^{-1}$ ನಿಂದ ಗುಣಿಸಿದಾಗ

$$A^2 - 6A + 7I + 2A^{-1} = 0$$

ಅಥವಾ $$A^{-1} = \frac{1}{2}[-A^2 + 6A - 7I]$$

ಎಂದಾಗುವುದು. ಇದನ್ನು ಸರಳೀಕರಿಸಿದಾಗ

$$A^{-1} = \frac{1}{2}\begin{bmatrix} -6 & 0 & 4 \\ -2 & 1 & 1 \\ 4 & 0 & -2 \end{bmatrix}$$ ಎಂದಾಗುವುದು.

## ಅಭ್ಯಾಸ – 3.4

1. $$A = \begin{bmatrix} 8 & -6 & 2 \\ -6 & 7 & -4 \\ 2 & -4 & 3 \end{bmatrix}$$

ಈ ಕೋಶದ ಲಾಕ್ಷಣಿಕ ಮೂಲಗಳನ್ನು ಕಂಡುಹಿಡಿಯಿರಿ.

2. ಕೆಳಗಿನ ಕೋಶಗಳು ಕೇಲಿ–ಹ್ಯಾಮಿಲ್ಟನ್ ಪ್ರಮೇಯವನ್ನು ತೃಪ್ತಿಗೊಳಿಸುತ್ತವೆ ಎಂದು ಸಾಧಿಸಿ.

(i) $\begin{bmatrix} 2 & 2 & 1 \\ 1 & 3 & 1 \\ 1 & 2 & 2 \end{bmatrix}$ (ii) $\begin{bmatrix} 0 & c & -b \\ -c & a & a \\ b & -a & 0 \end{bmatrix}$

(iii) $\begin{bmatrix} 1 & 0 & 2 \\ 0 & 2 & 1 \\ 2 & 0 & 3 \end{bmatrix}$ (iv) $\begin{bmatrix} 0 & 0 & 1 \\ 3 & 1 & 0 \\ -2 & 1 & 4 \end{bmatrix}$

3. ಕೇಲಿ–ಹ್ಯಾಮಿಲ್ಟನ್ ಪ್ರಮೇಯವನ್ನು ಉಪಯೋಗಿಸಿಕೊಂಡು ಕೆಳಗಿನ ಕೋಶಗಳ ಪ್ರತಿಲೋಮ ಕೋಶಗಳನ್ನು ಕಂಡುಹಿಡಿಯಿರಿ.

(i) $\begin{bmatrix} 2 & -1 & 1 \\ -1 & 2 & -1 \\ 1 & -1 & 2 \end{bmatrix}$ (ii) $\begin{bmatrix} 1 & 2 & 1 \\ 0 & 1 & 1 \\ 3 & -1 & 1 \end{bmatrix}$

(iii) $\begin{bmatrix} 0 & 0 & 1 \\ 3 & 1 & 0 \\ -2 & 1 & 4 \end{bmatrix}$ (iv) $\begin{bmatrix} 0 & 1 & 2 \\ 2 & -3 & 0 \\ 1 & 1 & -1 \end{bmatrix}$

# ಅಧ್ಯಾಯ – 4

# ಸದಿಶಗಳು

## 4.1 ಪೀಠಿಕೆ

ವಾಹಕಗಳು ಅಥವಾ ಸದಿಶಗಳು ರೇಖಾಗಣಿತ, ಭೌತಶಾಸ್ತ್ರ, ತಂತ್ರಜ್ಞಾನ ಮುಂತಾದ ಕ್ಷೇತ್ರಗಳಲ್ಲಿ ಕ್ಲಿಷ್ಟವಾದ ಸಮಸ್ಯೆಗಳನ್ನು ಸುಲಭ ರೀತಿಯಲ್ಲಿ ಬಿಡಿಸಲು ಸಹಾಯಕವಾಗಿವೆ.

ಸದಿಶಗಳಿಗೆ ದಿಕ್ಕು ಮತ್ತು ಪರಿಮಾಣ ಎರಡೂ ಇವೆ. ಸದಿಶಗಳನ್ನು ನಿಯತ ದಿಕ್ಕಿನಲ್ಲಿ ಎಳೆದ ರೇಖಾಖಂಡದಿಂದ ಪ್ರತಿನಿಧಿಸಬಹುದು. ಇದರ ಉದ್ದವು ಸದಿಶದ ಪರಿಮಾಣವನ್ನು ಸೂಚಿಸುತ್ತದೆ. ಇದರ ದಿಕ್ಕನ್ನು ಬಾಣದ ತುದಿಯಿಂದ ತೋರಿಸಬಹುದು (ಚಿತ್ರ 4.1).




ಚಿತ್ರ 4. 1

$A$ ಯು ಆದಿ ಬಿಂದು ಮತ್ತು $B$ ಯು ಅಂತ್ಯಬಿಂದುವಾಗಿರುತ್ತದೆ.

$\overrightarrow{AB} = \overrightarrow{a}$ ಎಂದು ಬರೆಯುತ್ತೇವೆ. ಇದರ ಪರಿಮಾಣ

$|AB| = |\overrightarrow{a}| = AB$ ಯ ಉದ್ದ

## ವಿವಿಧ ರೀತಿಯ ಸದಿಶಗಳು

(i) **ಶೂನ್ಯ ಸದಿಶ:** ಸದಿಶದ ಪರಿಮಾಣವು 0 ಆಗಿದ್ದರೆ ($|\overrightarrow{0}| = 0$) ಅದನ್ನು ಶೂನ್ಯ ಸದಿಶ ಎಂದು ಕರೆಯುತ್ತೇವೆ. ಇದರ ಮೊದಲನೇ ಮತ್ತು ಕೊನೆಯ ಬಿಂದು ಒಂದೇ ಆಗಿರುತ್ತದೆ. ಇದನ್ನು $\overrightarrow{0}$ ಎಂದು ಬರೆಯುತ್ತೇವೆ.

**(ii) ಏಕ ಸದಿಶ:** ಸದಿಶದ ಪರಿಮಾಣವು ಒಂದು ಆಗಿದ್ದರೆ ಇದನ್ನು ಏಕ ಸದಿಶ ಎಂದು ಕರೆಯುತ್ತೇವೆ. ಅಂದರೆ, $\vec{u}$ ಏಕಸದಿಶವಾಗಿದ್ದರೆ, $|\vec{u}| = 1$, ಒಂದು ಸದಿಶ $\vec{a}$ ಕೊಟ್ಟಿರುವಾಗ ಇದರ ದಿಕ್ಕಿನಲ್ಲಿರುವ ಏಕ ಸದಿಶವನ್ನು $\hat{a}$ ($a$ ಕ್ಯಾಪ್)ಎಂದು ಸೂಚಿಸುತ್ತೇವೆ. ಅಂದರೆ

$$\hat{a} = \frac{\vec{a}}{|\vec{a}|}$$

**(iii) ಸಮ ಸದಿಶಗಳು:** ಒಂದೇ ಪರಿಮಾಣ ಮತ್ತು ದಿಕ್ಕನ್ನು ಹೊಂದಿರುವ ಸದಿಶಗಳಿಗೆ ಸಮ ಸದಿಶಗಳೆಂದು ಕರೆಯುತ್ತೇವೆ

**(iv) ಸದಿಶದ ಋಣ ಸದಿಶ (ಅಥವಾ ವಿಮುಖ ಸದಿಶ)** ಒಂದು ದತ್ತ ಸದಿಶ $\vec{a}$ ಆದಾಗ, ಇದರಷ್ಟೇ ಪರಿಮಾಣ ಇರುವ ಆದರೆ ವಿರುದ್ಧ ದಿಕ್ಕಿನಲ್ಲಿರುವ ಸದಿಶವನ್ನು $\vec{a}$ ಯ ಋಣ ಸದಿಶ ಎಂದು ಕರೆಯುತ್ತೆವೆ. ಅದನ್ನು $-\vec{a}$ ಎಂದು ಬರೆಯುತ್ತೇವೆ.

**(v) ಸ್ಥಾನ ಸದಿಶ:** ಒಂದು ಸಮತಲದಲ್ಲಿ ಒಂದು ಬಿಂದು $P$ಯನ್ನು ಕೊಟ್ಟಾಗ $\vec{op}$ ಸದಿಶವನ್ನು (0 ಮೂಲಬಿಂದು) ಸ್ಥಾನ ಸದಿಶವೆಂದು ಕರೆಯುತ್ತೇವೆ.

## 4.2 $(x,y)$ ಬಿಂದುವಿನ ಸ್ಥಾನ ಸದಿಶ

$\hat{i}$ ಮತ್ತು $\hat{j}$ ಇವು ಎರಡು $OX$ ಮತ್ತು $OY$ ದಿಕ್ಕಿನಲ್ಲಿರುವ ಏಕ ಸದಿಶಗಳಾಗಿರಲಿ. $P(x,y)$ ಯಾವುದೇ ಒಂದು ಬಿಂದು ಆಗಿರಲಿ. ಆಗ $\vec{OP}$ ಯು $P$ ಬಿಂದುವಿನ ಸ್ಥಾನ ಸದಿಶವಾಗಿರುತ್ತದೆ (ಚಿತ್ರ 4.2).




ಚಿತ್ರ 4.2

$\overrightarrow{OP} = \vec{r}$ ಎಂದು ಬರೆಯುತ್ತೇವೆ.

ಚಿತ್ರ 4.2 ರಲ್ಲಿ, $PM$ನ್ನು $x$ –ಅಕ್ಷಕ್ಕೆ ಲಂಬವಾಗಿ ಎಳೆಯಿರಿ

$$\therefore\ OM = x$$

$x$ – ಅಕ್ಷದ ದಿಕ್ಕಿಗೆ $\hat{i}$ ಯು ಏಕ ಸದಿಶವಾದುದರಿಂದ

$\overrightarrow{OM} = x\hat{i}$

$y$ – ಅಕ್ಷದ ದಿಕ್ಕಿಗೆ $\hat{j}$ ಯು ಏಕ ಸದಿಶವಾದುದರಿಂದ

$\overrightarrow{MP} = y\hat{j}$

ಸದಿಶದ ಸಂಕಲನ ತ್ರಿಭುಜ ನಿಯಮದಿಂದ

ಈಗ, $\overrightarrow{OP} = \overrightarrow{OM} + \overrightarrow{MP} = x\hat{i} + y\hat{j}$

$\therefore \vec{r} = \overrightarrow{OP} = x\hat{i} + y\hat{j}$

$|\vec{r}| = |\overrightarrow{OP}| = \sqrt{OM^2 + MP^2}$

$= \sqrt{x^2+y^2}$

ಆದ್ದರಿಂದ $P(x,y)$ಯು ಸ್ಥಾನ ಸದಿಶವು $\overrightarrow{OP} = x\hat{i} + y\hat{j}$.

ಇದನ್ನು ನಿಯೋಜಿತ ಯುಗ್ಮ $(x,y)$ ಎಂದು ಬರೆಯಬಹುದು. ಇಲ್ಲಿ $x, y$ ಗಳು ವಾಸ್ತವ ಸಂಖ್ಯೆಗಳು. ಆದುದರಿಂದ ಒಂದು ಸದಿಶವನ್ನು ನಿಯೋಜಿತ ಯುಗ್ಮವಾಗಿ ಬರೆಯಬಹುದು.




ಚಿತ್ರ 4.3

$P$ ಯು ಒಂದು ಬಿಂದುವಾಗಿರುವಾಗ ಮೂರು – ಆಯಾಮಗಳ ವ್ಯೋಮದಲ್ಲಿ $\hat{i}, \hat{j}, \hat{k}$ ಈ ಮೂರು ಏಕಸದಿಶಗಳು $OX$, $OY$ ಮತ್ತು $OZ$ ದಿಕ್ಕಿನಲ್ಲಿರುತ್ತವೆ. $OX$, $OY$ ಮತ್ತು $OZ$ ಒಂದಕ್ಕೊಂದು ಲಂಬವಾಗಿರುತ್ತವೆ.

ಚಿತ್ರ 4.3 ರಲ್ಲಿ $PM$ ನ್ನು $XOY$ ಸಮತಲಕ್ಕೆ ಲಂಬವಾಗಿ ಎಳೆಯಿರಿ. $MN$ ನ್ನು $x$–ಅಕ್ಷಕ್ಕೆ ಲಂಬವಾಗಿಯೂ ಮತ್ತು $ML$ ನ್ನು $y$–ಅಕ್ಷಕ್ಕೆ ಲಂಬವಾಗಿಯೂ ಎಳೆಯಿರಿ.

ಈಗ, $ON = ML = x$, $NM = OL = y$ ಮತ್ತು $MP = z$

ನಿಯೋಜಿತ ತ್ರಯ $(x, y, z)$ ನಲ್ಲಿರುವ ಮೂರು ಸಂಖ್ಯೆಗಳು $P$ ಬಿಂದುವಿನ $x$– ನಿರ್ದೇಶಕ, $y$–ನಿರ್ದೇಶಕ, ಮತ್ತು $z$–ನಿರ್ದೇಶಗಳನ್ನು ಸೂಚಿಸುತ್ತವೆ.

$$\therefore \overrightarrow{ON} = x\hat{i}, \quad NM = y\hat{j}$$

$$\therefore \overrightarrow{OM} = \overrightarrow{ON} + \overrightarrow{NM} \text{ [}OMN\text{ ತ್ರಿಕೋನದಿಂದ]}$$

$$= x\hat{i} + y\hat{j}$$

$$\overrightarrow{OP} = \overrightarrow{OM} + \overrightarrow{MP} \text{ [}OMP\text{ ತ್ರಿಕೋನದಿಂದ]}$$

$$\overrightarrow{OP} = x\hat{i} + y\hat{j} + z\hat{k}$$

ಇದರ ಪರಿಮಾಣ, $|\overrightarrow{OP}| = |x\hat{i} + y\hat{i} + \hat{k}|$

$$= \sqrt{x^2+y^2+z^2}$$

$P$ ಯ ಸ್ಥಾನ ಸದಿಶವು $(x, y, z)$ ಮತ್ತು ಇದರ ಪರಿಮಾಣ $\sqrt{x^2+y^2+z^2}$

**(1) ಸದಿಶಗಳ ಸಂಕಲನ ಗುಣಗಳು:**

$\vec{a} = (a_1, a_2, a_3)$ $\quad$ $\vec{b} = (b_1, b_2, b_3)$ ಆದರೆ

$\vec{a} + \vec{b} = (a_1 + b_1, a_2+b_2, a_3 + b_3)$ ಆಗುತ್ತದೆ.

ಜ್ಯಾಮಿತೀಯ ನಿರೂಪಣೆಗಳು : $\vec{a}$ ಮತ್ತು $\vec{b}$ ಗಳು ಸಮಾಂತರ ಚತುರ್ಭುಜದ ಎರಡು ಅಕ್ಕ ಪಕ್ಕದ ಭುಜಗಳಾಗಿರಲಿ (ಚಿತ್ರ 4.4).

$\overrightarrow{OA} = \vec{a}$ ಮತ್ತು $\overrightarrow{OB} = \vec{b}.$ ಆಗ $\vec{a} + \vec{b}$ ಯು ಸದಿಶ $\overrightarrow{OC}$ ಆಗುತ್ತದೆ.




ಚಿತ್ರ 4.4

**ಸದಿಶ ಸಂಕಲನದ ತ್ರಿಕೋನ ನಿಯಮ:**

*ABC* ತ್ರಿಕೋನದ ಭುಜಗಳಾದ $\overrightarrow{AB}$ ಮತ್ತು $\overrightarrow{BC}$ ಗಳು $\vec{a}$ ಮತ್ತು $\vec{b}$ ಎಂಬ ಸದಿಶಗಳನ್ನು ಸೂಚಿಸಿದರೆ $\overrightarrow{AC}$ ಯು ಅವುಗಳ ಮೊತ್ತ $\vec{a} + \vec{b}$ ನ್ನು ಸೂಚಿಸುತ್ತದೆ. (ಚಿತ್ರ 4.5).




$$\overrightarrow{AB} + \overrightarrow{BC} = \overrightarrow{AC}$$

ಚಿತ್ರ 4.5

ಇದೇ ನಿಯಮವನ್ನು ಎರಡಕ್ಕಿಂತ ಹೆಚ್ಚಿನ ಸದಿಶಗಳಿಗೆ ವಿಸ್ತರಿಸಬಹುದು. ಒಂದು ಸದಿಶದ ಕೊನೆಯ ಬಿಂದುವು ಅದರ ಮುಂದಿನ ಸದಿಶದ ಮೊದಲನೇ ಬಿಂದುವಾಗಿರಬೇಕು

ಅಂದರೆ $\overrightarrow{AB} + \overrightarrow{BC} + \overrightarrow{CD} + \overrightarrow{DE} = \overrightarrow{AE}$

(2) ಸದಿಶಗಳ ವ್ಯವಕಲನ:

$$\vec{a} = (a_1, a_2, a_3) \text{ ಮತ್ತು } \vec{b} = (b_1, b_2, b_3)$$

$$\vec{a} - \vec{b} = (a_1 - b_1,\ a_2 - b_2,\ a_3 - b_3)$$




ಚಿತ್ರ 4.6

ಜ್ಯಾಮಿತೀಯವಾಗಿ (ಚಿತ್ರ 4.6)

$\vec{AB} = \vec{a}$ ಮತ್ತು $\vec{AC} = \vec{b}$ ಆದಾಗ

$$\vec{AB} = \vec{AC} + \vec{CB}$$

ಅಂದರೆ, $\vec{a} = \vec{b} + \vec{CB}$

ಅಥವಾ $\vec{a} - \vec{b} = \vec{CB}$

ಯಾವುದೇ ಒಂದು ತ್ರಿಕೋನ *ABC* ಯಲ್ಲಿ

$$\vec{AB} + \vec{BC} + \vec{CA} = \vec{0}$$

(3) ಒಂದು ಅದಿಶದಿಂದ ಸದಿಶದ ಗುಣಾಕಾರ

$\vec{a} = (a_1, a_2)$ ಒಂದು ಸದಿಶವಾಗಿದ್ದು $K$ ಯು ಒಂದು ಅದಿಶವಾಗಿರಲಿ. ಆಗ $\vec{Ka} = (Ka_1, Ka_2)$ ಸದಿಶವು $\vec{a}$ ಸದಿಶದ ದಿಕ್ಕಿನಲ್ಲಿದ್ದು ಇದರ ಪರಿಮಾಣವು $\vec{a}$ ಯು ಪರಿಮಾಣದ $K$ ಯಷ್ಟು ಇರುತ್ತದೆ (ಚಿತ್ರ 4.7).



ಚಿತ್ರ 4.7

## 4.3 ವಿಭಜನ ಸೂತ್ರ

$A$ ಮತ್ತು $B$ ಗಳ ಸ್ಥಾನ ಸದಿಶಗಳು $\vec{a}$ ಮತ್ತು $\vec{b}$ ಆಗಿದ್ದರೆ $P$ ಬಿಂದುವು $\overrightarrow{AB}$ ಯನ್ನು $m:n$ ಪ್ರಮಾಣದಲ್ಲಿ ವಿಭಜಿಸಿದರೆ $P$ಯ ಸ್ಥಾನ ಸದಿಶವನ್ನು ಕಂಡುಹಿಡಿಯುವ ಬಗೆ (ಚಿತ್ರ 4.8).



ಚಿತ್ರ 4.8

$\frac{AP}{PB} = \frac{m}{n}$ ಎಂದು ತಿಳಿದಿದೆ. $\overrightarrow{OA} = \vec{a}$ $\overrightarrow{OB} = \vec{b}$

$\therefore n\overrightarrow{AP} = m\ \overrightarrow{PB}$

ಅಥವಾ $n(\overrightarrow{OP} - \overrightarrow{OA}) = m(\overrightarrow{OB} - \overrightarrow{OP})$

ಅಥವಾ $(m+n)\ \overrightarrow{OP} = n\ \overrightarrow{OA} + m\ \overrightarrow{OB}$

$$\therefore \overrightarrow{OP} = \frac{n\vec{a} + m\vec{b}}{m+n}$$

**ಮಧ್ಯಬಿಂದು:** $m = n = 1$ ಆದರೆ $P$ ಯು $\overrightarrow{AB}$ ಯ ಮಧ್ಯ ಬಿಂದುವಾಗಿರುತ್ತದೆ. ಆದುದರಿಂದ ಮಧ್ಯಬಿಂದುವಿನ ಸ್ಥಾನ ಸದಿಶವು $\dfrac{\vec{a} + \vec{b}}{2}$

**ಉದಾಹರಣೆಗಳು**

1. ಒಂದು ತ್ರಿಕೋನದ ಭುಜಗಳ ಮಧ್ಯಬಿಂದುವಿನ ಸ್ಥಾನ ಸದಿಶವನ್ನು ಅವುಗಳ ಶೃಂಗಗಳ ಸ್ಥಾನ ಸದಿಶಗಳ ಮೂಲಕ ಬರೆಯಿರಿ; ಮತ್ತು ಮಧ್ಯರೇಖೆಗಳ (ಶೃಂಗದಿಂದ ಆರಂಭಗೊಂಡ) ಸದಿಶಗಳ ಮೊತ್ತ ಶೂನ್ಯ ಎಂದು ತೋರಿಸಿ.

$ABC$ ಎಂಬ ಒಂದು ತ್ರಿಕೋನದಲ್ಲಿ (ಚಿತ್ರ 4.9)

$\overrightarrow{OA} = \vec{a}$, $\overrightarrow{OB} = \vec{b}$ ಮತ್ತು $\overrightarrow{OC} = \vec{c}$ ಆಗಿರಲಿ.

(ಚಿತ್ರದಲ್ಲಿ ಮೂಲಬಿಂದು O ತೋರಿಸಿಲ್ಲ)

$D$ ಯು $BC$ಯ ಮಧ್ಯಬಿಂದು $\quad \therefore \overrightarrow{OD} = \dfrac{\vec{b} + \vec{c}}{2}$

$E$ ಯು $AC$ ಯ ಮಧ್ಯಬಿಂದು $\quad \therefore \overrightarrow{OE} = \dfrac{\vec{a} + \vec{c}}{2}$

$F$ ಯು $AB$ ಯ ಮಧ್ಯಬಿಂದು $\quad \therefore \overrightarrow{OF} = \dfrac{\vec{a} + \vec{b}}{2}$

ಈಗ, $\overrightarrow{OD} + \overrightarrow{OE} + \overrightarrow{OF} = \vec{a} + \vec{b} + \vec{c} = \overrightarrow{OA} + \overrightarrow{OB} + \overrightarrow{OC}$,

$$\overrightarrow{AD} = \overrightarrow{OD} - \overrightarrow{OA}$$

$$= \frac{\vec{b} + \vec{c}}{2} - \vec{a} = \frac{\vec{b} + \vec{c} - 2\vec{a}}{2}$$

$$\overrightarrow{BE} = \overrightarrow{OE} - \overrightarrow{OB}$$

$$= \frac{\vec{a} + \vec{c}}{2} - \vec{b} = \frac{\vec{a} + \vec{c} - 2\vec{b}}{2}$$

ಮತ್ತು $\overrightarrow{CF} = \overrightarrow{OF} - \overrightarrow{OC}$

$$= \frac{\vec{a} + \vec{b}}{2} - \vec{c} = \frac{\vec{a} + \vec{b} - 2\vec{c}}{2}$$

ಆದ್ದರಿಂದ ಮಧ್ಯರೇಖಾ ಸದಿಶಗಳ ಮೊತ್ತ

$$\overrightarrow{AD} + \overrightarrow{BE} + \overrightarrow{CF} = \frac{\vec{b} + \vec{c} - 2\vec{a}}{2} + \frac{\vec{a} + \vec{c} - 2\vec{b}}{2} + \frac{\vec{a} + \vec{b} - 2\vec{c}}{2} = \vec{0}$$




ಚಿತ್ರ 4.9

2. ಒಂದು ತ್ರಿಕೋನದ ಮೂರು ಮಧ್ಯರೇಖೆಗಳು ಏಕ ಬಿಂದುಸ್ಥ ಎಂದು ತೋರಿಸಿ. *ABC* ತ್ರಿಕೋನದಲ್ಲಿ $\vec{a}$, $\vec{b}$ ಮತ್ತು $\vec{c}$ ಗಳು ತ್ರಿಕೋನದ ಶೃಂಗಗಳ ಸ್ಥಾನ ಸದಿಶಗಳಾಗಿವೆ (ಚಿತ್ರ 4.9).

*D* ಯ ಸ್ಥಾನ ಸದಿಶವು $\dfrac{\vec{b}+\vec{c}}{2}$

*E* ಯ ಸ್ಥಾನ ಸದಿಶವು $\dfrac{\vec{a}+\vec{c}}{2}$

*F* ಯ ಸ್ಥಾನ ಸದಿಶವು $\dfrac{\vec{a}+\vec{b}}{2}$

ಈಗ *A* ಯ ಸ್ಥಾನ ಸದಿಶ $\vec{a}$ ಮತ್ತು *D* ಯ ಸ್ಥಾನ ಸದಿಶವು $\dfrac{\vec{b}+\vec{c}}{2}$

*G* ಬಿಂದುವು *AD*ಯನ್ನು 2:1 ಪ್ರಮಾಣದಲ್ಲಿ ಛೇದಿಸುತ್ತದೆ. ಆದ್ದರಿಂದ

$$G \text{ ಯ ಸ್ಥಾನ ಸದಿಶವು } \frac{\dfrac{2(\vec{b}+\vec{c})}{2} + 1\vec{a}}{2+1} = \frac{\vec{a}+\vec{b}+\vec{c}}{3}$$

ಈಗ, *G* ಯ ಸ್ಥಾನ ಸದಿಶದ ಸಮಾಂಗತೆಯಿಂದ ನಮಗೆ ತಿಳಿದುಬರುವುದೇನೆಂದರೆ, *G* ಯು *BE* ಮಧ್ಯರೇಖೆಯಲ್ಲಿ $\overrightarrow{CF}$ ಮಧ್ಯರೇಖೆಯಲ್ಲೂ ಇರುತ್ತದೆ. ಆದುದರಿಂದ ಮಧ್ಯರೇಖೆಗಳು ಏಕಬಿಂದುಸ್ಥವಾಗಿರುವುವು. ಇದರ ಸ್ಥಾನ ಸದಿಶವು $\dfrac{\vec{a}+\vec{b}+\vec{c}}{3}$ ಆಗಿದೆ.

3. ಒಂದು ಸಮಾನಾಂತರ ಚತುರ್ಭುಜದ ಕರ್ಣಗಳು ಒಂದನ್ನೊಂದು ದ್ವಿಭಜಿಸುತ್ತವೆ ಎಂದು ತೋರಿಸಿ, ಹಾಗೂ ಇದರ ವಿಲೋಮವನ್ನು ಸಾಧಿಸಿ.




ಚಿತ್ರ 4.10

(i) *ABCD* ಯು ಒಂದು ಸಮಾನಾಂತರ ಚತುರ್ಭುಜ (ಚಿತ್ರ 4.10). ನಾವು *AC*ಯ ಮಧ್ಯಬಿಂದು ಮತ್ತು *BD*ಯ ಮಧ್ಯಬಿಂದು ಒಂದೇ ಎಂದು ತೋರಿಸಬೇಕು.

$\overrightarrow{OA} = \vec{a}$, $\overrightarrow{OB} = \vec{b}$, $\overrightarrow{OC} = \vec{c}$ ಮತ್ತು $\overrightarrow{OD} = \vec{d}$ ಎಂದಿರಲಿ.

*ABCD*ಯು ಒಂದು ಸಮಾನಾಂತರ ಚತುರ್ಭುಜವಾಗಿರುವುದರಿಂದ

$\overrightarrow{AB} = \overrightarrow{CD}$ ಅಂದರೆ, $\overrightarrow{OB} - \overrightarrow{OA} = \overrightarrow{OD} - \overrightarrow{OC}$

ಅಥವಾ $\vec{b} - \vec{a} = \vec{d} - \vec{c}$

ಅಥವಾ $\vec{b} + \vec{d} = \vec{a} + \vec{c}$

$$\therefore \quad \frac{\vec{b} + \vec{d}}{2} = \frac{\vec{a} + \vec{c}}{2}$$

ಅಂದರೆ *BD* ಯ ಮಧ್ಯಬಿಂದು ≡ *AC* ಯ ಮಧ್ಯಬಿಂದು

**(ii) ವಿಲೋಮ ಫಲಿತಾಂಶ :**

*AC* ಯ ಮಧ್ಯಬಿಂದು ≡ *BD* ಯ ಮಧ್ಯಬಿಂದು ಆಗಿರಲಿ.

*ABCD* ಯು ಒಂದು ಸಮಾನಾಂತರ ಚತುರ್ಭುಜವೆಂದು ತೋರಿಸಬೇಕು.

ಈಗ, $AC$ ಮತ್ತು $BD$ ಗಳ ಮಧ್ಯಬಿಂದುವು ಒಂದೇ ಆಗಿರುವುದರಿಂದ

$$\frac{\vec{a} + \vec{c}}{2} = \frac{\vec{b} + \vec{d}}{2}$$

ಅಥವಾ $\vec{a} + \vec{c} = \vec{b} + \vec{d}$

ಅಥವಾ $\vec{b} - \vec{a} = \vec{c} - \vec{d}$

ಅಂದರೆ, $\overrightarrow{OB} - \overrightarrow{OA} = \overrightarrow{OC} - \overrightarrow{OD}$

ಅಥವಾ $\overrightarrow{AB} = \overrightarrow{DC}$ $\therefore AB \parallel DC, AB = DC$

ಹಾಗೆಯೇ, $\overrightarrow{AD} = \overrightarrow{BC}$

ಆದ್ದರಿಂದ, $ABCD$ ಯು ಒಂದು ಸಮಾನಾಂತರ ಚತುರ್ಭುಜ

4. $\vec{a}$ ಮತ್ತು $\vec{b}$ ಗಳು $ABCDEF$ ಸಮಭುಜ ಷಟ್ಕೋನದ ಅಕ್ಕ ಪಕ್ಕದ ಭುಜಗಳಾಗಿದ್ದರೆ, $\overrightarrow{CD}, \overrightarrow{DE}, \overrightarrow{FA}, \overrightarrow{AC}, \overrightarrow{AD}, \overrightarrow{AE}$ ಮತ್ತು $\overrightarrow{CE}$ ಗಳನ್ನು $\vec{a}$ ಮತ್ತು $\vec{b}$ ಗಳ ಮೂಲಕ ಬರೆಯಿರಿ (ಚಿತ್ರ 4.11).




ಚಿತ್ರ 4.11

$\vec{AB} = \vec{a}$ ಮತ್ತು $\vec{BC} = \vec{b}$ ಎಂದಿರಲಿ.

$\therefore \vec{AC} = \vec{AB} + \vec{BC} = \vec{a} + \vec{b}$ ..... (1)

ಈಗ, $AD \parallel BC$ ಮತ್ತು $AD = 2\,BC$

$\therefore \vec{AD} = \vec{2b}$ .... (2)

ಈಗ, $\vec{AD} = \vec{AC} + \vec{CD}$

ಅಂದರೆ, $\vec{2b} = \vec{a} + \vec{b} + \vec{CD}$ [(1) ಮತ್ತು (2) ರಿಂದ]

ಅಥವಾ $\vec{b} - \vec{a} = \vec{CD}$ .... (3)

$FA \parallel DC$ ಮತ್ತು $FA = DC$

$\therefore \vec{FA} = \vec{DC}$ ಅಥವಾ $\vec{FA} = -\vec{CD}$

$\therefore \vec{FA} = \vec{a} - \vec{b}$ [(3)ರಿಂದ)]

$DE \parallel BA$ ಮತ್ತು $DE = BA$

$\therefore \vec{DE} = -\vec{AB}$ ಅಥವಾ $\vec{DE} = -\vec{a}$ .... (4)

ಈಗ, $\vec{CE} = \vec{CD} + \vec{DE}$

$= \vec{b} - \vec{a} - \vec{a}$ [(3) ಮತ್ತು (4) ರಿಂದ]

$= \vec{b} - \vec{2a}$

ಹಾಗೆಯೇ $EF \parallel CB$ ಮತ್ತು $EF = CB$

$\therefore \vec{EF} = -\vec{BC} = \vec{-b}$

$\therefore \vec{AE} = \vec{AD} + \vec{DE}$

$= \vec{2b} - \vec{a}$ [(2) ಮತ್ತು (4) ರಿಂದ].

5. $A, B, C, D$ ಎಂಬ ನಾಲ್ಕು ಬಿಂದುಗಳ ಸ್ಥಾನ ಸದಿಶವು ಕ್ರಮವಾಗಿ $\vec{a}, \vec{b}, \vec{2a} + \vec{3b}$ ಮತ್ತು $\vec{a} - \vec{2b}$ ಗಳಾಗಿವೆ. $\vec{AC}, \vec{DB}, \vec{BC}$ ಮತ್ತು $\vec{CA}$ ಸದಿಶಗಳನ್ನು $\vec{a}$ ಮತ್ತು $\vec{b}$ ಗಳ ಮೂಲಕ ಬರೆಯಿರಿ.

ಈಗ O ಎಂಬುದು ಮೂಲಬಿಂದುವಾದರೆ, ಸ್ಥಾನಸದಿಶಗಳು

$\vec{OA} = \vec{a}, \vec{OB} = \vec{b}, \vec{OC} = \vec{2a} + \vec{3b}$ ಮತ್ತು $\vec{OD} = \vec{a} - \vec{2b}$

$\therefore \vec{AC} = \vec{OC} - \vec{OA} = \vec{2a} + \vec{3b} - \vec{a} = \vec{a} + \vec{3b}$

$\vec{DB} = \vec{OB} - \vec{OD} = \vec{b} - \vec{a} + \vec{2b} = \vec{3b} - \vec{a}$

$\vec{BC} = \vec{OC} - \vec{OB} = \vec{2a} + \vec{3b} - \vec{b} = 2(\vec{a} + \vec{b})$

ಮತ್ತು $\vec{CA} = \vec{OA} - \vec{OC} = \vec{a} - \vec{2a} - \vec{3b} = -(\vec{a} + \vec{3b})$

## 4.4 ಅದಿಶ ಗುಣಲಬ್ಧ

$\vec{a} = (a_1, a_2, a_3)$ ಮತ್ತು $\vec{b} = (b_1, b_2, b_3)$ ಎರಡು ಸದಿಶಗಳ ಅದಿಶ ಗುಣಲಬ್ಧವನ್ನು

$\vec{a} \cdot \vec{b} = a_1 b_1 + a_2 b_2 + a_3 b_3$

ಎಂದು ವ್ಯಾಖ್ಯಾನಿಸುತ್ತೇವೆ. ಇದು ಸದಿಶವಲ್ಲ ಉದಾಹರಣೆ :

$\vec{a} = (1, 2, -3)$ ಮತ್ತು $\vec{b} = (3, -1, 2)$ ಆದರೆ

$\vec{a} \cdot \vec{b} = 1.3 + 2(-1) + (-3)(2) = -5.$

**ಜ್ಯಾಮಿತಿಯಲ್ಲಿ ಅದಿಶ ಗುಣಲಬ್ಧದ ಅರ್ಥ**

$\vec{a}$ ಮತ್ತು $\vec{b}$ ಗಳು ಎರಡು ಶೂನ್ಯವಲ್ಲದ ಸದಿಶಗಳಾಗಿರಲಿ. ಇವುಗಳ ನಡುವಿನ ಕೋನವು $\theta$ ಆಗಿರಲಿ (ಚಿತ್ರ 4.12).

ಆಗ, $\vec{a} \cdot \vec{b}$ ಯುನ್ನು ಹೀಗೆ ವ್ಯಾಖ್ಯಾನಿಸುತ್ತೇವೆ:

$$\vec{a} \cdot \vec{b} = |\vec{a}|\ |\vec{b}| \cos\theta$$




ಚಿತ್ರ 4.12

ನಾವು ಈ ಕೆಳಗಿನ ವಿಷಯಗಳನ್ನು ಗಮನಿಸುತ್ತೇವೆ :

(i) $\vec{a} \cdot \vec{b}$ ಯು ಸದಿಶವಲ್ಲ

(ii) θ ಕೋನವು ಲಘು ಅಥವಾ ಅಧಿಕವಾದಾಗ $\vec{a} \cdot \vec{b}$ ಯು ಧನ ಅಥವಾ ಋಣ ಆಗುತ್ತದೆ.

(iii) $\vec{a} \cdot \vec{b} = \vec{b} \cdot \vec{a}$ ಅಂದರೆ, *ಅದಿಶ ಗುಣಲಬ್ಧವು ಪರಿವರ್ತನೀಯ*

(iv) $\vec{a}$ ಮತ್ತು $\vec{b}$ ಯು ಲಂಬವಾಗಿದ್ದರೆ $\vec{a} \cdot \vec{b} = 0$
ಏಕೆಂದರೆ, $\cos 90° = 0$

(v) $\vec{a} \parallel \vec{b}$ ಆದಾಗ $\vec{a} \cdot \vec{b} = |\vec{a}|\ |\vec{b}|$
ಏಕೆಂದರೆ $\cos 0° = 1$

(vi) $\vec{a} \cdot \vec{a} = |\vec{a}|\,|\vec{a}| = |\vec{a}|^2$

(vii) ಏಕಸದಿಶಗಳ $\hat{i}, \hat{j}, \hat{k}$ ಗಳ ಅದಿಶ ಗುಣಲಬ್ಧಗಳು ಹೀಗಿರುತ್ತವೆ :

$\hat{i} \cdot \hat{i} = |\hat{i}|^2 = 1$, $\hat{j} \cdot \hat{j} = 1$ ಮತ್ತು $\hat{k} \cdot \hat{k} = 1$

$\hat{i}, \hat{j}$ ಮತ್ತು $\hat{k}$ ಗಳು ಒಂದಕ್ಕೊಂದು ಲಂಬವಾಗಿರುವುದರಿಂದ

$\hat{i} \cdot \hat{j} = 0 \qquad \hat{j} \cdot \hat{i} = 0$

$\hat{i} \cdot \hat{k} = 0 \qquad \hat{k} \cdot \hat{i} = 0$

$\hat{j} \cdot \hat{k} = 0 \qquad \hat{k} \cdot \hat{j} = 0$

(viii) $\vec{a} = a_1\hat{i} + a_2\hat{j} + a_3\hat{k}$ ಮತ್ತು $b = b_1\hat{i} + b_2\hat{j} + b_3\hat{k}$ ಆಗಿರಲಿ.

$$\vec{a} \cdot \vec{b} = (a_1\hat{i} + a_2\hat{j} + a_3\hat{k}) \cdot (b_1\hat{i} + b_2\hat{j} + b_3\hat{k})$$

$$= a_1\hat{i}. (b_1\hat{i} + b_2\hat{j} + b_3\hat{k}) + a_2\hat{j}. (b_1\hat{i} + b_2\hat{j} + b_3\hat{k}) +$$

$$a_3\hat{k} (b_1\hat{i} + b_2\hat{j} + b_3\hat{k})$$

$$= a_1b_1 (\hat{i}. \hat{i}.) + a_1 b_2 (\hat{i}. \hat{j}) + a_1 b_3 (\hat{i}. \hat{k})$$

$$+a_2 b_1 (\hat{j} . \hat{i}) + a_2 b_2 (\hat{j} . \hat{j}) + a_2 b_3 (\hat{j} . \hat{k})$$

$$+a_3 b_1 (\hat{k}. \hat{i}) + a_3 b_2 (\hat{k} . \hat{j}) + a_3 b_3 (\hat{k} . \hat{k})$$

$$= a_1 b_1(1) + a_1 b_2(0) + a_1 b_3(0) + a_2 b_1(0) + a_2 b_2(1)$$

$$+ a_2 b_3(0) + a_3 b_1(0) + a_3 b_2 (0) + a_3 b_3(1)$$

$$\therefore \vec{a} \cdot \vec{b} = a_1 b_1 + a_2 b_2 + a_3 b_3 = \sum a_i b_i, i = 1, 2, 3$$

## 4.5 ಸದಿಶ ಗುಣಲಬ್ಧ

$\vec{a} = (a_1, a_2, a_3)$ ಮತ್ತು $\vec{b} = (b_1, b_2, b_3)$ ಎರಡು ಸದಿಶಗಳ ಅಸದಿಶ ಗುಣಲಬ್ಧವು

$$\vec{a} \times \vec{b} = \hat{i} (a_2 b_3 - a_3 b_2) - \hat{j} (a_1 b_3 - a_3 b_1) + \hat{k} (a_1 b_2 - a_2 b_1)$$

$$\vec{a} \times \vec{b} = \begin{vmatrix} \hat{i} & \hat{j} & \hat{k} \\ a_1 & a_2 & a_3 \\ b_1 & b_2 & b_3 \end{vmatrix} = \Sigma\, \hat{i}(a_2 b_3 - a_3 b_2)$$

ಸದಿಶ ಗುಣಲಬ್ಧವು ಪರಿವರ್ತನೀಯವಲ್ಲ. ಅಂದರೆ

$$\vec{a} \times \vec{b} \neq \vec{b} \times \vec{a}$$ ಏಕೆಂದರೆ

$$\vec{b} \times \vec{a} = \begin{vmatrix} \hat{i} & \hat{j} & \hat{k} \\ b_1 & b_2 & b_3 \\ a_1 & a_2 & a_3 \end{vmatrix} = - \begin{vmatrix} \hat{i} & \hat{j} & \hat{k} \\ a_1 & a_2 & a_3 \\ b_1 & b_2 & b_3 \end{vmatrix}$$

$$\vec{b} \times \vec{a} = -(\vec{a} \times \vec{b})$$

ಉದಾಹರಣೆ: $\vec{a} = 2\hat{i} + 3\hat{j} - 6\hat{k}$

ಮತ್ತು $\vec{b} = 3\hat{i} - 4\hat{j} + 5\hat{k}$ ಆಗಿರಲಿ.

$$\vec{a} \times \vec{b} = \begin{vmatrix} \hat{i} & \hat{j} & \hat{k} \\ 2 & 3 & -6 \\ 3 & -4 & 5 \end{vmatrix}$$

$$= \hat{i}(15 - 24) - \hat{j}(10 + 18) + \hat{k}(-8 - 9)$$

$$= 9\hat{i} - 28\hat{j} - 17\hat{k}$$

$$\vec{b} \times \vec{a} = \begin{vmatrix} \hat{i} & \hat{j} & \hat{k} \\ 3 & -4 & 5 \\ 2 & 3 & -6 \end{vmatrix}$$

$$= \hat{i}(24-15) - \hat{j}(-18-10) + \hat{k}(9+8)$$

$$= 9\hat{i} + 28\hat{j} + 17\hat{k}$$

$$\vec{a} \times \vec{b} = -(\vec{b} \times \vec{a})$$

### ಜ್ಯಾಮಿತಿಯಲ್ಲಿ ಸದಿಶ ಗುಣಲಬ್ಧದ ಅರ್ಥ:




ಚಿತ್ರ 4.13




ಚಿತ್ರ 4.14

$\vec{a}$ ಮತ್ತು $\vec{b}$ ಗಳು ಎರಡು ಶೂನ್ಯವಲ್ಲದ ಸದಿಶಗಳು ಹಾಗೂ $\theta$ ವು $\vec{a}$ ಮತ್ತು $\vec{b}$ ಗಳ ನಡುವಿನ ಕೋನ ಆಗಿರಲಿ. $\hat{n}$ ಎಂಬುದು ಒಂದು ಏಕ ಸದಿಶ. ಇದು $\vec{a}$ ಮತ್ತು $\vec{b}$ ಗಳಿಗೆ ಲಂಬವಾಗಿದೆ. $\vec{a}$, $\vec{b}$, $\vec{n}$ ಬಲತಿರುಪು ವ್ಯವಸ್ಥೆ ಆಗಿದೆ. ಆಗ $\vec{a} \times \vec{b}$ ಯನ್ನು ನಾವು ಹೀಗೆ ವ್ಯಾಖ್ಯಾಯಿಸುತ್ತೇವೆ (ಚಿತ್ರಗಳು 4.13, 4.14).

$$\vec{a} \times \vec{b} = |\vec{a}|\ |\vec{b}| \sin\theta\ \hat{n}$$

$$|\vec{a} \times \vec{b}| = a\ b \sin\theta \quad (\text{ಏಕೆಂದರೆ } |\hat{n}| = 1)$$

$= OA \, . \, OB \, . \sin\theta$

$= OACB$ ಸಮಾನಾಂತರ ಚತುರ್ಭುಜದ ವಿಸ್ತೀರ್ಣ.

ನಾವು ಈ ಕೆಳಗಿನ ಅಂಶಗಳನ್ನು ಪರಿಪಾಲಿಸುತ್ತೇವೆ :

(i) $\vec{a} \times \vec{b}$ ಯು ಒಂದು ಸದಿಶವಾಗಿದೆ.

(ii) $\vec{b} \times \vec{a} = |\vec{b}| \; |\vec{a}| \sin(-\hat{n})$

$= |\vec{a}| \; |\vec{b}| \; \sin\theta \, \hat{n}$

ಅಂದರೆ, $\vec{b} \times \vec{a} = -(\vec{a} \times \vec{b})$

(iii) ಸದಿಶ ಗುಣಲಬ್ಧವು ಅಪರಿವರ್ತನೀಯವಾಗಿದೆ. $\vec{a}$ ಮತ್ತು $\vec{b}$ ಗಳು ಸಮಾನಾಂತರ ಚತುರ್ಭುಜದ ಅಕ್ಕಪಕ್ಕದ ಭುಜಗಳಾಗಿದ್ದರೆ, ಇದರ ವಿಸ್ತೀರ್ಣ

$|\vec{a} \times \vec{b}| = |\vec{b} \times \vec{a}|$

(iv) $\vec{a} \parallel \vec{b}$ ಆದರೆ $\theta = 0 \;\therefore \sin\theta = 0$

$\therefore \vec{a} \times \vec{b} = 0$

(v) $\vec{a} \times \vec{a} = \vec{0}$

(vi) $\vec{a} \perp^r \vec{b}$ ಆದಾಗ $\theta = 90°, \sin\theta = 1$

$\therefore \vec{a} \times \vec{b} = a \; b \; \hat{n}$

ಇಲ್ಲಿ, $|\vec{a}| = a, |\vec{b}| = b$ ಎಂದು ಸೂಚಿಸಲಾಗಿದೆ.

(vii) ಏಕ ಸದಿಶಗಳಾದ $\hat{i}, \hat{j}, \hat{k}$ ಗಳ ಸದಿಶಗಳಾದ ಗುಣಲಬ್ಧಗಳು ಹೀಗಿವೆ :

$\hat{i} \times \hat{i} = 0 \qquad \hat{j} \times \hat{j} = 0 \qquad \hat{k} \times \hat{k} = 0$

$\hat{i} \times \hat{j} = |\hat{i}| |\hat{j}| \sin 90° \, \hat{k}$

$= 1 . 1 . 1 \hat{k}$

$\therefore \hat{i} \times \hat{j} = \hat{k}, \quad \hat{j} \times \hat{i} = -\hat{k}$

ಹೀಗೆಯೇ, $\hat{j} \times \hat{k} = \hat{i}, \quad \hat{k} \times \hat{i} = \hat{j}$

$\hat{k} \times \hat{j} = -\hat{i}$ ಮತ್ತು $\hat{i} \times \hat{k} = -\hat{j}$

(ಚಿತ್ರ 4.15 ನೋಡಿ).




ಚಿತ್ರ 4.15

(viii) $\vec{a} = a_1 \hat{i} + a_2 \hat{j} + a_3 \hat{k}$ ಮತ್ತು, ಆಗ $\vec{b} = b_1 \hat{i} + b_2 \hat{j} + b_3 \hat{k}$ ಆಗಿರಲಿ.

$$\vec{a} \times \vec{b} = (a_1 \hat{i} + a_2 \hat{j} + a_3 \hat{k}) \times (b_1 \hat{i} + b_2 \hat{j} + b_3 \hat{k})$$

$$= a_1 \hat{i} \times (b_1 \hat{i} + b_2 \hat{j} + b_3 \hat{k}) + a_2 \hat{j} \times (b_1 \hat{i} + b_2 \hat{j} + b_3 \hat{k})$$

$$+ a_3 \hat{k} \times (b_1 \hat{i} + b_2 \hat{j} + b_3 \hat{k})$$

$$= a_1 b_1 (\hat{i} \times \hat{i}) + a_1 b_2 (\hat{i} \times \hat{j}) + a_1 b_3 (\hat{i} \times \hat{k})$$

$$+ a_2 b (\hat{j} \times \hat{i}) + a_2 b_2 (\hat{j} \times \hat{j}) + a_2 b_3 (\hat{j} \times \hat{k})$$

$$+ a_3 b_1 (\hat{k} \times \hat{i}) + a_3 b_2 (\hat{k} \times \hat{j}) + a_3 b_3 (\hat{k} \times \hat{k})$$

$$= a_1 b_1 (\vec{0}) + a_1 b_2 (\hat{k}) + a_1 b_3 (-\hat{j})$$

$$+ a_2 b_1 (-\hat{k}) + \vec{0}$$

$$+ a_2 b_3 (\hat{i}) + a_3 b_1 (\hat{j}) + a_3 b_2 (-\hat{i}) + 0$$

$$= \hat{i} (a_2 b_3 - a_3 b_2) - \hat{j} (a_1 b_3 - a_3 b_1) + \hat{k} (a_1 b_2 - a_2 b_1)$$

$$\vec{a} \times \vec{b} = \begin{vmatrix} \hat{i} & \hat{j} & \hat{k} \\ a_1 & a_2 & a_3 \\ b_1 & b_2 & b_3 \end{vmatrix}$$

(ix) $$\cos\theta = \frac{\vec{a} \cdot \vec{b}}{|\vec{a}|\ |\vec{b}|}$$ ಮತ್ತು $$\sin\theta = \frac{|\vec{a} \times \vec{b}|}{|\vec{a}|\ |\vec{b}|}$$

$$\hat{n} = \frac{\vec{a} \times \vec{b}}{\vec{a} \times \vec{b}}$$

ಉದಾಹರಣೆಗಳು

1. $\vec{a} = 2\hat{i} + 3\hat{j} - 6\hat{k}$ ಮತ್ತು $\vec{b} = 3\hat{i} - 4\hat{j} + 5\hat{k}$ ಆದಾಗ ಈ ಕೆಳಗಿನವುಗಳನ್ನು ಕಂಡುಹಿಡಿಯರಿ :

(i) $\vec{a} \cdot \vec{b}$. (ii) $\cos\theta$ (iii) $\hat{a} + \hat{b}$

(i) $$\vec{a} \cdot \vec{b} = (2\hat{i} + 3\hat{j} - 6\hat{j}).\ (3\hat{i} - 4\hat{j} + 5\hat{k})$$

$$= (2)\ (3) + (3)(-4) + (-6)(5)$$

$$= -36$$

(ii) $$\cos\ \theta = \frac{\vec{a} \cdot \vec{b}.}{|\vec{a}| \cdot |\vec{b}|}$$

$$|\vec{a}| = \sqrt{(2)^2 + (3)^2 + (-6)^2} = \sqrt{49} = 7$$

$$|\vec{b}| = \sqrt{(3)^2 + (-4)^2 + (5)^2} = \sqrt{50} = 5\sqrt{2}$$

$$\cos\theta = \frac{-36}{7\sqrt{50}} = \frac{-36}{35\sqrt{2}} = -\frac{18\sqrt{2}}{35}$$

(iii) $\hat{a} = \dfrac{\vec{a}}{|\vec{a}|}$ $\hat{b} = \dfrac{\vec{b}}{|\vec{b}|}$

$\therefore \hat{a} = \dfrac{2\hat{i} + 3\hat{j} - 6\hat{k}}{\sqrt{4+9+36}}$ ಮತ್ತು $\hat{b} = \dfrac{3\hat{i} - 4\hat{j} + 5\hat{k}}{\sqrt{32+42+52}}$

$\hat{a} = \dfrac{2\hat{i} + 3\hat{j} - 6\hat{k}}{7}$ ಮತ್ತು $\hat{b} = \dfrac{3\hat{i} - 4\hat{j} + 5\hat{k}}{5\sqrt{2}}$

$\hat{a} + \hat{b} = \dfrac{2\hat{i} + 3\hat{j} - 6\hat{k}}{7} + \dfrac{3\hat{i} - 4\hat{j} + 5\hat{k}}{5\sqrt{2}}$

2. $\vec{a} = 3\hat{i} - 2\hat{j} + \hat{k}$ $\vec{b} = 2\hat{i} + 3\hat{j}$ ಆದರೆ $\vec{a}$ ಮತ್ತು $\vec{b}$ ಗಳು ಲಂಬವಾಗಿವೆ ಎಂದು ತೋರಿಸಿ.

ಈಗ, $\vec{a} \cdot \vec{b} = 6 - 6 + 0 = 0$

$\therefore \vec{a}$ ಮತ್ತು $\vec{b}$ ಗಳು ಲಂಬವಾಗಿವೆ.

3. $\vec{a} = 2\lambda\hat{i} + \lambda\hat{j} - 4\hat{k}$ ಮತ್ತು $\vec{b} = \lambda\hat{i} - 2\hat{j} + \hat{k}$ ಸದಿಶಗಳು ಲಂಬವಾಗಿದ್ದರೆ $\lambda$ದ ಬೆಲೆಯನ್ನು ಕಂಡುಹಿಡಿಯಿರಿ.

$\vec{a}$ ಮತ್ತು $\vec{b}$ ಗಳು ಲಂಬವಾಗಿದ್ದರೆ $\vec{a} \cdot \vec{b} = 0$

ಅಂದರೆ, $\vec{a} \cdot \vec{b}, = 2\lambda^2 - 2\lambda - 4 = 0$

ಅಥವಾ $\lambda^2 - \lambda - 2 = 0$

ಅಥವಾ $(\lambda - 2)(\lambda + 1) = 0$

ಅಥವಾ $\lambda = 2, \quad \lambda = -1$

4. $\vec{a} = \hat{i} + \hat{j} + \hat{k}$ $\vec{b} = 2\hat{i} + 3\hat{j} - \hat{k}$ ಆದರೆ ಈ ಕೆಳಗಿನವುಗಳನ್ನು ಕಂಡು ಹಿಡಿಯಿರಿ.

(i) $\vec{a} \times \vec{b}$ (ii) $\sin\theta$ (iii) $\vec{a}$ ಮತ್ತು $\vec{b}$ ಗಳಿಗೆ ಲಂಬವಾಗಿರುವ ಸದಿಶ

ಈಗ, $\vec{a} \times \vec{b} = \begin{vmatrix} \hat{i} & \hat{j} & \hat{k} \\ 1 & 1 & 1 \\ 2 & 3 & -1 \end{vmatrix}$

$= \hat{i}(-1-3) - \hat{j}(-1-2) + \hat{k}(3-2)$

$= 4\hat{i} + 3\hat{j} + \hat{k}$

(ii) $\sin\theta = \dfrac{|\vec{a} \times \vec{b}|}{|\vec{a}|\ |\vec{b}|} = \dfrac{\sqrt{16+9+1}}{\sqrt{3}\ \sqrt{14}} = \dfrac{26}{\sqrt{42}} = \dfrac{13}{\sqrt{21}}$

(iii) $\hat{n} = \dfrac{\vec{a} \times \vec{b}}{|\vec{a} \times \vec{b}|} = \dfrac{-4\hat{i} + 3\hat{j} + \hat{k}}{\sqrt{16+9+1}}$

$= \dfrac{1}{\sqrt{26}}\ (-4\hat{i} + 3\hat{j} + \hat{k})\ \sqrt{26}$

ಸದಿಶವು $\vec{a}$ ಮತ್ತು $\vec{b}$ ಗಳಿಗೆ ಲಂಬವಾಗಿದೆ.

5. *A, B, C, D* ಬಿಂದುಗಳ ಸ್ಥಾನ ಸದಿಶಗಳು

$\hat{i} + \hat{j} + \hat{k}$, $2\hat{i} + 3\hat{j}$, $3\hat{i} + 5\hat{j} - 2\hat{k}$ ಮತ್ತು $\hat{k} - \hat{j}$ ಆದರೆ

*AB* II' *CD* ಎಂದು ತೋರಿಸಿ.

ಈಗ, $O$ ಮೂಲಬಿಂದುವಾಗಿದ್ದರೆ

$$\vec{OA} = \hat{i} + \hat{j} + \hat{k}, \quad \vec{OB} = 2\hat{i} + 3\hat{j}$$

$$\vec{OC} = 3\hat{i} + 5\hat{j} - 2\hat{k}$$ ಮತ್ತು $$\vec{OD} = \hat{k} - \hat{j}$$

ಈಗ, $\vec{AB} = \vec{OB} - \vec{OA} = \hat{i} + 2\hat{j} - \hat{k}$

$$\vec{CD} = \vec{OD} - \vec{OC} = -3\hat{i} - 6\hat{j} + 3\hat{k}$$

$$\therefore \vec{AB} \times \vec{CD} = \begin{vmatrix} \hat{i} & \hat{j} & \hat{k} \\ 1 & 2 & -1 \\ -3 & -6 & 3 \end{vmatrix}$$

$$= \hat{i}(6-6) - \hat{j}(3-3) + \hat{k}(-6+6)$$

$$= \hat{i}(0) - \hat{j}(0) + \hat{k}(0) = 0$$

$$\therefore \vec{AB} \parallel \vec{CD}$$

6. $\hat{i} + 2\hat{j} + 3\hat{k}$ ಮತ್ತು $3\hat{i} - 2\hat{j} + \hat{k}$ ಸಮಾನಾಂತರ ಚತುರ್ಭುಜದ ಎರಡು ಅಕ್ಕಪಕ್ಕದ ಭುಜಗಳಾಗಿದ್ದರೆ ಅದರ ವಿಸ್ತೀರ್ಣವನ್ನು ಕಂಡುಹಿಡಿಯಿರಿ.

ಸಮಾನಾಂತರ ಚತುರ್ಭುಜದ ವಿಸ್ತೀರ್ಣ $= |\vec{a} \times \vec{b}|$

$$\vec{a} \times \vec{b} = \begin{vmatrix} \hat{i} & \hat{j} & \hat{k} \\ 1 & 2 & 3 \\ 3 & -2 & 1 \end{vmatrix}$$

$$= 8\hat{i} + 8\hat{j} + 8\hat{k}$$

$\therefore$ ವಿಸ್ತೀರ್ಣ $= |\vec{a} \times \vec{b}| = \sqrt{8}\,(1+1+1) = 8\sqrt{3}$

7. $\vec{a} = 3\hat{i} + 4\hat{j}$ ಮತ್ತು $\vec{b} = -5\hat{i} + 7\hat{j}$ ಇವೆರಡು ಸದಿಶಗಳು ಎರಡು ಒಂದು ತ್ರಿಕೋನದ ಅಕ್ಕ ಪಕ್ಕದ ಭುಜಗಳಾಗಿದ್ದರೆ ತ್ರಿಕೋನದ ವಿಸ್ತೀರ್ಣವನ್ನು ಕಂಡುಹಿಡಿಯಿರಿ.

ತ್ರಿಕೋನದ ವಿಸ್ತೀರ್ಣ = ½ ಸಮಾನಾಂತರ ಚತುರ್ಭುಜದ ವಿಸ್ತೀರ್ಣ

$= \frac{1}{2} |\vec{a} \times \vec{b}|$

$$\vec{a} \times \vec{b} = \begin{vmatrix} \hat{i} & \hat{j} & \hat{k} \\ 3 & 4 & 0 \\ -5 & 7 & 0 \end{vmatrix} = 41\hat{k}$$

ಅಥವಾ $|a \times b| = 41$

ಆದ್ದರಿಂದ, ತ್ರಿಕೋನದ ವಿಸ್ತೀರ್ಣ $= \frac{41}{2}$

8. $3\hat{i} + \hat{j} - 2\hat{k}$ ಮತ್ತು $\hat{i} - 3\hat{j} + 4\hat{k}$ ಇವು ಎರಡು ಸಮಾನಾಂತರ ಚತುರ್ಭುಜದ ಕರ್ಣಗಳಾಗಿದ್ದರೆ, ಸಮಾನಾಂತರ ಚತುರ್ಭುಜದ ವಿಸ್ತೀರ್ಣವನ್ನು ಕಂಡುಹಿಡಿಯಿರಿ.
*ABCD* ಸಮಾನಾಂತರ ಚತುರ್ಭುಜದಲ್ಲಿ




ಚಿತ್ರ 4.16

$\vec{AC} = 3\hat{i} + \hat{j} - 2\hat{k}$

ಮತ್ತು $\vec{BD} = \hat{i} - 3\hat{j} + 4\hat{k}$ ಆಗಿರಲಿ (ಚಿತ್ರ 4.16).

*ABCD* ಯ ವಿಸ್ತೀರ್ಣ $= 4\ \Delta^{le} \times$ *COD* ಯ ವಿಸ್ತೀರ್ಣ

$= 4 \times \frac{1}{2}\ \vec{OC} \times \vec{OD}$

$= 2\ (\frac{1}{2}\ \vec{AC}) \times (\frac{1}{2}\ \vec{BD})$

$= \frac{1}{2}\ \vec{AC} \times \vec{BD}$

ಈಗ, $\vec{AC} \times \vec{BD} = \begin{vmatrix} \hat{i} & \hat{j} & \hat{k} \\ 3 & 1 & -2 \\ 1 & -3 & 4 \end{vmatrix}$

$= -2\hat{i} - 14\hat{j} - 10\hat{k}$

$\therefore$ $ABCD$ಯ ವಿಸ್ತೀರ್ಣ $= \frac{1}{2}\sqrt{4+196+100}$

$= \frac{1}{2}\sqrt{300}$

$= 5\sqrt{3}$ ಚದರ ಮೂಲಮಾನಗಳು.

9. $\hat{a}$ ಮತ್ತು $\hat{b}$ ಎರಡು ಏಕ ಸದಿಶಗಳಾಗಿದ್ದು $\theta$ ಅವುಗಳ ನಡುವಿನ ಕೋನವಾಗಿದ್ದರೆ

$\sin(\theta/2) = \frac{1}{2}(\hat{a} - \hat{b})$ ಎಂದು ತೋರಿಸಿ.

$\vec{OA} = \hat{a}$ ಮತ್ತು $\vec{OB} = \hat{b}$ ಆಗಿರಲಿ.

$\therefore \vec{BA} = \hat{a} - \hat{b}$

$|\vec{BA}| = |BA| = |\hat{a} - \hat{b}|$

$(BA)^2 = (\hat{a} - \hat{b}).(\hat{a} - \hat{b}) = a^2 + b^2 - 2\hat{a} . \hat{b}$

$= 1+1 - 2|\hat{a}||\hat{b}| \cos\theta$

ಅಂದರೆ, $BA^2 = 2(1-\cos\theta) = 2.2 \sin^2(\theta/2)$

$\therefore BA = 2\sin(\theta/2)$

ಅಥವಾ $\frac{1}{2} BA = \sin(\theta/2)$

ಅಂದರೆ, $\frac{1}{2}|\hat{a} - \hat{b}| = \sin(\theta/2)$

10) $|\vec{a} + \vec{b}| = |\vec{a} - \vec{b}|$ ಆದರೆ $\vec{a}$ ಮತ್ತು $\vec{b}$ ಗಳು ಲಂಬವಾಗಿವೆ ಎಂದು ತೋರಿಸಿ.

ಈಗ $|\vec{a} + \vec{b}|^2 = |\vec{a} - \vec{b}|^2$

ಅಥವಾ $(\vec{a} + \vec{b}) \cdot (\vec{a} + \vec{b}) = (\vec{a} - \vec{b}) \cdot (\vec{a} - \vec{b})$

ಅಂದರೆ, $a^2 + b^2 + 2\vec{a} \cdot \vec{b} = a^2 + b^2 - 2\vec{a} \cdot \vec{b}$

ಅಥವಾ $4\,\vec{a} \cdot \vec{b} = 0$

ಅಥವಾ $\vec{a} \cdot \vec{b} = 0$ $\therefore$ $\vec{a}$ ಮತ್ತು $\vec{b}$ ಲಂಬವಾಗಿವೆ

## 4.6 ಮೂರು ಸದಿಶಗಳ ಅದಿಶ ಗುಣಲಬ್ಧ (ಸ್ಕೇಲಾರ್ ಟ್ರಿಪಲ್ ಪ್ರಾಡಕ್ಟ್)

$\vec{a}, \vec{b}, \vec{c}$ ಗಳು ಶೂನ್ಯವಲ್ಲದ ಮೂರು ಸದಿಶಗಳಾಗಿದ್ದರೆ $\vec{a} \cdot (\vec{b} \times \vec{c})$ ಆ ಮೂರು ಸದಿಶಗಳ ಅದಿಶ ಗುಣಲಬ್ಧವೆಂದು ಕರೆಯುತ್ತೇವೆ. ಇದನ್ನು $\vec{a}\ \vec{b}\ \vec{c}$ ಎಂದೂ ಬರೆಯುತ್ತೇವೆ.

ಈಗ, $\vec{a} = a_1\hat{i} + a_2\hat{j} + a_3\hat{k}$

$\vec{b} = b_1\hat{i} + b_2\hat{j} + b_3\hat{k}$

$\vec{c} = c_1\hat{i} + c_2\hat{j} + c_3\hat{k}$

ಆದಾಗ $\vec{a} \cdot (\vec{b} \times \vec{c})$ ಯನ್ನು ಕಂಡು ಹಿಡಿಯೋಣ

$$\vec{b} \times \vec{c} = \begin{vmatrix} \hat{i} & \hat{j} & \hat{k} \\ b_1 & b_2 & b_3 \\ c_1 & c_2 & c_3 \end{vmatrix}$$

$$= \hat{i}(b_2 c_3 - b_3 c_2) - \hat{j}(b_1 c_3 - b_3 c_1) + \hat{k}(b_1 c_2 - b_2 c_1)$$

$\therefore$ $\vec{a} \cdot (\vec{b} \times \vec{c})$

$$= (a_1\hat{i} + a_2\hat{j} + a_3\hat{k}) \cdot \hat{i}(b_2 c_3 - b_3 c_2) - \hat{j}(b_1 c_3 - b_3 c_1)$$

$$+ \hat{k}(b_1 c_2 - b_2 c_1)$$

$$= a_1(b_2c_3 - b_3c_2) - a_2(b_1c_3 - b_3c_1) + a_3(b_1c_2 - b_2c_1)$$

$$\therefore \vec{a}\ (\vec{b} \times \vec{c}) = \begin{vmatrix} a_1 & a_2 & a_3 \\ b_1 & b_2 & b_3 \\ c_1 & c_2 & c_3 \end{vmatrix}$$

ನಾವು ಈ ಕೆಳಗಿನ ಅಂಶಗಳನ್ನು ಗಮನಿಸುತ್ತೇವೆ

(i) $\vec{a}\ .\ (\vec{b} \times \vec{c})$ ಯು ಸದಿಶವಲ್ಲ; ಇದೊಂದು ಅದಿಶ ಗುಣಲಬ್ಧ

(ii) ಚಕ್ರೀಯವಾಗಿ $\vec{a}, \vec{b}, \vec{c}$ ಗಳನ್ನು ಬದಲಾಯಿಸಿದಾಗ ಈ ಸದಿಶಗಳ ಅಧಿಕ ಗುಣಲಬ್ಧವು ಒಂದೇ ಆಗಿರುತ್ತದೆ. ಅಂದರೆ

$$\vec{a}.\ (\vec{b} \times \vec{c}) = \vec{b}.\ (\vec{c} \times \vec{a}) = \vec{c}.\ (\vec{a} \times \vec{b})$$

ಅಥವಾ $[\vec{a}\ \ \vec{b}\ \ \vec{c}] = [\vec{b}\ \ \vec{c}\ \ \vec{a}] = [\vec{c}\ \ \vec{a}\ \ \vec{b}]$

ಮೇಲಿನ ಫಲಿತಾಂಶವನ್ನು ಹೀಗೆ ಸಾಧಿಸಬಹುದು:

$$\vec{a}\ .\ \vec{b} \times \vec{c} = \begin{vmatrix} a_1 & a_2 & a_3 \\ b_1 & b_2 & b_3 \\ c_1 & c_2 & c_3 \end{vmatrix}$$

$$= - \begin{vmatrix} b_1 & b_2 & b_3 \\ a_1 & a_2 & a_3 \\ c_1 & c_2 & c_3 \end{vmatrix}$$ ಮೊದಲಿನ ಎರಡು ಸಾಲುಗಳನ್ನು ಅದಲು ಬದಲು ಮಾಡಿದಾಗ

$$= + \begin{vmatrix} b_1 & b_2 & b_3 \\ c_1 & c_2 & c_3 \\ a_1 & a_2 & a_3 \end{vmatrix}$$ ಎರಡನೇ ಮತ್ತು ಮೂರನೇ ಸಾಲುಗಳನ್ನು ಅದಲು ಬದಲು ಮಾಡಿದಾಗ

$$\therefore \vec{a}\ .\ (\vec{b} \times \vec{c}) = \vec{b}\ .\ (\vec{c} \times \vec{a})$$

ಹೀಗೆಯೇ $\vec{b}\ .\ (\vec{c} \times \vec{a}) = \vec{c}\ .\ (\vec{a} \times \vec{b})$ ಎಂದು ತೋರಿಸಬಹುದು.

$$\therefore \vec{a}\ .\ (\vec{b} \times \vec{c}) = \vec{b}\ .\ (\vec{c} \times \vec{a}) = \vec{c}\ .\ (\vec{a} \times \vec{b})$$

ಅಥವಾ $[\vec{a}\ \vec{b}\ \vec{c}] = [\vec{b}\ \vec{c}\ \vec{a}] = [\vec{c}\ \vec{a}\ \vec{b}]$

(iii) 3 ಸದಿಶಗಳ ಅದಿಶ ಗುಣಲಬ್ಧದಲ್ಲಿ ಎರಡು ಸದಿಶಗಳು ಒಂದೇ ಆಗಿದ್ದರೆ ಅದರ ಬೆಲೆ ಸೊನ್ನೆಯಾಗುವುದು.

ಉದಾಹರಣೆ : $[\vec{a}\ \vec{b}\ \vec{b}] = \vec{a} \cdot [\vec{b} \times \vec{b}]$

$$= \begin{vmatrix} a_1 & a_2 & a_3 \\ b_1 & b_2 & b_3 \\ b_1 & b_2 & b_3 \end{vmatrix}$$

$$= 0$$

(ಎರಡು ಸಾಲುಗಳು ಒಂದೇ ಆಗಿರುವುದು)

**(iv) ಜ್ಯಾಮಿತೀಯ ಅರ್ಥ**

$\vec{a}$, $\vec{b}$ ಮತ್ತು $\vec{c}$ ಗಳು ಸಮಾಂತರ ಚತುರ್ಭುಜದ (ಆರು) ಮುಖಿಗಳ ಘನಾಕೃತಿಯ (ಪ್ಯಾರಲಲೋಪೈಪೆಡ್) , ಒಂದು ಮೂಲೆಯಲ್ಲಿ ಕೂಡುವ ಅಂಚುಗಳಾಗಿದ್ದರೆ, $\vec{a} \cdot (\vec{b} \times \vec{c})$ ಯು ಇದರ **ಘನಫಲವನ್ನು** ಸೂಚಿಸುತ್ತದೆ. (ಚಿತ್ರ 4.17) *O P Q R S. T U V* ಒಂದು ಸಮಾನಾಂತರ ಚತುರ್ಭುಜದ (ಆರು) ಮುಖಿಗಳ ಘನಾಕೃತಿಯಾಗಿದ್ದು ಅದರ ಒಂದು ಮೂಲೆಯಲ್ಲಿ ಅಂತ್ಯಗೊಳ್ಳುವ ಅಂಚುಗಳು $\vec{a}$, $\vec{b}$, $\vec{c}$ ಯಾಗಿವೆ.

$OP = b$, $OR = c$ ಮತ್ತು $OV = a$ (ಚಿತ್ರ 4.17).

$\vec{b} \times \vec{c}$ ಯು *OPQR* ಸಮತಲಕ್ಕೆ ಲಂಬವಾಗಿದೆ.

$\vec{b}$ ಮತ್ತು $\vec{c}$ ಗಳ ನಡುವಿನ ಕೋನ $\alpha$ ಎಂದಿರಲಿ. ಅಂದರೆ, $POR = \alpha$

$\vec{a}$ ಮತ್ತು $\vec{b} \times \vec{c}$ ಗಳ ನಡುವಿನ ಕೋನ $\theta$ ಎಂದಿರಲಿ.




*VM* ರೇಖೆಯನ್ನು ಸಮತಲ *OPQR*ಗೆ ಲಂಬವಾಗಿ ಎಳೆಯಲಾಗಿದೆ.

ಚಿತ್ರ 4.17

$$\therefore\ \vec{a}.(\vec{b}\times\vec{c}) = |\vec{a}|\,|\vec{b}\times\vec{c}|\cos\theta$$

$$= (OV\cos\theta)\ |\vec{b}|\ |\vec{c}|\ \sin\alpha$$

$$= (VM)\ [(OP)\ (OR)\sin\alpha]$$

= (ಘನಾಕೃತಿಯ ಎತ್ತರ) (*OPQR*ನ ವಿಸ್ತೀರ್ಣ)

ಏಕೆಂದರೆ, $\cos\theta = VM / OV$

$VM = OV\cos\theta$ = ಎತ್ತರ

$\therefore\ \vec{a}.(\vec{b}\times\vec{c}) = OPQRSTUV$ ಯ ಘನಫಲ. ಇಲ್ಲಿ, *OPQRSTUV* ಯು ಸಮಾನಾಂತರ ಚತುರ್ಭುಜ ಮುಖಗಳ ಘನಾಕೃತಿಯನ್ನು ಸೂಚಿಸುತ್ತದೆ.

(v) **$\vec{a}, \vec{b}, \vec{c}$ ಗಳು ಒಂದೇ ಸಮತಲದಲ್ಲಿದ್ದರೆ ಆಗ ಘನಫಲ ಸೊನ್ನೆಯಾಗುವುದು.**

$$\therefore\ \vec{a}.(\vec{b}\times\vec{c}) = 0$$

ಆದ್ದರಿಂದ 3 ಸದಿಶಗಳು ಒಂದೇ ಸಮತಲದಲ್ಲಿದ್ದರೆ ಅವುಗಳ ಅದಿಶ ಗುಣಲಬ್ಧ ವು ಸೊನ್ನೆಯಾಗುವುದು.

## 4.7 ಮೂರು ಸದಿಶಗಳ ಸದಿಶ ಗುಣಲಬ್ಧ (ವೆಕ್ಟರ್ ಟ್ರಿಪಲ್ ಪ್ರಾಡಕ್ಟ್)

$\vec{a}, \vec{b}, \vec{c}$ ಗಳು 3 ಸದಿಶಗಳಾಗಿದ್ದರೆ $\vec{a}\times(\vec{b}\times\vec{c})$ ಆ 3 ಸದಿಶಗಳ ಸದಿಶ ಗುಣಲಬ್ಧ ಎಂದು ಕರೆಯುತ್ತೇವೆ. ಇದು ಸದಿಶವಾಗಿರುತ್ತದೆ.

ಪ್ರಮೇಯ : $\vec{a} \times (\vec{b} \times \vec{c}) = (\vec{a} \cdot \vec{c})\, \vec{b} - (\vec{a} \cdot \vec{b})\, \vec{c}$

ಸಾಧನೆ : $\vec{a} = a_1 \hat{i} + a_2 \hat{j} + a_3 \hat{k}$

$\vec{b} = b_1 \hat{i} + b_2 \hat{j} + b_3 \hat{k}$

ಮತ್ತು $\vec{c} = c_1 \hat{i} + c_2 \hat{j} + c_3 \hat{k}$ ಆಗಿರಲಿ.

ಈಗ, $\vec{b} \times \vec{c} = \begin{vmatrix} \hat{i} & \hat{j} & \hat{k} \\ b_1 & b_2 & b_3 \\ c_1 & c_2 & c_3 \end{vmatrix}$

$= \hat{i}(b_2 c_3 - b_3 c_2) - \hat{j}(b_1 c_3 - b_3 c_1) + \hat{k}(b_1 c_2 - b_2 c_1)$

$\therefore \vec{a} \times (\vec{b} \times \vec{c}) = \begin{vmatrix} \hat{i} & \hat{j} & \hat{k} \\ a_1 & a_2 & a_3 \\ b_2 c_3 - b_3 c_2 & b_3 c_1 - b_1 c_3 & b_1 c_2 - b_2 c_1 \end{vmatrix}$

$= \Sigma\, [a_2(b_1 c_2 - b_2 c_1) - a_3 (b_3 c_1 - b_1 c_3)]\, \hat{i}$

$= \Sigma\, [a_2 b_1 c_2 - a_2 b_2 c_1 - a_3 b_3 c_1 + a_3 b_1 c_3]\, \hat{i}$

[$a_1 b_1 c_1$ ನ್ನು ಕೂಡಿಸಿ ಮತ್ತು ಕಳೆದಾಗ]

$= \Sigma\, [a_1 b_1 c_1 + a_2 b_1 c_2 + a_3 b_1 c_3 - (a_1 b_1 c_1 + a_2 b_2 c_1 + a_3 b_3 c_1)]\, \hat{i}$

$= \Sigma\, [(a_1 c_1 + a_2 c_2 + a_3 c_3)\, b_1 - (a_1 b_1 + a_2 b_2 + a_3 b_3)\, c_1]\, \hat{i}$

$= (\vec{a} \cdot \vec{c})\, \Sigma\, b_1 \hat{i} - (\vec{a} \cdot \vec{b})\, c_1 \hat{i}$

$= (\vec{a} \cdot \vec{c})\, \vec{b} - (\vec{a} \cdot \vec{b})\, \vec{c}$

ಈ ಕೆಳಗಿನ ಮುಖ್ಯವಾದ ಅಂಶಗಳನ್ನು ಗಮನಿಸಿಸೋಣ

(i) $\vec{a} \times (\vec{b} \times \vec{c})$ ಯು ಒಂದು ಸದಿಶವಾಗಿದೆ

(ii) $\vec{a} \times (\vec{b} \times \vec{c}) \neq (\vec{a} \times \vec{b}) \times \vec{c}$

ಅಂದರೆ, ಮೂರು ಸದಿಶಗಳ ಸದಿಶ ಗುಣಲಬ್ಧವು ಸಹವರ್ತನೀಯವಲ್ಲ.

$$(\vec{a} \times \vec{b}) \times \vec{c} = -\vec{c} \times (\vec{a} \times \vec{b})$$

$$= -[(\vec{c} \cdot \vec{b})\ \vec{a} - (\vec{c} \cdot \vec{a})\ \vec{b}]$$

$$= (\vec{c} \cdot \vec{a})\ \vec{b} - (\vec{c} \cdot \vec{b})\ \vec{a}$$

$$= (\vec{a} \cdot \vec{c})\ \vec{b} - (\vec{b} \cdot \vec{c})\ \vec{a}$$

$$= \vec{a} \times (\vec{b} \times \vec{c})$$

$$\therefore\ a \times (b \times c) \neq (a \times b) \times c$$

**ಉದಾಹರಣೆಗಳು**

1. $\vec{a} = 3\hat{i} - 2\hat{j} + 2\hat{k},\ \vec{b} = 6\hat{i} + 4\hat{j} - 2\hat{k}$ ಮತ್ತು $\vec{c} = -3\hat{i} - 2\hat{j} - 4\hat{k}$ ಆದರೆ $\vec{a} \times (\vec{b} \times \vec{c})$ ಮತ್ತು $(\vec{a} \times \vec{b}) \times \vec{c}$ ಗಳನ್ನು ಕಂಡುಹಿಡಿಯಿರಿ.

ಈಗ, $\vec{a} \times (\vec{b} \times \vec{c}) = (\vec{a} \cdot \vec{c})\ \vec{b} - (\vec{a} \cdot \vec{b})\ \vec{c}$ ಎಂದು ತಿಳಿದಿದೆ

$$\vec{a} \cdot \vec{c} = -9 + 4 - 8 = -13$$

$$\vec{a} \cdot \vec{b} = 18 - 8 - 4 = 6$$

$$\therefore (\vec{a} \cdot \vec{c})\ \vec{b} = -13(6\hat{i} + 4\hat{j} - 2\hat{k})$$

$$= -78\hat{i} - 52\hat{j} + 26\hat{k}$$

$$(\vec{a} \cdot \vec{b})\ \vec{c} = 6(-3\hat{i} - 2\hat{j} - 4\hat{k}) = -18\hat{i} - 12\hat{j} - 24\hat{k}$$

$$\therefore (\vec{a} \cdot \vec{c})\ \vec{b} - (\vec{a} \cdot \vec{b})\ \vec{c} = -60\hat{i} - 40\hat{j} + 60\hat{k}$$

$$= -20(3\hat{i} + 2\hat{j} - 3\hat{k})$$

ಹಾಗೆಯೇ, $(\vec{b} \times \vec{c}) \times \vec{c} = (\vec{a} \cdot \vec{c})\ \vec{b} - (\vec{b} \cdot \vec{c})\ \vec{a}$

$\vec{a} \cdot \vec{c} = -13$

$\vec{b} \cdot \vec{c} = -18 - 8 + 8 = -18$

$(\vec{a} \cdot \vec{c})\ \vec{b} = -13\,(6\hat{i} + 4\hat{j} - 2\hat{k})$

$= 78\hat{i} - 52\hat{j} + 26\hat{k}$

$(\vec{b} \cdot \vec{c})\ \vec{a} = -18(3\hat{i} - 2\hat{j} + 2\hat{k})$

$= -54\hat{i} + 36\hat{j} - 36\hat{k}$

$\therefore (\vec{a} \cdot \vec{c})\ \vec{b} - (\vec{b} \cdot \vec{c})\ \vec{a} = -24\hat{i} - 98\hat{j} + 62\hat{k}$

2. $[\vec{a} \times \vec{b} \quad \vec{b} \times \vec{c} \quad \vec{c} \times \vec{a}] = [\vec{a} \quad \vec{b} \quad \vec{c}]^2$ ಎಂದು ಸಾಧಿಸಿ.

$LHS \equiv \vec{a} \times \vec{b} \cdot [(\vec{b} \times \vec{c}) \times (\vec{c} \times \vec{a})]$

$\vec{p} = \vec{b} \times \vec{c}$ ಎಂದಿರಲಿ.

$\therefore LHS = (\vec{a} \times \vec{b}) \cdot \{p \times (\vec{c} \times \vec{a})\}$

$= (\vec{a} \times \vec{b}) \cdot \{(\vec{p} \cdot \vec{a})\ \vec{c} - (\vec{p} \cdot \vec{c})\ \vec{a}\}$

$= (\vec{a} \times \vec{b}) \cdot \{(\vec{a} \cdot \vec{p})\ \vec{c} - (\vec{c} \cdot \vec{p})\ \vec{a}\}$

$= (\vec{a} \times \vec{b}) \cdot [\vec{a} \cdot (\vec{b} \times \vec{c})\ \{\vec{c} - \vec{c}\}\ (\vec{b} \times \vec{c})]\ \vec{a}$

$= (\vec{a} \times \vec{b}) \cdot \{[\vec{a} \quad \vec{b} \quad \vec{c}]\ \vec{c} - [\vec{c} \quad \vec{b} \quad \vec{c}]\ \vec{a}\}$

$= (\vec{a} \times \vec{b}) \cdot \{[\vec{a} \quad \vec{b} \quad \vec{c}]\ \vec{c} - (0) \cdot \vec{a}\}$

$= \{(\vec{a} \times \vec{b}) \cdot \vec{c}\}\ [\vec{a} \quad \vec{b} \quad \vec{c}]$

$= [\vec{a} \quad \vec{b} \quad \vec{c}]\ [\vec{a} \quad \vec{b} \quad \vec{c}]$

$= [\vec{a} \quad \vec{b} \quad \vec{c}]^2$

3. $\vec{a} \times (\vec{b} \times \vec{c}) = (\vec{a} \times \vec{b}) \times \vec{c}$ ಆದರೆ

$\vec{b} = \vec{0}$ ಅಥವಾ $\vec{c} \parallel \vec{a}$

ಈಗ, $\vec{a} \times (\vec{b} \times \vec{c}) = (\vec{a} \times \vec{b}) \times \vec{c}$ ಎಂದು ಕೊಟ್ಟಿದೆ.

ಅಂದರೆ, $(\vec{a} \cdot \vec{c}) \vec{b} - (\vec{a} \cdot \vec{b}) \vec{c} = (\vec{a} \cdot \vec{c}) \vec{b} - (\vec{b} \cdot \vec{c}) \vec{a}$

ಅಥವಾ $(\vec{a} \cdot \vec{b}) \vec{c} = (\vec{b} \cdot \vec{c}) \vec{a}$

ಅಥವಾ $(\vec{b} \cdot \vec{a}) \vec{c} - (\vec{b} \cdot \vec{c}) \vec{a} = \vec{0}$

ಅಂದರೆ, $\vec{b} \times (\vec{c} \times \vec{a}) = \vec{0}$

$\therefore \vec{b} = \vec{0}$ ಅಥವಾ $\vec{c} \times \vec{a} = \vec{0}$

ಅಂದರೆ, $\vec{b} = \vec{0}$ ಅಥವಾ $\vec{c} \parallel \vec{a}$

## ಉದಾಹರಣೆಗಳು

1. ಸಮಾನಾಂತರ ಚತುರ್ಭುಜ ಮುಖಗಳ ಘನಾಕೃತಿಯ ಒಂದು ಮೂಲೆಯಲ್ಲಿ ಅಂತ್ಯಗೊಳ್ಳುವ ಅಂಚುಗಳು $2\hat{i} - 3\hat{j} + 4\hat{k}$, $\hat{i} + 2\hat{j} - \hat{k}$ ಮತ್ತು $3\hat{i} - \hat{j} + 2\hat{k}$ ಆಗಿದ್ದರೆ ಅದರ ಘನಫಲವನ್ನು ಕಂಡುಹಿಡಿಯಿರಿ.

$$\text{ಘನಫಲ} = \begin{vmatrix} 2 & -3 & 4 \\ 1 & 2 & -1 \\ 3 & -1 & 2 \end{vmatrix}$$

$$= 2(4-1)+3(2+3)+4(-1-6) = -7$$

ಧನಾತ್ಮಕ ಬೆಲೆಯನ್ನು ತೆಗೆದುಕೊಂಡರೆ

ಘನ ಫಲ = 7 ಘನಮಾನಗಳು.

2. ಈ ಕೆಳಗಿನ ಸದಿಶಗಳು ಒಂದೇ ಸಮತಲದಲ್ಲಿರುವುವೆಂದು ತೋರಿಸಿ.

$\hat{i}+\hat{j}-\hat{k},\ -\hat{i}-5\hat{j}+\hat{k},\ -\hat{i}-9\hat{j}+7\hat{k}$

ಮೂರು ಸದಿಶಗಳಾದ $\vec{a},\ \vec{b},\ \vec{c}$ ಗಳು ಸಮತಲದಲ್ಲಿರಬೇಕಾದರೆ

$\vec{a}\,.\,(\vec{b}\times\vec{c}) = 0$ ಆಗಿರಬೇಕು.

ಈಗ, ಕೊಟ್ಟಿರುವ ಮೂರು ಸದಿಶಗಳ ಅದಿಶ ಗುಣಲಬ್ಧವು

$$\begin{vmatrix} 1 & 1 & -1 \\ -1 & -5 & 4 \\ -1 & -9 & 7 \end{vmatrix} = 1(-35+36)-1(-7+4) - 1(9-5) = 0$$

ಆದ್ದರಿಂದ, ಈ ಸದಿಶಗಳು ಒಂದೇ ಸಮತಲದಲ್ಲಿರುತ್ತವೆ.

3. $3\hat{i}+9\hat{j}-2\hat{k},\ \hat{i}+2\hat{j}+5\hat{k},\ 2\hat{i}+\lambda\hat{j}+10\hat{k}$ ಇವುಗಳು ಒಂದೇ ಸಮತಲದಲ್ಲಿ ಇದ್ದರೆ λದ ಬೆಲೆಯನ್ನು ಕಂಡುಹಿಡಿಯಿರಿ.

ಮೂರು ಸದಿಶಗಳಾದ $\vec{a},\ \vec{b},\ \vec{c}$ ಗಳು ಒಂದೇ ಸಮತಲದಲ್ಲಿದ್ದರೆ,

$\vec{a}.\ (\vec{b}\times\vec{c}) = 0.$

ಈಗ, ಕೊಟ್ಟಿರುವ 3 ಸದಿಶಗಳ ಅದಿಶ ಗುಣಲಬ್ಧವು

$$\begin{vmatrix} 3 & 9 & -2 \\ 1 & 2 & 5 \\ 2 & \lambda & 10 \end{vmatrix} = 0$$

ಅಂದರೆ, $3(20-5\lambda) - 9(10-10)-2(\lambda-4) = 0$

ಅಥವಾ $60 - 15\lambda - 2\lambda + 8 = 0$

ಅಥವಾ $17\lambda = 68$

ಅಥವಾ $\lambda = 4.$

4. ಈ ಕೆಳಗಿನ ಬಿಂದುಗಳು ಒಂದೇ ಸಮತಲದಲ್ಲಿರುತ್ತವೆ ಎಂದು ತೋರಿಸಿ.

$\vec{A}\ (4\hat{i}+8\hat{j}+12\hat{k})$

$\overrightarrow{B}$ $(2\hat{i} + 4\hat{j} + 6\hat{k})$

$\overrightarrow{C}$ $(3\hat{i} + 5\hat{j} + 4\hat{k})$

$\overrightarrow{D}$ $(5\hat{i} + 8\hat{j} + 5\hat{k})$

ಈ ನಾಲ್ಕು ಬಿಂದುಗಳು ಒಂದೇ ಸಮತಲದಲ್ಲಿದ್ದರೆ, ಸದಿಶಗಳಾದ

$\overrightarrow{AB}$, $\overrightarrow{AC}$ ಮತ್ತು $\overrightarrow{AD}$ ಗಳು ಒಂದೇ ಸಮತಲದಲ್ಲಿರುತ್ತವೆ.

$\therefore\ [\overrightarrow{AB}\ \overrightarrow{AC}\ \overrightarrow{AD}] = 0$

ಈಗ, $\overrightarrow{AB} = -2\hat{i} - 4\hat{j} - 6\hat{k}$

$\overrightarrow{AC} = -\hat{i} - 3\hat{j} - 8\hat{k}$

$\overrightarrow{AD} = \hat{i} - 7\hat{k}$

$$[\overrightarrow{AB}\ \overrightarrow{AC}\ \overrightarrow{AD}] = \begin{vmatrix} -2 & -4 & -6 \\ -1 & -3 & -8 \\ 1 & 0 & -7 \end{vmatrix}$$

$$= -2(21-0) + 4(.7 + 8) - 6(0 + 3)$$

$$= -42 + 60 - 18 = 0$$

ಆದ್ದರಿಂದ, $A$, $B$, $C$, $D$ ಗಳು ಒಂದೇ ಸಮತಲದಲ್ಲಿರುತ್ತವೆ.

5. $[\overrightarrow{a} + \overrightarrow{b}\quad \overrightarrow{b} + \overrightarrow{c}\quad \overrightarrow{c} + \overrightarrow{a}] = 2[\overrightarrow{a}\quad \overrightarrow{b}\quad \overrightarrow{c}]$ ಎಂದು ತೋರಿಸಿ.

ಈಗ, $(\overrightarrow{a} + \overrightarrow{b}\quad \overrightarrow{b} + \overrightarrow{c}\quad \overrightarrow{c} + \overrightarrow{a}) = (\overrightarrow{a} + \overrightarrow{b}) . \{(\overrightarrow{b} + \overrightarrow{c}) \times (\overrightarrow{c} + \overrightarrow{a})\}$

$= (\overrightarrow{a} + \overrightarrow{b}). \{\overrightarrow{b} \times \overrightarrow{c} + \overrightarrow{b} \times \overrightarrow{a} + \overrightarrow{c} \times \overrightarrow{c} + \overrightarrow{c} \times \overrightarrow{a}\}$

ಏಕೆಂದರೆ $\overrightarrow{c} \times \overrightarrow{c} = \overrightarrow{0}$

$$= \vec{a} \cdot (\vec{b} \times \vec{c}) + \vec{b} \cdot (\vec{b} \times \vec{c}) + \vec{a} \cdot (\vec{b} \times \vec{a}) + \vec{b} \cdot (\vec{b} \times \vec{a})$$

$$+ \vec{a} \cdot (\vec{c} \times \vec{a}) + \vec{b} \cdot (\vec{c} \times \vec{a})$$

$$= [\vec{a} \; \vec{b} \; \vec{c}] + [\vec{b} \; \vec{b} \; \vec{c}] + [\vec{a} \; \vec{b} \; \vec{a}] + [\vec{b} \; \vec{b} \; \vec{a}]$$

$$+ [\vec{a} \; \vec{c} \; \vec{a}] + [\vec{b} \; \vec{c} \; \vec{a}]$$

$= [\vec{a} \; \vec{b} \; \vec{c}] + [\vec{b} \; \vec{c} \; \vec{a}]$ [ಏಕೆಂದರೆ ಉಳಿದ ಪದಗಳು = 0]

$$= [\vec{a} \; \vec{b} \; \vec{c}] - [\vec{a} \; \vec{c} \; \vec{b}]$$

$$[\vec{a} \; \vec{b} \; \vec{c}] + [\vec{a} \; \vec{b} \; \vec{c}]$$

$$= 2 \left[ \vec{a} \; \vec{b} \; \vec{c} \right]$$

6. $\vec{a} \times (\vec{b} \times \vec{c}) + \vec{b} \times (\vec{c} \times \vec{a}) + \vec{c} \times (\vec{a} \times \vec{b}) = 0$ ಎಂದು ತೋರಿಸಿ.

$$\text{LHS} \equiv (\vec{a} \cdot \vec{c}) \vec{b} - (\vec{a} \cdot \vec{b}) \vec{c} + (\vec{b} \cdot \vec{a}) \vec{c} - (\vec{b} \cdot \vec{c}) \vec{a}$$

$$+ (\vec{c} \cdot \vec{b}) \vec{a} - (\vec{c} \cdot \vec{a}) \vec{b}$$

$$= (\vec{a} \cdot \vec{c}) \vec{b} - (\vec{a} \cdot \vec{b}) \vec{c} + (\vec{a} \cdot \vec{b}) \vec{c} - (\vec{b} \cdot \vec{c}) \vec{a}$$

$$+ (\vec{b} \cdot \vec{c}) \vec{a} - (\vec{a} \cdot \vec{c}) \vec{b} = 0 = \text{RHS}$$

7. ಸದಿಶಗಳನ್ನು ಉಪಯೋಗಿಸಿ ಒಂದು ಅರ್ಧ ವೃತ್ತದಲ್ಲಿರುವ ಕೋನವು ಲಂಬಕೋನವೆಂದು ಸಾಧಿಸಿ.




ಚಿತ್ರ 4.17

$P$ ಯು ಒಂದು ಅರ್ಧವೃತ್ತದಲ್ಲಿರುವ ಯಾವುದೇ ಬಿಂದುವಾಗಿರಲಿ. $AB$ಯು ವ್ಯಾಸವಾಗಿದ್ದು $O$ ವೃತ್ತದ ಕೇಂದ್ರವಾಗಿರಲಿ (ಚಿತ್ರ 4.17)

$\overrightarrow{OA} = \vec{a}$, $\overrightarrow{OB} = \vec{b}$ ಮತ್ತು $\overrightarrow{OP} = \vec{r}$ ಎಂದಿರಲಿ

ಈಗ, $\overrightarrow{AP} = \overrightarrow{OP} - \overrightarrow{OA} = \vec{r} - \vec{a}$

ಮತ್ತು $\overrightarrow{BP} = \overrightarrow{OP} - \overrightarrow{OB} = \vec{r} - \vec{b}$

$\therefore \overrightarrow{AP} . \overrightarrow{BP} = (\vec{r} - \vec{a}) . (\vec{r} - \vec{b})$

$= \vec{r} . \vec{r} - \vec{r} . \vec{b} - \vec{a} . \vec{r} + \vec{a} . \vec{b}$

$= |\vec{r}|^2 + \vec{r} . \vec{a} - \vec{a} . \vec{r} - \vec{a} . \vec{a}$ (ಏಕೆಂದರೆ $-\vec{b} = \vec{a}$)

$= |\vec{r}|^2 - |\vec{a}|^2$

$\therefore \overrightarrow{AP} . \overrightarrow{BP} = 0$ (ಏಕೆಂದರೆ $r = a$, ತ್ರಿಜ್ಯ)

ಅಂದರೆ, $AP$ ಮತ್ತು $BP$ ಗಳು ಲಂಬವಾಗಿವೆ ಅಥವಾ $\angle APB = 90°$.

8. ಸದಿಶಗಳನ್ನು ಉಪಯೋಗಿಸಿ ಸೈನ್ ನಿಯಮವನ್ನು ಅಂದರೆ ಯಾವುದೇ$\Delta$ದ $ABC$ ಯಲ್ಲಿ

$$\frac{a}{\sin A} = \frac{b}{\sin B} = \frac{c}{\sin C}$$ ಎಂದು ಸಾಧಿಸಿ.




ಚಿತ್ರ 4.18

$ABC$ ತ್ರಿಕೋನದಲ್ಲಿ $\overrightarrow{BC} = \overrightarrow{a}$, $\overrightarrow{CA} = \overrightarrow{b}$ ಮತ್ತು $\overrightarrow{AB} = \overrightarrow{c}$ ಎಂದಿರಲಿ (ಚಿತ್ರ 4.18).

ಆಗ, $\overrightarrow{a} + \overrightarrow{b} + \overrightarrow{c} = 0$ ಎಂದು ತಿಳಿದಿದೆ.

$$\therefore \overrightarrow{a} \times (\overrightarrow{a} + \overrightarrow{b} + \overrightarrow{c}) = \overrightarrow{a} \times \overrightarrow{0}$$

ಅಂದರೆ, $\overrightarrow{a} \times \overrightarrow{a} + \overrightarrow{a} \times \overrightarrow{b} + \overrightarrow{a} \times \overrightarrow{c} = 0$

ಅಥವಾ $\overrightarrow{a} \times \overrightarrow{b} + \overrightarrow{a} \times \overrightarrow{c} = 0$ (ಏಕೆಂದರೆ $\overrightarrow{a} \times \overrightarrow{a} = \overrightarrow{0}$)

ಅಥವಾ $\overrightarrow{a} \times \overrightarrow{b} = -\overrightarrow{a} \times \overrightarrow{c}$

ಅಥವಾ $\overrightarrow{a} \times \overrightarrow{b} = \overrightarrow{c} \times \overrightarrow{a}$ ....(1)

ಇದೇ ರೀತಿಯಲ್ಲಿ, $\overrightarrow{b} \times (\overrightarrow{a} + \overrightarrow{b} + \overrightarrow{c}) = \overrightarrow{b} \times \overrightarrow{0}$

ಅಥವಾ $\overrightarrow{b} \times \overrightarrow{a} + \overrightarrow{b} \times \overrightarrow{c} = \overrightarrow{0}$

ಅಥವಾ $\overrightarrow{b} \times \overrightarrow{c} = \overrightarrow{a} \times \overrightarrow{b}$ ......(2)

(1) ಮತ್ತು (2) ರಿಂದ

$$|\overrightarrow{a} \times \overrightarrow{b}| = |\overrightarrow{b} \times \overrightarrow{c}| = |\overrightarrow{c} \times \overrightarrow{a}|$$

ಅಥವಾ $a\, b \sin (\pi - C) = bc \sin (\pi - A) = ca \sin (\pi - B)$

ಅಥವಾ $a\, b \sin C = b\, c \sin A = c\, a \sin B$

ಮೇಲಿನ ಸಮೀಕರಣಗಳನ್ನು $a\, b\, c$ ಯಿಂದ ಭಾಗಿಸಿದಾಗ

$$\frac{\sin C}{c} = \frac{\sin A}{a} = \frac{\sin B}{b}$$

ಅಥವಾ $\dfrac{a}{\sin A} = \dfrac{b}{\sin B} = \dfrac{c}{\sin C}$

9. ಸದಿಶಗಳನ್ನು ಉಪಯೋಗಿಸಿ ಯಾವುದೇ ಒಂದು ತ್ರಿಕೋನ $ABC$ ಯಲ್ಲಿ $a^2 = b^2+c^2 - 2bc \cos A$ ಎಂದು ತೋರಿಸಿ.

$\overrightarrow{BC} = \overrightarrow{a}$, $\overrightarrow{CA} = \overrightarrow{b}$ ಮತ್ತು $\overrightarrow{AB} = \overrightarrow{c}$ ಎಂದಿರಲಿ.

ಆಗ, $\overrightarrow{a} + \overrightarrow{b} + \overrightarrow{c} = \overrightarrow{0}$ ಎಂದು ತಿಳಿದಿದೆ.

ಅಂದರೆ, $\overrightarrow{BC} + \overrightarrow{CA} + \overrightarrow{AB} = \overrightarrow{0}$

ಅಥವಾ $\overrightarrow{BC} = -(\overrightarrow{CA} + \overrightarrow{AB})$

$$\therefore |\overrightarrow{BC}|^2 = |\overrightarrow{CA}|^2 + |\overrightarrow{AB}|^2 + 2\overrightarrow{CA} \cdot \overrightarrow{AB}$$

ಅಂದರೆ, $a^2 = b^2+c^2 + 2bc \cos(\pi - A)$

ಅಥವಾ $a^2 = b^2+c^2 - 2bc \cos A$.

## ಅಭ್ಯಾಸ – 4.1

1. $\vec{a} = 2\hat{i} + \hat{j} + \hat{k}$, $\vec{b} = 3\hat{i} - \hat{j} + \hat{k}$ ಮತ್ತು $\vec{i} = \hat{i} - \hat{j} + 2\hat{k}$ ಆದರೆ $2\vec{a} - \vec{b} + 3\vec{c}$ ಯ ಬೆಲೆಯನ್ನು ಕಂಡುಹಿಡಿಯಿರಿ.

2. $\vec{a} = (2, -1, 3)$, $\vec{b} = (-2, 1, 4)$, $\vec{c} = (2, 1, -3)$ ಆದರೆ $2\vec{a} + \vec{b} - \vec{c}$ ಯ ಬೆಲೆಯನ್ನು ಕಂಡುಹಿಡಿಯಿರಿ. ಈ ದಿಕ್ಕಿನಲ್ಲಿರುವ ಏಕ ಸದಿಶವನ್ನು ಕಂಡುಹಿಡಿಯಿರಿ.

3. $P$ ಯ ಸ್ಥಾನ ಸದಿಶವು $\hat{i} + 2\hat{j} - \hat{k}$ ಮತ್ತು $Q$ ನ ಸ್ಥಾನ ಸದಿಶವು $2\hat{i} - \hat{j} + 5\hat{k}$ $\overrightarrow{QP}$ ಸದಿಶವನ್ನು ಮತ್ತು ಮಧ್ಯ ಬಿಂದುವಿನ ಸ್ಥಾನ ಸದಿಶವನ್ನು ಕಂಡುಹಿಡಿಯಿರಿ.

4. $A, B, C, D$ ಗಳ ಸ್ಥಾನಸದಿಶಗಳು ಕ್ರಮವಾಗಿ $\vec{a}$, $\vec{b}$, $2\vec{a} + 3\vec{b}$ ಮತ್ತು $\vec{a} - 2\vec{b}$ ಆಗಿವೆ. $\overrightarrow{AC}$, $\overrightarrow{DB}$, $\overrightarrow{BC}$, $\overrightarrow{CA}$ ಸದಿಶಗಳನ್ನು $\vec{a}$ ಮತ್ತು $\vec{b}$ ಗಳ ಮೂಲಕ ತಿಳಿಸಿರಿ.

5. $P, Q, R$ ಮತ್ತು $S$ ನ ಸ್ಥಾನ ಸದಿಶಗಳು ಕ್ರಮವಾಗಿ $\hat{i} + \hat{j} + \hat{k}$, $2\hat{i} + 5\hat{j}$, $3\hat{i} + 2\hat{j} - 3\hat{k}$, $\hat{i} - 6\hat{j} - \hat{k}$ ಆಗಿದ್ದರೆ $PQ \parallel RS$ ಎಂದು ತೋರಿಸಿ. ಇವೆರಡರ ಉದ್ದಗಳ ಪ್ರಮಾಣವನ್ನು ಕಂಡುಹಿಡಿಯಿರಿ.

6. $xy$–ಸಮತಲದಲ್ಲಿ $\vec{a} = (1, 1)$, $\vec{b} = (1, 5)$ ಮತ್ತು

   $(l - m + 5)\,\vec{a} + (2m + 2)\,\vec{b} = (0,0)$

   ಆಗಿದ್ದರೆ $l$ ಮತ್ತು $m$ ಗಳ ಬೆಲೆಗಳನ್ನು ಕಂಡುಹಿಡಿಯಿರಿ.

7. $(x - 2y + 3)\,\hat{i} + (3x + 1)\,\hat{j}$ ಯು ಶೂನ್ಯ ಸದಿಶವಾದರೆ $x$ ಮತ್ತು $y$ ಗಳ ಬೆಲೆಗಳನ್ನು ಕಂಡುಹಿಡಿಯಿರಿ.

8. $\vec{a} = 3\hat{i} - 2\hat{j} + \hat{k}$, $\vec{b} = \hat{i} + 2\hat{j}$ ಮತ್ತು $\vec{c} = 3\hat{i} + 2\hat{k}$ ಆದರೆ, $\vec{a} + 2\vec{b} - 3\vec{c}$ ನ ದಿಕ್ಕಿನಲ್ಲಿರುವ ಏಕ ಸದಿಶವನ್ನು ಕಂಡುಹಿಡಿಯಿರಿ.

9. $\vec{a} = 2\hat{i} + \hat{j} - 3\hat{k}$ ಮತ್ತು $\vec{b} = 3\hat{i} - 2\hat{j} - \hat{k}$ ಆದರೆ $\vec{a} . \vec{b}$ ಮತ್ತು ಇವುಗಳ ನಡುವಿನ ಕೋನವನ್ನು ಕಂಡುಹಿಡಿಯಿರಿ.

10. $\vec{a} = (\hat{i} - 4\hat{j} + 5\hat{k})$ ಮತ್ತು $\vec{b} = 2\hat{i} + 3\hat{j} - \hat{k}$ ಆದರೆ $\vec{a} . \vec{b}$ ಯನ್ನು ಕಂಡುಹಿಡಿಯಿರಿ.

11. $\vec{a} = (-2, 1, 4)$, $\vec{b} = (1, -1, 0)$ ಆದರೆ $\vec{a} . \vec{b}$ ಯನ್ನು ಕಂಡುಹಿಡಿಯಿರಿ.

12. $\vec{a} = 3\hat{i} - 2\hat{j} + \hat{k}$ ಮತ್ತು $\vec{b} = 2\hat{i} + 3\hat{j}$ ಆದರೆ $\vec{a}$ ಮತ್ತು $\vec{b}$ಗಳು ಲಂಬವಾಗಿವೆ ಎಂದು ತೋರಿಸಿ.

13. $\vec{a} = \hat{i} + 2\hat{j} - 3\hat{k}$ ಮತ್ತು $\vec{b} = 3\hat{i} - \hat{j} + 2\hat{k}$ ಆದರೆ $\vec{a} + \vec{b}$ ಯು $\vec{a} - \vec{b}$ ಗೆ ಲಂಬವಾಗಿದೆ ಎಂದು ತೋರಿಸಿ.

14. $2\hat{i} - \hat{j} + \hat{k}$, $\hat{i} - 3\hat{j} - 5\hat{k}$, $3\hat{i} - 4\hat{j} - 4\hat{k}$ ಸ್ಥಾನ ಸದಿಶಗಳಾದ ಬಿಂದುಗಳು ಲಂಬಕೋನ ತ್ರಿಕೋನದ ಮೂರು ಶೃಂಗಗಳೆಂದು ತೋರಿಸಿ.

15. ಒಂದು ತ್ರಿಕೋನದ ಮೂರು ಶೃಂಗಗಳು $2\hat{i} + 4\hat{j} - \hat{k}$, $4\hat{i} + 5\hat{j} + \hat{k}$, $3\hat{i} + 6\hat{j} - 3\hat{k}$ ಆಗಿದ್ದರೆ ಅದು ಸಮದ್ವಿಬಾಹು ಲಂಬಕೋನ ತ್ರಿಕೋನ ಎಂದು ತೋರಿಸಿ

16. $\vec{a} = 9\hat{i} - \hat{j} + 4\hat{k}$ ಮತ್ತು $\vec{b} = 9\hat{i} - \hat{j} + \hat{k}$ ಆದರೆ $\vec{a} \times \vec{b}$ ಯನ್ನು ಕಂಡುಹಿಡಿಯಿರಿ.

17. $\vec{a} = (1, 2, -1)$ ಮತ್ತು $\vec{b} = (2, -1, 1)$ ಆದರೆ $\vec{a} \times \vec{b}$ ಯನ್ನು ಕಂಡುಹಿಡಿಯಿರಿ.

18. $\vec{a} = 2\hat{i} - \hat{j} + \hat{k}$, $\vec{b} = 3\hat{i} + 4\hat{j} - \hat{k}$ ಮತ್ತು ಇವುಗಳ ನಡುವಿನ ಕೋನವು $\theta$ ಆಗಿದ್ದರೆ $\sin\theta$ದ ಬೆಲೆಯನ್ನು ಮತ್ತು $\vec{a}$ ಮತ್ತು $\vec{b}$ ಗೆ ಲಂಬವಾಗಿರುವ ಏಕಸದಿಶವನ್ನು ಕಂಡುಹಿಡಿಯಿರಿ.

19. $\vec{a} = 3\hat{i} + \hat{j} + 2\hat{k}$ ಮತ್ತು $\vec{b} = 2\hat{i} - 2\hat{j} + 4\hat{k}$ ಈ ಎರಡು ಸದಿಶಗಳಿಗೂ ಲಂಬವಾಗಿರುವ ಏಕ ಸದಿಶವನ್ನು ಕಂಡುಹಿಡಿಯಿರಿ ಹಾಗೂ $\theta$ ಇವುಗಳ ನಡುವಿನ ಕೋನವಾದರೆ $\sin\theta$ ವನ್ನು ಕಂಡುಹಿಡಿಯಿರಿ.

20. $\vec{a} = 2\hat{i} + 3\hat{j} + 6\hat{k}$

$\vec{b} = 3\hat{i} - 6\hat{j} + 2\hat{k}$

$\vec{c} = 6\hat{i} + 2\hat{j} - 3\hat{k}$ ಆದರೆ

$\vec{a} \times \vec{b} = 7\vec{c}$ ಎಂದು ತೋರಿಸಿ

21. $\vec{a} = 4\hat{i} - \hat{j} + \hat{j} + 3\hat{k}$, $\vec{b} = -2\hat{i} + \hat{j} - 2\hat{k}$ ಆಗಿದ್ದರೆ ಇವುಗಳೆರಡಕ್ಕೂ ಲಂಬವಾಗಿದ್ದು ಇದರ ಬೆಲೆ 9 ಆಗಿದ್ದರೆ ಸದಿಶವನ್ನು ಕಂಡು ಹಿಡಿಯಿರಿ

22. $\vec{a} = 2\hat{i} - 3\hat{j} - \hat{k}$ ಮತ್ತು $\vec{b} = \hat{i} + 4\hat{j} - 2\hat{k}$ ಆದರೆ $(\vec{a} + \vec{b}) \times (\vec{a} - \vec{b})$ ಯನ್ನು ಕಂಡುಹಿಡಿಯಿರಿ.

23. ಒಂದು ಸಮಾನಾಂತರ ಚತುರ್ಭುಜದ ಕರ್ಣಗಳು $\hat{i} - 3\hat{j} - 4\hat{k}$ ಮತ್ತು $3\hat{i} + \hat{j} - 2\hat{k}$ ಆದಾಗ ಅದರ ವಿಸ್ತೀರ್ಣವನ್ನು ಕಂಡುಹಿಡಿಯಿರಿ.

24. ಸಮಾನಾಂತರ ಚತುರ್ಭುಜದ ಅಕ್ಕಪಕ್ಕದ ಭುಜಗಳು $\hat{i} - 2\hat{j} + 3\hat{k}$ ಮತ್ತು $2\hat{i} + \hat{j} - 4\hat{k}$ ಆಗಿದ್ದರೆ ಅದರ ವಿಸ್ತೀರ್ಣವನ್ನು ಕಂಡುಹಿಡಿಯಿರಿ.

25. $\vec{a} = \hat{i} - 3\hat{j} - 2\hat{k}$ ಮತ್ತು $\vec{b} = \hat{i} + 2\hat{j} + \hat{k}$ ಇವು ತ್ರಿಕೋನದ ಎರಡು ಬಾಹುಗಳಾಗಿದ್ದರೆ ಇದರ ವಿಸ್ತೀರ್ಣವನ್ನು ಕಂಡುಹಿಡಿಯಿರಿ.

26. $A(1, 1, 2)$, $B(2, -1, 1)$ ಮತ್ತು $C(3, 2, 1)$ ಆದರೆ $\Delta^{le}$ $ABC$ಯ ವಿಸ್ತೀರ್ಣವನ್ನು ಕಂಡುಹಿಡಿಯಿರಿ.

27. $\vec{a} - 2\vec{b} + 3\vec{c}$, $-2\vec{a} + 3\vec{b} - \vec{c}$ ಮತ್ತು $4\vec{a} - 7\vec{b} + 7\vec{c}$ ಬಿಂದುಗಳು ಏಕರೇಖಿಸ್ಥವೆಂದು ತೋರಿಸಿ.

28. $\vec{a}, \vec{b}, \vec{c}$ ಗಳು ಸಮಾನಾಂತರ ಚತುರ್ಭುಜ ಮುಖಗಳ ಘನಾಕೃತಿಯ ಒಂದು ಮೂಲೆಯಲ್ಲಿ ಅಂತ್ಯಗೋಳ್ಳುವ ಅಂಚುಗಳಾಗಿದ್ದರೆ ಅದರ ಘನಫಲವನ್ನು ಕಂಡುಹಿಡಿಯಿರಿ.

(i) $\vec{a} = 3\hat{i} - 2\hat{j} - \hat{k}$, $\vec{b} = 2\hat{i} - 5\hat{j} + 6\hat{k}$, $\vec{c} = \hat{i} + \hat{j} + 3\hat{k}$

(ii) $\vec{a} = 2\hat{i} - 3\hat{j} + 4\hat{k}$, $\vec{b} = \hat{i} + 2\hat{j} - \hat{k}$, $\vec{c} = 3\hat{i} - \hat{j} + 2\hat{k}$

(iii) $\vec{a} = (1, -1, 1)$, $\vec{b} = (2 -4 5)$, $\vec{c} = (3, -5, 1)$

29. ಈ ಕೆಳಗಿನ ಸದಿಶಗಳು ಸಮತಲದಲ್ಲಿವೆ ಎಂದು ತೋರಿಸಿ.

(i) $\hat{i} + 2\hat{j} - 3\hat{k}$, $2\hat{i} - \hat{j} + \hat{k}$, $3\hat{i} - 4\hat{j} + 5\hat{k}$

(ii) $\hat{i} - 2\hat{j} + 3\hat{k}$, $2\hat{i} + 3\hat{j} - 4\hat{k}$, $\hat{i} - 3\hat{j} + 5\hat{k}$

30. $2\hat{i} - \hat{j} + \hat{k}$, $\hat{i} + 2\hat{j} - 3\hat{k}$ ಮತ್ತು $3\hat{i} + p\hat{j} + 5\hat{k}$ ಗಳು ಸಮತಲದಲ್ಲಿದ್ದರೆ $p$ ಯ ಬೆಲೆಯನ್ನು ಕಂಡುಹಿಡಿಯಿರಿ.

31. ಈ ಕೆಳಗಿನ 4 ಬಿಂದುಗಳು ಒಂದೇ ಸಮತಲದಲ್ಲಿವೆ ಎಂದು ತೋರಿಸಿ :

$\hat{i} + 2\hat{j} + 3\hat{k}$, $3\hat{i} - \hat{j} + 2\hat{k}$, $-2\hat{i} + 3\hat{j} + \hat{k}$, $6\hat{i} - 4\hat{j} + 2\hat{k}$

32. $[\hat{i} - \hat{j} \quad \hat{j} - \hat{k} \quad \hat{k} - \hat{i}]$ ನ ಬೆಲೆಯನ್ನು ಕಂಡುಹಿಡಿಯಿರಿ.

33. $\vec{a} = \hat{i} - 2\hat{j} + \hat{k}$, $\vec{b} = 2\hat{i} + \hat{j} + \hat{k}$ ಮತ್ತು $\vec{c} = \hat{i} + 2\hat{j} - \hat{k}$ ಆಗಿದ್ದರೆ $\vec{a} \times (\vec{b} \times \vec{c}) = (\vec{a} \cdot \vec{c})\vec{b} - (\vec{a} \cdot \vec{b})\vec{c}$ ಎಂದು ತೋರಿಸಿ.

34. $\vec{a} = 2\hat{i} + 3\hat{j} + 4\hat{k}$

$\vec{b} = \hat{i} + \hat{j} - \hat{k}$

$\vec{c} = \hat{i} - \hat{j} + \hat{k}$

ಆಗಿದ್ದರೆ, $\vec{a} \times (\vec{b} \times \vec{c})$ಯನ್ನು ಕಂಡುಹಿಡಿಯಿರಿ. ಇದು $\vec{a}$ ಮತ್ತು $\vec{b} \times \vec{c}$ ಗಳಿಗೆ ಲಂಬವಾಗಿದೆ ಎಂದು ತೋರಿಸಿ.

35. $\vec{a} \times \{\vec{a} \times (\vec{a} \times \vec{b})\} = (\vec{a}.\ \vec{a})\ (\vec{b} \times \vec{a})$ ಎಂದು ತೋರಿಸಿ.

36. $\hat{i} \times (\vec{a} \times \hat{i}) + \hat{j} \times (\vec{a} \times \hat{j}) + \hat{k} \times (\vec{a} \times \hat{k}) = 2\vec{a}$ ಎಂದು ತೋರಿಸಿ.

37. (1/3, 1/3, 1/3) ಒಂದು ಏಕ ಸದಿಶವೆಂದು ಮತ್ತು ($\sin\alpha$, $\cos\alpha\ \cos\beta$, $\sin\alpha\ \sin\beta$) ಏಕ ಸದಿಶವಲ್ಲ ಎಂದು ತೋರಿಸಿ.

38. $3\hat{i} - 2\hat{j} - 4\hat{k}$ ಮತ್ತು $18\hat{i} - 12\hat{j} + m\hat{k}$ ಸದಿಶಗಳು ಸಮಾನಾಂತರವಾದರೆ $m$ನ ಬೆಲೆಯನ್ನು ಕಂಡುಹಿಡಿಯಿರಿ.

39. $4\hat{i} + 3\hat{j} + 2\hat{k}$ ಮತ್ತು $\hat{i} - \hat{j} + 3\hat{k}$ ಗಳಿಗೆ ಲಂಬವಾಗಿರುವ ಏಕ ಸದಿಶವನ್ನು ಕಂಡುಹಿಡಿಯಿರಿ.

40. $\vec{a}, \vec{b}, \vec{c}$ ಗಳು $\Delta^{le}$ $ABC$ ಯ ಶೃಂಗಗಳ ಸ್ಥಾನಸದಿಶಗಳಾಗಿದ್ದರೆ $\overrightarrow{AB} + \overrightarrow{BC} + \overrightarrow{CA}$ ಯ ಬೆಲೆಯನ್ನು ಕಂಡುಹಿಡಿಯಿರಿ.

## 4.8 ಬಲ, ಕೆಲಸ ಮತ್ತು ಬಲದ ಮಹತ್ವ

ನಮಗೆ ತಿಳಿದಂತೆ ಬಲವು ಒಂದು ವಸ್ತುವಿನ ಜಡತ್ವವನ್ನು ಅಥವಾ ಅದರ ಚಲನೆಯನ್ನು ಬದಲಾಯಿಸುತ್ತದೆ. ಬಲವನ್ನು ಸೂಚಿಸಲು ನಮಗೆ ಈ ಮೂರು ವಿಷಯಗಳು ಗೊತ್ತಿರಬೇಕು:

(i) ಅದರ ಪರಿಮಾಣ, (ii) ಅದು ಚಲಿಸುವ ದಿಕ್ಕು, ಮತ್ತು (iii) ಯಾವ ಬಿಂದುವಿನಲ್ಲಿ ಪ್ರಯೋಗಿಸಲ್ಪಡುತ್ತದೆ. ಆದುದರಿಂದ ಬಲಗಳನ್ನು ಸುಲಭವಾಗಿ ಸದಿಶಗಳಿಂದ ಸೂಚಿಸಬಹುದು.

### ಬಲದಿಂದ ಮಾಡಲ್ಪಡುವ ಕೆಲಸ

ಬಲವನ್ನು ಒಂದು ಕಣದ ಮೇಲೆ ಪ್ರಯೋಗಿಸಿದಾಗ ಆ ಕಣವು ಒಂದು ಬಿಂದುವಿನಿಂದ ಇನ್ನೊಂದು ಬಿಂದುವಿಗೆ ಪಲ್ಲಟವಾಗುತ್ತದೆ. ಇದನ್ನು ಬಲದಿಂದ ಮಾಡಲ್ಪಡುವ ***ಕೆಲಸ*** ಎಂದು ಕರೆಯುತ್ತೇವೆ. ಇದನ್ನು $w$ ನಿಂದ ಸೂಚಿಸುತ್ತೇವೆ.




ಚಿತ್ರ 4.19

$\vec{F}$ ಎಂಬ ಬಲವು ಒಂದು ಕಣವನ್ನು $P$ ಯಿಂದ $Q$ಗೆ ಪಲ್ಲಟ ಮಾಡಿದೆ. $\vec{PQ} = \vec{d}$ ಎಂದಿರಲಿ. $\theta$ ವು $\vec{F}$ ಮತ್ತು $\vec{d}$ ಗಳ ನಡುವಿನ ಕೋನವಿರಲಿ (ಚಿತ್ರ 4.19).
$\vec{F}$ ನಿಂದ ಮಾಡಿದ ಕೆಲಸವನ್ನು

$$w = (F\cos\theta)\, d$$

ಎಂದು ವ್ಯಾಖ್ಯಾಯಿಸುತ್ತೇವೆ.

ಅಂದರೆ, $w = \vec{F}.\ \vec{d}$

ಇಲ್ಲಿ $\vec{F}$ ಮತ್ತು $\vec{d}$ ಗಳ ಪರಿಮಾಣಗಳನ್ನು $F$ ಮತ್ತು $d$ ಎಂದು ಸೂಚಿಸಲಾಗಿದೆ.

(i) ಆದುದರಿಂದ $w$ ಒಂದು ಸದಿಶವಲ್ಲ

(ii) ಬಲದಿಂದ ಪಲ್ಲಟಗೊಂಡ ದಿಕ್ಕು ಬಲಕ್ಕೆ ಲಂಬವಾಗಿದ್ದರೆ, ಬಲವು ಮಾಡಿದ ಕೆಲಸವು ಶೂನ್ಯವಾಗುತ್ತದೆ. ಏಕೆಂದರೆ ಆಗ $\theta = 90^\circ$ ಮತ್ತು $\cos 90^\circ = 0$.

## ಉದಾಹರಣೆಗಳು

1. $5\hat{i} + 6\hat{j} + \hat{k}$ ಎಂಬ ಬಲವು ಒಂದು ಕಣವನ್ನು (4,2,6) ಬಿಂದುವಿನಿಂದ (5, 5, 7) ಬಿಂದುವಿಗೆ ಪಲ್ಲಟ ಮಾಡಿದಾಗ ಬಲವು ಮಾಡುವ ಕೆಲಸವನ್ನು ಕಂಡುಹಿಡಿಯಿರಿ.

ಇಲ್ಲಿ, $\vec{F} = 5\hat{i} + 6\hat{j} + \hat{k},\quad P \equiv (4, 2,, 6)$ ಮತ್ತು $Q \equiv (5,5,7)$

$\therefore \vec{PQ} = \vec{d} = \vec{OQ} - \vec{OP}\ (5, 5, 7) - (4, 2, 6)$

ಅಂದರೆ, $d = (1, 3, 1)$.

$\therefore$ ಕೆಲಸ, $w = \vec{F}.\ \vec{d}$

$= (5,6,1).\ (1,3,1)$

$= 5 + 18 + 1$

$= 24.$

2. ಒಂದು ಬಲದ ಪ್ರಮಾಣವು 50 ಮೂಲಮಾನಗಳಷ್ಟು ಇದ್ದು, ಅದು $3\hat{i} + 2\hat{j} + \hat{k}$ ದಿಕ್ಕಿನಲ್ಲಿ ಒಂದು ಕಣವನ್ನು (–1, 3, 4) ನಿಂದ (3, 2, 5) ಬದಲಾಯಿಸಿದಾಗ ಕೆಲಸವನ್ನು ಕಂಡು ಹಿಡಿಯಿರಿ.

$3\hat{i} + 2\hat{j} + \hat{k}$ ಯ ದಿಕ್ಕಿನಲ್ಲಿರುವ ಏಕ ಸದಿಶವು

$$\frac{3\hat{i} + 2\hat{j} + \hat{k}}{\sqrt{9 + 4 + 1}} = \frac{3\hat{i} + 2\hat{j} + \hat{k}}{\sqrt{14}}$$

$$\therefore F = \frac{50\,(3\hat{i} + 2\hat{j} + \hat{k})}{\sqrt{14}}$$

ಚಲನೆಗೊಳಗಾದ ಕಣದ ಮೊದಲಿನ ಮತ್ತು ಅಂತ್ಯದ ಸ್ಥಾನಗಳು

$P\,(-1, 3\ 4)$ ಮತ್ತು $Q\,(3, 2, 5)$.

$\therefore \vec{PQ} = \vec{d} = (3, 2, 5) - (-1, 3, 4)$

$= (4 - 1\ 1)$

$\therefore w = \vec{F}.\ \vec{d}$

$$= \frac{50}{\sqrt{14}}\ (3\hat{i} + 2\hat{j} + \hat{k})\ .\ (4\hat{i} - \hat{j} + \hat{k})$$

$$= \frac{50\,(12-2+1)}{\sqrt{14}} = \frac{50.11}{\sqrt{14}} = \frac{550}{\sqrt{14}}$$

3. $\vec{F_1} = 2\hat{i} + \hat{j} + \hat{k}$, $\vec{F_2} = \hat{i} - \hat{j} + \hat{k}$ ಮತ್ತು $\vec{F_3} = 2\hat{i} + \hat{k}$

ಎಂಬ ಮೂರು ಬಲಗಳು ಒಂದು ಕಣವನ್ನು $P(-1, 0, 0)$ ನಿಂದ $Q(5, 2, -1)$ಗೆ ಪಲ್ಲಟ ಮಾಡಿದಾಗ ಆಗುವ ಕೆಲಸವನ್ನು ಕಂಡುಹಿಡಿಯಿರಿ.

ಈಗ, ಕೊಟ್ಟಿರುವ ಮೂರು ಬಲಗಳ ಮೊತ್ತ ಬಲ

$\vec{F} = \vec{F_1} + \vec{F_2} + \vec{F_3}$

$= 5\hat{i} + 3\hat{k}.$

$\vec{d} = \vec{PQ} = (5, 2, -1) - (-1, 0, 0)$

$= (6, 2, -1)$

$\therefore$ ಕೆಲಸ $= \vec{F} \, . \, \vec{d} = (5, 0, 3) \, . \, (6, 2, -1)$

$= 30 - 3$

$= 27.$

4. $\vec{F} = 3\hat{i} + 4\hat{j} - 5\hat{k}$ ಎಂಬ ಬಲವು ಒಂದು ಕಣವನ್ನು $(2, -1, 3)$ ನಿಂದ $(a, a, a)$ ಗೆ ಪಲ್ಲಟ ಮಾಡಿದಾಗ ಆಗುವ ಕೆಲಸವು 25 ಆದರೆ $a$ ಯ ಬೆಲೆಯನ್ನು ಕಂಡುಹಿಡಿಯಿರಿ.

ಇಲ್ಲಿ, $P \equiv (2, -1, 3)$, $Q \equiv (a, a, a)$ ಮತ್ತು $\vec{F} = 3\hat{i} + 4\hat{j} - 5\hat{k}$

$\therefore \vec{PQ} = (a - 2, a + 1, a - 3)$

ಈಗ, $w = \vec{F} . \vec{PQ}$

ಅಂದರೆ, $25 = (3, 4, -5) \, . \, (a - 2, a + 1, a - 3)$

ಅಥವಾ, $25 = 3(a - 2) + 4(a + 1) - 5(a - 3)$

ಅಥವಾ, $25 = 3a - 6 + 4a + 4 - 5a + 15$

ಅಥವಾ, $2a = 12$

$\therefore \quad a = 6.$

### ಬಿಂದುವಿನ ಮೇಲಿರುವ ಬಲಗಳ ಮಹತ್ವ

$\vec{F}$ ಎಂಬ ಬಲವು $A$ ಬಿಂದುವಿನಲ್ಲಿ ಪ್ರಯೋಗಿಸಲ್ಪಡಲಿ. $P$ಯು ಯಾವುದೇ ಒಂದು ಬಿಂದುವಾಗಿದ್ದು, $\vec{PA}=\vec{r}$ ಆಗಿರಲಿ (ಚಿತ್ರ 4.20). ಆಗ, $P$ ಬಿಂದುವಿನ ಮೇಲಿರುವ ಸದಿಶ ಬಲದ ಮಹತ್ವವನ್ನು




ಚಿತ್ರ 4.20

$\vec{M} = \vec{r} \times \vec{F}$ ಎಂದು ವ್ಯಾಖ್ಯಾನಿಸುತ್ತೇವೆ. ಇದರ ಪರಿಮಾಣ

$|\vec{M}| = |\vec{F}|\, r \sin\theta$

$= |\vec{F}|\,(r \sin\theta)$

ಅಥವಾ $M = |\vec{F}|\,(PN)$

ಆದುದರಿಂದ ಬಲದ ಮಹತ್ವದ ಪರಿಮಾಣವು $|\vec{F}|$ ಮತ್ತು $P$ ಯಿಂದ $\vec{F}$ಗೆ ಲಂಬದೂರಗಳ ಗುಣಲಬ್ಧವಾಗಿದೆ.

**ಸೂಚನೆ:**

(i) $P$ಯು $\vec{F}$ ಸದಿಶದ ಮೇಲೆ ಇದ್ದರೆ $PN=0$ ಆದ್ದರಿಂದ

ಬಲದ ಮಹತ್ವ, $\vec{M}=\vec{O}$.

(ii) $\vec{F_1}, \vec{F_2}, \vec{F_3}$............ ಎಂಬ ಅನೇಕ ಬಲಗಳು $A$ ಬಿಂದುವಿನಲ್ಲಿ ಪ್ರಯೋಗಿಸಲ್ಪಟ್ಟರೆ $P$ ಬಿಂದುವಿನ ಮೇಲೆ ಅವುಗಳ ಬಲದ ಮಹತ್ವವು

$$\vec{M} = \vec{R} \times (\vec{F_1} + \vec{F_2} + \vec{F_3} + \ldots\ldots\ldots) \quad [ಇಲ್ಲಿ,\ \vec{R} = \vec{PA}].$$

ಉದಾಹರಣೆಗಳು

1. $\vec{F} = 5\hat{i} + 10\hat{j} + 16\hat{k}$ ಎಂಬ ಬಲವು $2\hat{i} - 7\hat{j} + 10\hat{k}$ ಬಿಂದುವಿನಲ್ಲಿ ಪ್ರಯೋಗಿಲ್ಪಡುತ್ತದೆ. ಇದರ ಮಹತ್ವವನ್ನು $-5\hat{i} + 6\hat{j} - 10\hat{k}$ ಬಿಂದುವಿನ ಮೇಲೆ ಕಂಡುಹಿಡಿಯಿರಿ.

$P \equiv (-5, 6, -10)$ ಮತ್ತು $A \equiv (2, -7, 10)$

$\therefore \vec{PA} = (7, -13, 20) = \vec{r}$

ಬಲದ ಮಹತ್ವ $\vec{M} = \vec{r} \times \vec{F}$

$$\therefore \vec{M} = \begin{vmatrix} \hat{i} & \hat{j} & \hat{k} \\ 7 & -13 & 20 \\ 5 & 10 & 16 \end{vmatrix}$$

$$= -408\hat{i} - 12\hat{j} + 135\hat{k}$$

2. $\vec{F_1} = \hat{i} + 2\hat{j} - k$, $\vec{F_2} = 3\hat{i} - \hat{j} + 2k$, $\vec{F_3} = 2\hat{i} + 3\hat{k}$ ಬಲಗಳು $(1, 0, -1)$ನಲ್ಲಿ ಪ್ರಯೋಗಿಸಲ್ಪಡುತ್ತವೆ. ಇವುಗಳ ಮಹತ್ವವನ್ನು $(2, -1, 1)$ ಬಿಂದುವಿನ ಮೇಲೆ ಕಂಡುಹಿಡಿಯಿರಿ.

ಇಲ್ಲಿ, $\vec{F} = \vec{F_1} + \vec{F_2} + \vec{F_3} = 6\hat{i} + \hat{j} + 4\hat{k}$, $P(2, -1, 1)$, $A\ (1, 0, -1)$

$\therefore \vec{R} = \vec{PA} = (-1, 1, -2)$

ಈಗ, $\vec{M} = \vec{R} \times \vec{F}$

$$\therefore \vec{M} = \begin{vmatrix} \hat{i} & \hat{j} & \hat{k} \\ -1 & 1 & -2 \\ 6 & 1 & 4 \end{vmatrix}$$

$$= 6\hat{i} - 8\hat{j} - 7\hat{k}$$

3. ಒಂದು ಬಲದ ಪ್ರಮಾಣ 6 ಮೂಲಮಾನಗಳಷ್ಟು ಇದ್ದು ಇದು (1, 0, –4) ಬಿಂದುವಿನಲ್ಲಿ ಪ್ರಯೋಗಿಸಲ್ಪಡುತ್ತದೆ. ಈ ಬಲವು (1, 0, –4) ಮತ್ತು (2, 5, 1) ಬಿಂದುಗಳನ್ನು ಜೋಡಿಸುವ ರೇಖೆಯ ದಿಕ್ಕಿನಲ್ಲಿರುತ್ತದೆ. ಈ ಬಲದ ಮಹತ್ವವನ್ನು (2, –1, 5) ಬಿಂದುವಿನ ಮೇಲೆ ಕಂಡುಹಿಡಿಯಿರಿ.

ಇಲ್ಲಿ, $|\vec{F}| = 6$, $A\ (1, 0, -4)$ ಮತ್ತು $B\,(2, 5, 1)$

$$\therefore \vec{AB} = (1, 5, -5)$$

$$\therefore \hat{AB} = \frac{\hat{i} + 5\hat{j} - 5\hat{k}}{\sqrt{1 + 25 + 25}} = \frac{\hat{i} + 5\hat{j} - 5\hat{k}}{\sqrt{51}}$$

$\vec{F}$ ಬಲವು $\vec{AB}$ ದಿಕ್ಕಿನಲ್ಲಿದ್ದು ಅದರ ಪ್ರಮಾಣವು **6** ಮೂಲಮಾನಗಳಷ್ಟು ಆಗಿದೆ.

$$\therefore \vec{F} = \frac{6\ (\hat{i} + 5\hat{j} - 5\hat{k})}{\sqrt{51}}$$

ಈಗ, $A \equiv (1, 0, -4)$ $P \equiv (2, -1, 5)$

$$\therefore \vec{PA} = (1, -1, 9)$$

ಬಲದ ಮಹತ್ವ $\vec{PA} \times \vec{F}$

$$= \frac{6}{\sqrt{51}} \begin{vmatrix} \hat{i} & \hat{j} & \hat{k} \\ 1 & -1 & 9 \\ 1 & 5 & -5 \end{vmatrix}$$

$$= \frac{6}{\sqrt{51}} [40\hat{i} + 14\hat{j} + 6\hat{k}]$$

4. $\vec{F_1} = 2\hat{i} - 5\hat{j} + 6\hat{k}$, $\vec{F_2} = -\hat{i} + 2\hat{j} - \hat{k}$ ಈ ಎರಡು ಬಲಗಳು (4, –3, –2) ಬಿಂದುವಿನಲ್ಲಿ ಪ್ರಯೋಗಿಸಲಾಗಿವೆ. ಈ ಬಲಗಳ ಮಹತ್ವವನ್ನು ಮೂಲ ಬಿಂದುವಿನ ಮೇಲೆ ಕಂಡುಹಿಡಿಯಿರಿ.

ಇಲ್ಲಿ, $\vec{F} = \vec{F_1} + \vec{F_2} = \hat{i} - 3\hat{j} + 5\hat{k}$ ಮತ್ತು $P \equiv (0, 0, 0)$, $A\ (4, -3, -2)$

$$\therefore \vec{PA} = (4, -3, -2)$$

ಬಲಗಳ ಮಹತ್ವವು $\vec{M} = \vec{PA} \times \vec{F}$

$$\therefore \vec{M} = \begin{vmatrix} \hat{i} & \hat{j} & \hat{k} \\ 4 & -3 & -2 \\ 1 & -3 & 5 \end{vmatrix}$$

ಅಂದರೆ, $\vec{M} = -21\hat{i} - 22\hat{j} - 9\hat{k}$

$$\therefore \quad |\vec{M}| = \sqrt{441 + 484 + 81}$$

$$= \sqrt{1006}$$

### 4.9.1 ಯುಗ್ಮ (ಕಪಲ್)

ಒಂದೇ ಪ್ರಮಾಣದ ವಿರುದ್ಧ ದಿಕ್ಕಿನಲ್ಲಿರುವ ಸಮಾನಾಂತರವಾಗಿರುವ ಎರಡು ಬಲಗಳು $\vec{F}$ ಮತ್ತು $-\vec{F}$ ಗಳನ್ನು *ಯುಗ್ಮ* ಎಂದು ಕರೆಯುತ್ತೇವೆ. ಇದನ್ನು $\{\vec{F}, -\vec{F}\}$ ಎಂದು ಸೂಚಿಸುತ್ತೇವೆ.




ಚಿತ್ರ 4.21

### 4.9.2 ಯುಗ್ಮದ ಮಹತ್ವ

ಯಾವುದೇ ಒಂದು ಬಿಂದುವಿನ ಮೇಲೆ $\vec{F}$ ಮತ್ತು $-\vec{F}$ ಗಳ ಮಹತ್ವಗಳ ಮೊತ್ತವನ್ನು ಯುಗ್ಮದ ಮಹತ್ವ ಎಂದು ಕರೆಯುತ್ತೇವೆ.

1 ಚಿತ್ರ 4.21 ರಲ್ಲಿ $\vec{F}$ ಬಲವು $A_1$ ಬಿಂದುವಿನಲ್ಲಿ ಮತ್ತು $-\vec{F}$ ಬಲವು $A_2$ ನಲ್ಲಿಯೂ ಪ್ರಯೋಗಿಸಲ್ಪಡುತ್ತವೆ.

$$\vec{OA_1} = \vec{r_1} \text{ ಮತ್ತು } \vec{OA_2} = \vec{r_2}$$

ಆದ್ದರಿಂದ, $\vec{F}$ ಮತ್ತು $-\vec{F}$ ಗಳ ಮಹತ್ವ ($O$ ಬಿಂದುವಿನ ಮೇಲೆ):

$$\vec{G} = \vec{r_1} \times \vec{F} + \vec{r_2} \times (-\vec{F})$$

$$= (\vec{r_1} - \vec{r_2}) \times \vec{F}$$

$$= \vec{A_2 A_1} \times \vec{F}$$

ಅಥವಾ $\vec{G} = \vec{R} \times \vec{F}$

$$= |\vec{R}||\vec{F}| \sin\theta \, \hat{n}$$

$\hat{n}$ ಎಂಬುದು $\vec{A_2 A_1}$ ಮತ್ತು $\vec{F}$ ಗಳಿಗೆ ಲಂಬವಾಗಿರುವ ಏಕ ಸದಿಶ

ಅಥವಾ $\vec{G} = |\vec{F}| \, |\vec{R}| \sin\theta \, \hat{n}$

$$= |\vec{F}| \, d \, \hat{n} \quad [\text{ಏಕೆಂದರೆ } |\vec{R}| \sin\theta = d]$$

ಅಥವಾ $G = Fd$

ಇಲ್ಲಿ $G$ ಮತ್ತು $F$ ಎಂಬುವು $\vec{G}$ ಮತ್ತು $\vec{F}$ ಗಳ ಪರಿಮಾಣ.

ಉದಾಹರಣೆ

$\vec{F} = 5\hat{i} - \hat{j} + \hat{k}$ ಮತ್ತು ಯುಗ್ಮ $\{\vec{F}, -\vec{F}\}$ ಆಗಿದ್ದು $\vec{F}$ ಬಲವನ್ನು (1, –2, 1) ಬಿಂದುವಿನಲ್ಲೂ $-\vec{F}$ ಬಲವನ್ನು (3, 5, 1) ಬಿಂದುವಿನಲ್ಲೂ ಪ್ರಯೋಗಿಸಲಾಗಿದೆ.

ಯುಗ್ಮದ ಮಹತ್ವವನ್ನು ಕಂಡುಹಿಡಿಯಿರಿ.

ಬಿಂದುಗಳ ಸ್ಥಾನಸದಿಶಗಳು $\overrightarrow{r_1} = (1, -2, 1)$ ಮತ್ತು $\overrightarrow{r_2} = (3, 5, 1)$.

$$\therefore \overrightarrow{r_1} - \overrightarrow{r_2} = (-2, -7, 0)$$

$\{\overrightarrow{F}, -\overrightarrow{F}\}$ ಯುಗ್ಮದ ಮಹತ್ವವು

$$\overrightarrow{G} = \left(\overrightarrow{r_1} - \overrightarrow{r_2}\right) \times \overrightarrow{F}$$

$$\therefore \overrightarrow{G} = (-2\hat{i} - 7\hat{j}) \times (5\hat{i} - \hat{j} + \hat{k})$$

ಅಂದರೆ, $\overrightarrow{G} = \begin{vmatrix} \hat{i} & \hat{j} & \hat{k} \\ -2 & -7 & 0 \\ 5 & -1 & 1 \end{vmatrix} = -7\hat{i} - 2\hat{j} + 37\hat{k}$

## ಅಭ್ಯಾಸ - 4.2

1. (2, 1, 2) ಬಲವು ಒಂದು ಕಣವನ್ನು ಮೂಲಬಿಂದುವಿನಿಂದ (1, 3, 2) ಬಿಂದುವಿಗೆ ಚಲಿಸಿದಾಗ ಮಾಡುವ ಕೆಲಸವನ್ನು ಕಂಡುಹಿಡಿಯಿರಿ.

2. $5\hat{i} + 6\hat{j} + \hat{k}$ ಬಲವು ಒಂದು ಕಣವನ್ನು (1, 2, 4) ಬಿಂದುವಿನಿಂದ (2, 3, 6) ಬಿಂದುವಿಗೆ ಪಲ್ಲಟಮಾಡಿದಾಗ ಮಾಡುವ ಕೆಲಸವನ್ನು ಕಂಡುಹಿಡಿಯಿರಿ.

3. $4\hat{i} + \hat{j} - 3\hat{k}$ ಮತ್ತು $3\hat{i} + \hat{j} - \hat{k}$ ಎರಡು ಬಲಗಳು ಒಂದು ಕಣವನ್ನು $\hat{i} + 2\hat{j} + 3\hat{k}$ ಬಿಂದುವಿನಿಂದ $5\hat{i} + 4\hat{j} + \hat{k}$ ಬಿಂದುವಿಗೆ ಪಲ್ಲಟ ಮಾಡಿದಾಗ ಈ ಬಲಗಳ ಒಟ್ಟು ಕೆಲಸವನ್ನು ಕಂಡುಹಿಡಿಯಿರಿ.

4. ಒಂದು ಬಲದ ಪ್ರಮಾಣ 25 ಮೂಲಮಾನಗಳಷ್ಟು ಇದ್ದು ಅದು $4\hat{i} + 3\hat{j}$ ಎಂಬ ಸದಿಶದ ದಿಕ್ಕಿನಲ್ಲಿದೆ. ಈ ಬಲವು ಒಂದು ಕಣವನ್ನು (–1, 3, 4) ನಿಂದ (3, 1, 7) ಬಿಂದುವಿಗೆ ಬದಲಾಯಿಸಿದಾಗ ಮಾಡಿದ ಕೆಲಸವನ್ನು ಕಂಡುಹಿಡಿಯಿರಿ.

5. 3 ಬಲಗಳ ಪರಿಮಾಣಗಳ ಪ್ರಮಾಣ 5, 3, 1 ಮೂಲಮಾನಗಳಾಗಿದ್ದು ಇವುಗಳು ಕ್ರಮವಾಗಿ $6\hat{i} + 2\hat{j} + 3\hat{k}$, $3\hat{i} - 2\hat{j} + 6\hat{k}$, ಮತ್ತು $2\hat{i} - 3\hat{j} - 6\hat{k}$ ಸದಿಶಗಳ ದಿಕ್ಕಿನಲ್ಲಿವೆ.

ಈ ಬಲಗಳು ಒಂದು ಕಣವನ್ನು $(2\hat{i}-\hat{j}-3\hat{k})$ ಬಿಂದುವಿನಿಂದ $(5\hat{i}-\hat{j}+\hat{k})$ ಬಿಂದುವಿಗೆ ಪಲ್ಲಟಮಾಡಿದಾಗ ಆಗುವ ಕೆಲಸದ ಮೊತ್ತವನ್ನು ಕಂಡುಹಿಡಿಯಿರಿ.

6. $4\hat{i}+\hat{j}+5\hat{k}$ ಬಲವು (2, 1, 3) ಬಿಂದುವಿನಲ್ಲಿ ಪ್ರಯೋಗಿಸಲ್ಪಡುತ್ತದೆ. ಈ ಬಲದ ಮಹತ್ವವನ್ನು (4, 2, 0) ಬಿಂದುವಿನ ಮೇಲೆ ಕಂಡುಹಿಡಿಯಿರಿ.

7. $\vec{F}=3\hat{j}-6\hat{k}$ ಎಂಬ ಬಲವು $A=4\hat{i}-2\hat{j}-9k$ ಬಿಂದುವಿನ ಮೂಲಕ ಹೋಗುತ್ತದೆ. ಇದರ ಮಹತ್ವವನ್ನು $B=(6\hat{i}-7\hat{k})$ ಬಿಂದುವಿನ ಮೇಲೆ ಕಂಡುಹಿಡಿಯಿರಿ.

8. $\vec{F}=3\hat{i}+2\hat{j}-4k$ ಬಲವು (1, –1, 2) ನಲ್ಲಿ ಪ್ರಯೋಗಿಸಲ್ಪಟ್ಟಿದೆ. ಇದರ ಮಹತ್ವವನ್ನು (2, –1, 3) ಬಿಂದುವಿನ ಮೇಲೆ ಕಂಡುಹಿಡಿಯಿರಿ.

9. ಒಂದು ಬಲದ ಪ್ರಮಾಣ 6 ಮೂಲಮಾನಗಳಷ್ಟು ಇದ್ದು ಅದು (2, 1, 4) ಬಿಂದುವಿನಲ್ಲಿ ಪ್ರಯೋಗಿಸಲ್ಪಟ್ಟಿದೆ. ಈ ಬಲವು (2, 1, 4) ಮತ್ತು (4, –1, 5) ಬಿಂದುಗಳನ್ನು ಜೋಡಿಸಿದಾಗ ಸಿಗುವ ರೇಖೆಯ ದಿಕ್ಕಿನಲ್ಲಿದೆ. ಈ ಬಲದ ಮಹತ್ವವನ್ನು (2, –2, 5) ಬಿಂದುವಿನ ಮೇಲೆ ಕಂಡುಹಿಡಿಯಿರಿ.

10. ಒಂದು ಬಲವು $\overrightarrow{AB}$ ಸದಿಶದ ಮೂಲಕ ಗುರುತಿಸಿದೆ. ಇಲ್ಲಿ, $A \equiv (1, 2, -3)$ ಮತ್ತು $B \equiv (3, -4, 2)$. ಈ ಬಲದ ಮಹತ್ವವನ್ನು (–2, 4, –6) ಬಿಂದುವಿನ ಮೇಲೆ ಕಂಡು ಹಿಡಿಯಿರಿ.

## ಅಧ್ಯಾಯ - 5

# ಸಂಕುಲಗಳು

### 5.1.1 ಪೀಠಿಕೆ

ಈ ಅಧ್ಯಾಯದಲ್ಲಿ ಅತಿ ಮುಖ್ಯವಾದ *ಸಂಕುಲ* ಎಂಬ ಬೈಜಿಕ ರಚನೆಯ ಬಗ್ಗೆ ತಿಳಿದುಕೊಳ್ಳೋಣ. ಇದು ಅಧುನಿಕ ಬೀಜಗಣಿತದ ಒಂದು ಪ್ರಮುಖ ಶಾಖೆಯಾಗಿದೆ. ಎ.ಎಲ್. ಕೌಶಿ ಮತ್ತು ಇ. ಗ್ಯಾಲ್ವಾ ಎಂಬ ಗಣಿತಜ್ಞರು ಮೊತ್ತಮೊದಲಾಗಿ ಸಮೀಕರಣ ಸಿದ್ಧಾಂತದಲ್ಲಿ ಇದನ್ನು ಉಪಯೋಗಿಸಿದರು. ಈಗ ಈ ಸಂಕುಲ ಸಿದ್ಧಾಂತವನ್ನು ಎಲ್ಲಾ ಕಡೆಗಳಲ್ಲೂ ಉಪಯೋಗಿಸುತ್ತಾರೆ. ಮೊದಲು ನಾವು ಈ ಕೆಳಗಿನ ಸಂಕೇತಗಳನ್ನು ಪರಿಚಯ ಮಾಡಿಕೊಳ್ಳೋಣ.

$N =$ {1, 2, 3...} ಸ್ವಾಭಾವಿಕ ಸಂಖ್ಯೆಗಳ ಗಣ

$Z =$ {0, ±1, ± 2, ± 3 ....} ಪೂರ್ಣಾಂಕಗಳ ಗಣ

$Q = \{p/q, q \neq 0, p, q \in Z\}$ ಭಾಗಲಬ್ಧ ಸಂಖ್ಯೆಗಳ ಗಣ

$Q - \{0\}$ ಸೊನ್ನೆ ಬಿಟ್ಟು ಉಳಿದ ಭಾಗಲಬ್ಧ ಸಂಖ್ಯೆಗಳ ಗಣ

$Q+ =$ ಧನಾತ್ಮಕ ಭಾಗಲಬ್ಧ ಸಂಖ್ಯೆಗಳ ಗಣ

$R =$ ವಾಸ್ತವ ಸಂಖ್ಯೆಗಳ ಗಣ

$R - \{0\} =$ ಸೊನ್ನೆಯನ್ನು ಬಿಟ್ಟು ಉಳಿದ ವಾಸ್ತವ ಸಂಖ್ಯೆಗಳ ಗಣ

$R+ =$ ಧನಾತ್ಮಕ ವಾಸ್ತವ ಸಂಖ್ಯೆಗಳ ಗಣ

$M =$ ಎಲ್ಲಾ 2x2 ಮಾತೃಕೆಗಳ ಗಣ

$Z_m =$ ಮಾಡ್ಯುಲೋ $m$ ಪೂರ್ಣಾಂಕಗಳ ಅಂದರೆ 0, 1, 2 .. $(m-1)$ ಗಣ

$\oplus_m =$ ಮಾಡ್ಯುಲೋ $m$ ಸಂಕಲನ

$\otimes_m =$ ಮಾಡ್ಯುಲೊ $m$ ಗುಣಾಕಾರ

### 5.1.2 ಯುಗಳ ಪರಿಕ್ರಿಯೆ

S ಒಂದು ಶೂನ್ಯವಲ್ಲದ ಗುಣವಾಗಿರಲಿ. * (ಸ್ಟಾರ್, ನಕ್ಷತ್ರ) ಕ್ರಿಯೆಯನ್ನು Sನ ಅಂಶಗಳಾದ $a$ ಮತ್ತು $b$ ಗೆ ಅನ್ವಯಿಸಿ $a * b$ ಎಂದು ಸೂಚಿಸಿ. ಈ $a*b = c$ಯು ಕೂಡ Sನ ಅಂಶವಾಗಿದ್ದಲ್ಲಿ * ನ್ನು ದ್ವಿಮಾನ ಕ್ರಿಯೆ ಅಥವಾ *ಯುಗಳ ಪರಿಕ್ರಿಯೆ* ಎಂದು ಕರೆಯುತ್ತೇವೆ.

ಈ ವ್ಯಾಖ್ಯೆಯ ಪ್ರಕಾರ $a, b \in S$ ಆಗಿದ್ದರೆ, $a*b = c \in S$ ಎಂಬ ಈ ಗುಣವನ್ನು * ಕ್ರಿಯೆಗೆ ಹೊಂದಿದಂತೆ S ಗಣದ **ಆವೃತ ಗುಣ** (ಕ್ಲೋಜರ್ ಪ್ರಾಪರ್ಟಿ) ಎಂದು ಕರೆಯುತ್ತೇವೆ

ಆದುದರಿಂದ, S ಗಣದಲ್ಲಿ * ಯುಗಳಪರಿಕ್ರಿಯೆಯಾಗಿದ್ದರೆ, ಅದು ಆವೃತ ಗುಣವನ್ನು ಹೊಂದಿರುತ್ತದೆ.

**ಉದಾಹರಣೆಗಳು**

1 ಸಂಕಲನ ಮತ್ತು ಗುಣಾಕಾರವು $N = \{1,2, 3...\}$. ಗಣದಲ್ಲಿ ಯುಗಳ ಪರಿಕ್ರಿಯೆಯಾಗಿರುತ್ತವೆ.

ಇಲ್ಲಿ ಯಾವುದೇ ಎರಡು ಸ್ವಾಭಾವಿಕ ಅಂಕೆಗಳನ್ನು ತೆಗೆದುಕೊಂಡಾಗ ಅವುಗಳ ಸಂಕಲನವು ಕೂಡ ಒಂದು ಸ್ವಾಭಾವಿಕ ಸಂಖ್ಯೆಯಾಗಿರುತ್ತದೆ.

ಉದಾ: $8 + 12 = 20 \in N$

$5 + 14 = 19 \in N$, ಇತ್ಯಾದಿ

ಇದೇ ರೀತಿಯಲ್ಲಿ, $4 \times 13 = 52 \in N$

$7 \times 2 = 14 \in N$, ಇತ್ಯಾದಿ

2. ವ್ಯವಕಲನ ಮತ್ತು ಭಾಗಾಕಾರವು $N$ ಗಣದಲ್ಲಿ ಯುಗಳ ಪರಿಕ್ರಿಯೆಯಲ್ಲ.

ಉದಾ: $8-12 = -4 \notin N$

$$\frac{8}{12} = \frac{2}{3} \notin N$$

3. $Z$, $Q$ ಮತ್ತು $R$ ಗಣಗಳಲ್ಲಿ ವ್ಯವಕಲನವು ಒಂದು ಯುಗಳ ಪರಿಕ್ರಿಯೆ.

4. $Q$ ಮತ್ತು $R$ ಗಳಲ್ಲಿ ಭಾಗಾಕಾರವು ಯುಗಳ ಪರಿಕ್ರಿಯೆ ಅಲ್ಲ. ಉದಾ:

$$\frac{\frac{3}{5}}{0} \notin Q \qquad \frac{\sqrt{3}}{0} \notin R$$

5. ಆದರೆ $Q^+$, $R^+$, $Q - \{0\}$ ಮತ್ತು $R - \{0\}$ ಗಣಗಳಲ್ಲಿ ಸಂಕಲನ, ಗುಣಾಕಾರ, ಭಾಗಾಕಾರ, ವ್ಯವಕಲನ ಎಲ್ಲವೂ ಯುಗಳ ಪರಿಕ್ರಿಯೆ.

6. ಈ ಕೆಳಗಿನ ಉದಾಹರಣೆಗಳಲ್ಲಿ $\times$ ಒಂದು ದ್ವಿಮಾನ ಕ್ರಿಯೆ ಆಗಿದೆಯೇ ಎಂದು ಪರೀಕ್ಷಿಸಿ.

(i) $R$ ಗಣದಲ್ಲಿ $a \times b = \sqrt{ab}$

(ii) $Q$ ಗಣದಲ್ಲಿ, $a \times b = \frac{ab}{8}$

(iii) $N$ ಗಣದಲ್ಲಿ $a \times b = a^b$

(iv) $S = \left\{ \begin{bmatrix} a & b \\ c & d \end{bmatrix} \in R \right.$ ಗಣದಲ್ಲಿ $\left. \right\}$ ಮಾತೃಕೆ ಸಂಕಲನ ಮತ್ತು ಮಾತೃಕೆ ಗುಣಾಕಾರ.

(i) $a = 3, \quad b = -1$ ಎಂದು ತೆಗೆದುಕೊಳ್ಳೋಣ. ಆಗ
$a \times b = \sqrt{3 \times -1} = \sqrt{-3} \notin R$ ಆದುದರಿಂದ ಇಲ್ಲಿ $\times$ ದ್ವಿಮಾನ ಕ್ರಿಯೆ ಅಲ್ಲ.

(ii) $a \times b = \frac{ab}{8}$ ಎಂಬುದು $\frac{p}{q}$ ರೂಪದಲ್ಲಿದ್ದು $q \neq 0$ ಆದುದರಿಂದ $\frac{ab}{8} \in Q$. ಆದ್ದರಿಂದ, $\times$ ದ್ವಿಮಾನ ಕ್ರಿಯೆ.

(iii) $N$ ಗಣದಲ್ಲಿ $a \times b = a^b$ ಯಾವಾಗಲೂ ಸ್ವಾಭಾವಿಕ ಸಂಖ್ಯೆಯಾಗಿರುತ್ತದೆ. ಉದಾ: $5 \times 3 = 5^3 = 125 \in N$. ಆದ್ದರಿಂದ $\times$ ಒಂದು ದ್ವಿಮಾನ ಕ್ರಿಯೆ.

(iv) ಇಲ್ಲಿ ಯಾವುದೇ ಎರಡು $2 \times 2$ ಮಾತೃಕೆಗಳನ್ನು ಕೂಡಿಸಿದಾಗ ನಮಗೆ ಪುನಃ $2 \times 2$ ಮಾತೃಕೆಯು ದೊರೆಯುತ್ತದೆ. ಇದೇ ರೀತಿ ಯಾವುದೇ ಎರಡು $2 \times 2$

ಮಾತೃಕೆಗಳನ್ನು ಗುಣಿಸಿದಾಗ 2 x 2 ಮಾತೃಕೆಯು ದೊರೆಯುತ್ತದೆ. ಆದುದರಿಂದ ಮಾತೃಕೆ ಸಂಕಲನ ಮತ್ತು ಗುಣಾಕಾರ ಎರಡೂ ದ್ವಿಮಾನ ಕ್ರಿಯೆಗಳು ಆಗಿರುತ್ತವೆ.

### 5.1.3 ಸಂಕುಲ

*G* ಯು ಒಂದು ಶೂನ್ಯವಲ್ಲದ ಗಣವಾಗಿರಲಿ. * ಯು *G* ಮೇಲಿನ ಒಂದು ದ್ವಿಮಾನ ಕ್ರಿಯೆಯಾಗಿರಲಿ. ಈ ಕೆಳಕಂಡ 4 ಲಕ್ಷಣಗಳು ತೃಪ್ತಿಗೊಂಡಲ್ಲಿ *G* ಯನ್ನು *ಕ್ರಿಯೆಗೆ ಹೊಂದಿರುವ ***ಸಂಕುಲ*** ಎಂದು ಕರೆಯುತ್ತೇವೆ.

(i) **ಆವೃತ ಗುಣ:** $\forall\ a, b \in G,\ a*b \in G$

(ii) **ಸಹವರ್ತನೀಯ ಗುಣ:** $\forall\ a,b,c \in G$
$(a \times b) \times c = a \times (b \times c)$

(iii) **ಏಕದದ ಅಸ್ತಿತ್ವ:** $\forall a \in G$,
$a \times e = e \times a = a$ ಆಗಿರುವಂತೆ
$\exists\, e \in G$ ಹೀಗಿದ್ದಾಗ $e$ ಯನ್ನು ***ಏಕದ*** (ಅಥವಾ ***ಅನನ್ಯತಾಂಶ***) ಎಂದು ಕರೆಯುತ್ತೇವೆ

(iv) **ವಿಲೋಮ ಅಂಶದ ಅಸ್ತಿತ್ವ:** $\forall\ a \in G$
$a \times a^{-1} = a^{-1} \times a = e$
ಆಗು ವಂತೆ $\exists\, a^{-1} \in G$ ಹೀಗಿದ್ದಾಗ $a^{-1}$ನ್ನು *G* ಯಲ್ಲಿಯ *a* ಅಂಶದ ವಿಲೋಮ ಅಂಶ ಎಂದು ಕರೆಯುತ್ತೇವೆ.

ಈ 4 ಲಕ್ಷಣಗಳು ತೃಪ್ತಿಗೊಂಡಲ್ಲಿ *G* ಯನ್ನು *ಅನ್ವಯಿಸುವ ಸಂಕುಲ ಎಂದು ಕರೆಯುತ್ತೇವೆ. ಇದನ್ನು $(G, *)$ ಎಂದು ಬರೆಯುತ್ತೇವೆ.

ಈ 4 ಲಕ್ಷಣಗಳನ್ನೂ ಮತ್ತು ಈ ಕೆಳಗಿನ ಪರಿವರ್ತನೀಯ ಗುಣವನ್ನು *G* ಯು ಹೊಂದಿದ್ದರೆ ಅದನ್ನು ***ಪರಿವರ್ತನೀಯ*** (ಅಥವಾ ಅಬಿಲಿಯನ್) ***ಸಂಕುಲ*** ಎಂದು ಕರೆಯುತ್ತೇವೆ.

(v) ಪರಿವರ್ತನೀಯ ಗುಣ: $\forall\ a, b \in G,\ a \times b = b \times a$.

### 5.1.4 ಅರೆಸಂಕುಲಗಳು

ಒಂದು ಶೂನ್ಯವಲ್ಲದ ಗಣ *G* ಯ ಮೇಲೆ * ಒಂದು ದ್ವಿಮಾನ ಕ್ರಿಯೆಯಾಗಿದ್ದು, ಅದು ಆವೃತ ಗುಣ ಮತ್ತು ಸಹವರ್ತನೀಯ ಗುಣಗಳನ್ನು ಹೊಂದಿದ್ದರೆ ಅದನ್ನು (ಸೆಮಿಗ್ರೂಪ್) ***ಅರೆ ಸಂಕುಲ*** ಎಂದು ಕರೆಯುತ್ತೇವೆ.

ಉದಾಹರಣೆ: $(N, +), (R - \{0\}, *)$

**ಪರಿಮಿತ ಮತ್ತು ಅಪರಿಮಿತ ಸಂಕುಲ:**

$G$ ಯು ಪರಿಮಿತ ಗಣವಾಗಿದ್ದಲ್ಲಿ $(G, *)$ ವು ಪರಿಮಿತ ಸಂಕುಲವೆಂದೂ, $G$ ಯು ಅಪರಿಮಿತ ಗಣವಾದ್ದಲ್ಲಿ $(G, *)$ ವು ಅಪರಿಮಿತ ಸಂಕುಲವೆಂದೂ ಕರೆಯುತ್ತೇವೆ.

**ಒಂದು ಸಂಕುಲದ ಪರಿಮಾಣ:**

$(G, *)$ ವು ಒಂದು ಪರಿಮಿತ ಸಂಕುಲವಾಗಿದ್ದು, $G$ ಗಣದಲ್ಲಿ $n$ ಅಂಶಗಳಿದ್ದರೆ, ಆಗ ಆಗ $n$ ನ್ನು ಆ ಸಂಕುಲದ ಪರಿಮಾಣ (ಆರ್ಡರ್) ಎಂದು ಕರೆಯುತ್ತೇವೆ ಮತ್ತು ಅದನ್ನು ಹೀಗೆ ಸೂಚಿಸುತ್ತೇವೆ: $O(G) = n$

**ಉದಾಹರಣೆಗಳು**

1. ಪೂರ್ಣಾಂಕ ಗಣವು '+' ದ್ವಿಮಾನ ಕ್ರಿಯೆಯ ಮೇಲೆ ಒಂದು ಅಪರಿಮಿತ ಪರಿವರ್ತನೀಯ ಸಮೂಹ. ಇಲ್ಲಿ, ಪೂರ್ಣಾಂಕಗಳ ಗಣವು

$$Z = \{0 \pm 1, \pm 2, \pm 3, \ldots\ldots\ldots\ldots\}$$

(i) **ಆವೃತ ಗುಣ:** ಯಾವುದೇ ಎರಡು ಪೂರ್ಣಾಂಕಗಳನ್ನು ಕೂಡಿಸಿದಾಗ ನಮಗೆ ಇನ್ನೊಂದು ಪೂರ್ಣಾಂಕ ದೊರೆಯುತ್ತದೆ. ಅಂದರೆ

$$\forall a, b \in Z, \quad a + b \in Z$$

ಆದುದರಿಂದ ಆವೃತ ಗುಣವು ತೃಪ್ತಿಗೊಳ್ಳುತ್ತದೆ.

(ii) **ಸಹವರ್ತನೀಯ ಗುಣ:**

$$\forall a, b, c \in Z, \quad a + (b + c) = (a + b) + c$$

ಉದಾ: $2, -5, 7 \in Z$

$2 + (-5 + 7) = 2 + 2 = 4$ ಆಗಿದ್ದು,

$(2 + (-5)) + 7 = -3 + 7 = 4.$

ಆದುದರಿಂದ ಸಹವರ್ತನೀಯ ಗುಣವು ತೃಪ್ತಿಗೊಳ್ಳುತ್ತದೆ.

(iii) ಏಕದದ ಅಸ್ತಿತ್ವ:

$Z$ ನಲ್ಲಿ '0' ಒಂದು ಅಂಶವಾಗಿರುತ್ತದೆ.

$\forall\ a \in Z, \quad a + 0 = 0 + a = a$

ಆದುದರಿಂದ $Z$ ನಲ್ಲಿ ಏಕದವು ಇದೆ.

(iv) ವಿಲೋಮ ಅಂಶದ ಅಸ್ತಿತ್ವ:

$Z$ ನಲ್ಲಿ ಪ್ರತಿ ಧನಾತ್ಮಕ ಪೂರ್ಣಾಂಕಕ್ಕೆ ಋಣಾತ್ಮಕ ಪೂರ್ಣಾಂಕವಿದೆ:

$\forall\ a \in Z, \quad a + (-a) = (-a) + a = 0$

ಆಗುವಂತೆ $-a \in Z$.

(v) ಪರಿವರ್ತನೀಯ ಗುಣ

$\forall a, b \in Z, \ a + b = b + a$

ಆದುದರಿಂದ, $(Z, +)$ ವು ಒಂದು ಪರಿವರ್ತನೀಯ ಸಂಕುಲ. $Z$ ನಲ್ಲಿ ಅಪರಿಮಿತ ಅಂಶಗಳಿರುವುದರಿಂದ ಅಪರಿಮಿತ ಪರಿವರ್ತನೀಯ ಸಂಕುಲ.

2. ಇದೇ ರೀತಿಯಾಗಿ $(Q, +)$, $(R, +)$ ಅಪರಿಮಿತ ಪರಿವರ್ತನೀಯ ಸಂಕುಲಗಳು. $Q-\{0\}$, $R-\{0\}$ ಎರಡು ಗಣಗಳೂ ಗುಣಾಕಾರ ಕ್ರಿಯೆಯಲ್ಲೂ ಅಪರಿಮಿತ ಮತ್ತು ಪರಿವರ್ತನೀಯ ಸಂಕುಲಗಳು.

3. $G=\{1,-1\}$ ಎಂಬುದು ಗುಣಾಕಾರದಲ್ಲಿ ಪರಿಮಿತ ಪರಿವರ್ತನೀಯ ಸಂಕುಲವಾಗಿದೆ. ಇದರಲ್ಲಿ ಏಕದವು '1' ಆಗಿರುತ್ತದೆ. 1 ರ ವಿಲೋಮ 1 ಮತ್ತು $-1$ ರ ವಿಲೋಮ $-1$.

4. $M$ ಎಂಬುದು 2 x 2 ಮಾತೃಕೆಗಳ ಗಣವಾಗಿದ್ದು ಅದರ ಅಂಶಗಳು ವಾಸ್ತವ ಸಂಖ್ಯೆಗಳಾಗಿದ್ದಾಗ ಮತ್ತು ಮಾತೃಕೆಯ ಸಂಕಲನವು ದ್ವಿಮಾನ ಕ್ರಿಯೆಯಾಗಿದ್ದರೆ $(M, +)$ ಯು ಒಂದು ಪರಿವರ್ತನೀಯ ಸಂಕುಲ ಎಂದು ಸಾಧಿಸಿ.

$$M = \left\{ \begin{bmatrix} a & b \\ c & d \end{bmatrix} \Big/ a,b,c,d \in R \right\}$$

(i) $A = \begin{bmatrix} a_1 & a_2 \\ a_3 & a_4 \end{bmatrix} \in G$ ಮತ್ತು $B = \begin{bmatrix} b_1 & b_2 \\ b_3 & b_4 \end{bmatrix} \in M$

$$\therefore A + B = \begin{bmatrix} a_1 & a_2 \\ a_3 & a_4 \end{bmatrix} + \begin{bmatrix} b_1 & b_2 \\ b_3 & b_4 \end{bmatrix}$$

$$= \begin{bmatrix} a_1 + b_1 & a_2 + b_2 \\ a_3 + b_3 & a_4 + b_4 \end{bmatrix} = \begin{bmatrix} c_1 & c_2 \\ c_3 & c_4 \end{bmatrix} = C$$

ಇಲ್ಲಿ, $c_1, c_2, c_3, c_4 \in R$ ಮತ್ತು $C \in M$

ಆದುದರಿಂದ $(M, +)$ ಆವೃತ ಗುಣವು ತೃಪ್ತಿಯಾಗಿದೆ.

(ii) ಮೇಲಿನ (i) ರಲ್ಲಿರುವಂತೆ, $A, B, C \in M$ ಎಂಬ ಯಾವುದೇ ಮೂರು ಮಾತೃಕೆಗಳನ್ನು ತೆಗೆದುಕೊಳ್ಳೋಣ.

ಆಗ, $$A + (B+C) = \begin{bmatrix} a_1 & a_2 \\ a_3 & a_4 \end{bmatrix} + \left\{ \begin{bmatrix} b_1 & b_2 \\ b_3 & b_4 \end{bmatrix} + \begin{bmatrix} c_1 & c_2 \\ c_3 & c_4 \end{bmatrix} \right\}$$

$$= \begin{bmatrix} a_1 & a_2 \\ a_3 & a_4 \end{bmatrix} + \begin{bmatrix} b_1 + c_1 & b_2 + c_2 \\ b_3 + c_3 & b_4 + c_4 \end{bmatrix}$$

$$= \begin{bmatrix} a_1 + b_1 + c_1 & a_2 + b_2 + c_2 \\ a_3 + b_3 + c_3 & a_4 + b_4 + c_4 \end{bmatrix} \quad ...(1)$$

ಹಾಗೆಯೇ, $$(A+B)+C = \left\{ \begin{bmatrix} a_1 & a_2 \\ a_3 & a_4 \end{bmatrix} + \begin{bmatrix} b_1 & b_2 \\ b_3 & b_4 \end{bmatrix} \right\} + \begin{bmatrix} c_1 & c_2 \\ c_3 & c_4 \end{bmatrix}$$

$$= \begin{bmatrix} a_1 + b_1 & a_2 + b_2 \\ a_3 + b_3 & a_4 + b_4 \end{bmatrix} + \begin{bmatrix} c_1 & c_2 \\ c_3 & c_4 \end{bmatrix}$$

$$= \begin{bmatrix} a_1 + b_1 + c_1 & a_2 + b_2 + c_2 \\ a_3 + b_3 + c_3 & a_4 + b_4 + c_4 \end{bmatrix} \quad ...(2)$$

ಈಗ, (1) ಮತ್ತು (2) ರಿಂದ ಬಂದಿರುವ ಮಾತೃಕೆಗಳು ಒಂದೇ ಆಗಿವೆ.

ಆದುದರಿಂದ $(M, +)$ ನಲ್ಲಿ ಸಹವರ್ತನೀಯ ಗುಣವು ತೃಪ್ತಿಗೊಂಡಿದೆ.

(iii) $\mathbf{0} = \begin{bmatrix} 0 & 0 \\ 0 & 0 \end{bmatrix}$ ಎಂಬುದು $(M, +)$ ನ ಏಕದವಾಗಿರುತ್ತದೆ ಏಕೆಂದರೆ,

$$A + 0 = \begin{bmatrix} a_1 & a_2 \\ a_3 & a_4 \end{bmatrix} + \begin{bmatrix} 0 & 0 \\ 0 & 0 \end{bmatrix} = \begin{bmatrix} a_1 & a_2 \\ a_3 & a_4 \end{bmatrix} = A \quad \text{.... (1)}$$

ಅಂತೆಯೇ, $0 + A = \begin{bmatrix} 0 & 0 \\ 0 & 0 \end{bmatrix} + \begin{bmatrix} a_1 & a_2 \\ a_3 & a_4 \end{bmatrix} = \begin{bmatrix} a_1 & a_2 \\ a_3 & a_4 \end{bmatrix} = A$ .... (2)

ಈಗ, (1) ಮತ್ತು (2) ರಿಂದ, $A + \mathbf{0} = \mathbf{0} + A = A$.

ಆದುದರಿಂದ $(M, +)$ ಯಲ್ಲಿ ಏಕದವಿರುತ್ತದೆ.

(iv) $A = \begin{bmatrix} a_1 & a_2 \\ a_3 & a_4 \end{bmatrix}$ ಎಂಬ ಮಾತೃಕೆಗೆ

$$-A = \begin{bmatrix} -a_1 & -a_2 \\ -a_3 & -a_4 \end{bmatrix}$$

ಎಂಬುದು $A$ ಯ ವಿಲೋಮವಾಗಿರುತ್ತದೆ.

ಅಂದರೆ, $A + (-A) = \mathbf{0} = (-A) + A)$

ಆದ್ದರಿಂದ, $M$ನ ಪ್ರತಿಯೊಂದು ಮಾತೃಕೆಗೂ ಅದರ ವಿಲೋಮವಿದೆ.

(v) $A + B = \begin{bmatrix} a_1 & a_2 \\ a_3 & a_4 \end{bmatrix} + \begin{bmatrix} b_1 & b_2 \\ b_3 & b_4 \end{bmatrix} = \begin{bmatrix} a_1 + b_1 & a_2 + b_2 \\ a_3 + b_3 & a_4 + b_4 \end{bmatrix}$ ... (1)

$$B + A = \begin{bmatrix} b_1 & b_2 \\ b_3 & b_4 \end{bmatrix} + \begin{bmatrix} a_1 & a_2 \\ a_3 & a_4 \end{bmatrix} = \begin{bmatrix} b_1 + a_1 & b_2 + a_2 \\ b_3 + a_3 & b_4 + a_4 \end{bmatrix}$$

$$= \begin{bmatrix} a_1 + b_1 & a_2 + b_2 \\ a_3 + b_3 & a_4 + b_4 \end{bmatrix} \quad \text{... (2)}$$

ಏಕೆಂದರೆ, $+$ವು $R$ನಲ್ಲಿ ಪರಿವರ್ತನೀಯವಾಗಿದೆ.

ಆದುದರಿಂದ, (1) ಮತ್ತು (2) ರಿಂದ $A + B = B + A$

ಅಂದರೆ, $(M, +)$ ಯು ಪರಿವರ್ತನೀಯ ಸಮೂಹವಾಗಿದೆ.

5. $Q - \{1\}$ ನಲ್ಲಿ 'o' ದ್ವಿಮಾನ ಕ್ರಿಯೆಯು $a \circ b = a + b - ab$ ಆದಾಗ $(Q - \{1\}, o)$ ಒಂದು ಪರಿವರ್ತನೀಯ ಸಂಕುಲ ಎಂದು ಸಾಧಿಸಿ. ಇದರಲ್ಲಿ $\frac{5}{3} \circ x = 3^{-1}$ ಎಂಬ ಸಮೀಕರಣವನ್ನು ಬಿಡಿಸಿ .

ಇಲ್ಲಿ, $Q - \{1\}$ ಅಂದರೆ '1' ಬಿಟ್ಟು ಉಳಿದ ಭಾಗಲಬ್ಧ ಸಂಖ್ಯೆಗಳ ಗಣ.

ಈಗ, $a, b \in Q - \{1\}$ ಆಗಿರಲಿ.

**(*i*) ಆವೃತ ಗುಣ :**

$a \circ b = a + b - ab$ ಎಂಬುದು ಕೂಡಾ ಒಂದು ಭಾಗಲಬ್ಧ ಸಂಖ್ಯೆ. ಇದು 1 ಅಲ್ಲ ಎಂದು ನಾವು ತೋರಿಸುತ್ತೇವೆ. $a \circ b$ ಎಂಬುದು 1 ಆಗಿದ್ದರೆ,

$a + b - ab = 1$

ಅಥವಾ $a + b - ab - 1 = 0$

ಅಥವಾ $(a - 1)(b - 1) = 0$

ಆದರೆ, $a = 1$ ಅಥವಾ $b = 1$, ಇದು ಎರಡೂ ಸಾಧ್ಯವಿಲ್ಲ

ಏಕೆಂದರೆ $a, b \in Q - \{1\}$

ಆದುದರಿಂದ ಆವೃತ ಗುಣವು ತೃಪ್ತಿಗೊಂಡಿದೆ.

**(ii) ಸಹವರ್ತನೀಯ ಗುಣ:**

$a \circ (b \circ c) = a \circ (b + c - bc)$

$= a + b + c - bc - a(b + c - bc)$

$= a + b + c - bc - ab - ac + abc$ .... (1)

$$(aob)oc = (a + b - ab)\,oc$$
$$= a + b - ab + c - (a + b - ab)\,c$$
$$= a + b - ab + c - ac - bc + abc \qquad \text{.... (2)}$$

ಈಗ, (1) ಮತ್ತು (2) ರ ಫಲಿತಾಂಶಗಳು ಒಂದೇ ಆಗಿದೆ.

ಆದುದರಿಂದ ಸಹವರ್ತನೀಯ ಗುಣವೂ ನಿಜವಾಗಿದೆ.

(iii) ಏಕದದ ಅಸ್ತಿತ್ವ: $e$ ಯು ಏಕದವಾಗಿದ್ದರೆ

$aoe = eoa = a \quad \forall a \in Q - \{1\}$

$aoe = a$ ಮತ್ತು $eoa = a$

ಅಂದರೆ, $a + e - ae = a$ ಮತ್ತು $e + a - ea = a$

ಅಥವಾ $e - ae = 0$ ಮತ್ತು $e - ea = 0$

ಅಥವಾ $e(1-a) = 0$ ಮತ್ತು $e = (1-a) = 0$

$\therefore\ e = 0$ ಅಥವಾ $a = 1$

ಆದರೆ, $a = 1$ ಸಾಧ್ಯವಿಲ್ಲ ಏಕೆಂದರೆ $a \in Q - \{1\}$

ಆದುದರಿಂದ, $e = 0 \in Q - \{1\}$

ಅಂದರೆ, 0 ವು ಏಕದವಾಗಿರತ್ತದೆ.

(iv) ವಿಲೋಮ ಅಂಶದ ಅಸ್ತಿತ್ವ:

$a \in Q - \{1\}$ ಅಂಶದ ವಿಲೋಮ $x$ ಆಗಿದ್ದಲ್ಲಿ

$aox = xoa = 0$, ಏಕದಾಂಶ

$\therefore\ aox = 0$ ಮತ್ತು $xoa = 0$

ಅಥವಾ $a + x - ax = 0$ ಮತ್ತು $x + a - x a = 0$

ಅಥವಾ $x - ax = -a$ ಮತ್ತು $x - xa = -a$

ಅಥವಾ $x(1 - a) = -a$ ಮತ್ತು $x(1 - a) = -a$

$\therefore \quad x = \dfrac{a}{a-1}$

ಇಲ್ಲಿ $a - 1 \neq 0$ ಏಕೆಂದರೆ $a \in Q - \{1\}$

$\therefore$ $a$ ಯ ವಿಲೋಮವು $\dfrac{a}{a-1}$

ಮತ್ತು $\dfrac{a}{a-1} \in Q - \{1\}$

(v) **ಪರಿವರ್ತನೀಯ ಗುಣಗಳು**

ಯಾವುದೇ ಅಂಶಗಳಾದ $a, b \in Q - \{1\}$

$aob = a + b - ab$

$boa = b + a - ba$

$Q - \{1\}$ ರಲ್ಲಿ $a + b = b + a, ab = ba$

$\therefore aob = boa$

ಆದುದರಿಂದ, $Q - \{1\}$ ಪರಿವರ್ತನೀಯ ಸಂಕುಲ

ಈಗ, $-\dfrac{5}{3} o x = 3^{-1}$ ಎಂಬ ಸಮೀಕರಣವನ್ನು ಬಿಡಿಸೋಣ.

ನಮಗೆ $a^{-1} = \dfrac{a}{a-1}$ ಎಂದು ತಿಳಿದಿದೆ.

$\therefore 3^{-1} = \dfrac{3}{3-1} = \dfrac{3}{2}$

$\frac{5}{3} \circ x = 3^{-1}$ ವನ್ನು ನಾವು ಹೀಗೆ ಬರೆಯುತ್ತೇವೆ :

$$\frac{5}{3} + x - \frac{5}{3}\ x = \frac{3}{2}$$

$$\frac{5}{3} - \frac{3}{2} = x\left[\frac{5}{3}\ -1\right] \text{ ಅಥವಾ } \quad \frac{1}{6} = x\frac{2}{3}$$

ಆದುದರಿಂದ $x = \frac{1}{4}$

6. ಸದಿಶಗಳ ಗಣದಲ್ಲಿ ಸದಿಶ ಗುಣಾಕಾರವು ದ್ವಿಮಾನ ಕ್ರಿಯೆಯಾಗಿದ್ದಲ್ಲಿ ಆ ಗುಣವು ಒಂದು ಸಂಕುಲವಲ್ಲವೆಂದೂ, ಮತ್ತು ಸದಿಶ ಸಂಕಲನ ಕ್ರಿಯೆಯಲ್ಲಿ ಇದು ಒಂದು ಪರಿವರ್ತನೀಯ ಸಂಕುಲ ಎಂದು ಸಾಧಿಸಿ.

$\vec{a}$ ಮತ್ತು $\vec{b}$ ಗಳು ಎರಡು ಸದಿಶಗಳಾಗಿದ್ದರೆ $\vec{a} \times \vec{b}$ ಕೂಡ ಒಂದು ಸದಿಶವಾಗಿರುತ್ತದೆ.

ಆದರೆ $\vec{a} \times (\vec{b} \times \vec{c}) \neq (\vec{a} \times \vec{b}) \times \vec{c}$

ಅಂದರೆ ಸದಿಶ ಗಣದಲ್ಲಿ ಸಹವರ್ತನೀಯ ಗುಣವು ನಿಜವಲ್ಲ. ಆದುದರಿಂದ ಇದು ಸದಿಶ ಗುಣಾಕಾರ ಕ್ರಿಯೆಯಲ್ಲಿ ಸಂಕುಲವಲ್ಲ.

ಸದಿಶ ಸಂಕಲನ ಕ್ರಿಯೆಯಲ್ಲಿ

(i) $\vec{a} + \vec{b}$ ಕೂಡಾ ಒಂದು ಸದಿಶವಾಗಿರುತ್ತದೆ.

(ii) $\vec{a} + (\vec{b} + \vec{c}) = (\vec{a} + \vec{b}) + \vec{c}$

(iii) ಶೂನ್ಯ ಸದಿಶವು ಏಕದವಾಗಿರುತ್ತದೆ;

(iv) $-\vec{a}$ ಸದಿಶವು $\vec{a}$ ಸದಿಶದ ವಿಲೋಮವಾಗಿರುತ್ತದೆ; ಮತ್ತು

(v) $\vec{a} + \vec{b} = \vec{b} + \vec{a}$ ಆಗಿರುತ್ತದೆ.

ಆದುದರಿಂದ ಸದಿಶ ಸಂಕಲನ ಕ್ರಿಯೆಯಲ್ಲಿ ಸದಿಶಗಳ ಗಣವು ಪರಿವರ್ತನೀಯ ಸಂಕುಲವಾಗಿದೆ.

7. $$A_\alpha = \begin{bmatrix} \cos\alpha & -\sin\alpha \\ \sin\alpha & \cos\alpha \end{bmatrix}$$

ಎಂಬ ಮಾತೃಕೆಗಳ ಗಣವು ($\alpha$ವು ವಾಸ್ತವ ಸಂಖ್ಯೆ) ಮಾತೃಕೆಗಳ ಗುಣಾಕಾರ ಕ್ರಿಯೆಯಲ್ಲಿ ಪರಿವರ್ತನೀಯ ಸಂಕುಲ ಎಂದು ಸಾಧಿಸಿ.

$G = \{A_\alpha \mid \alpha \in R\}$, $A_\alpha, A_\beta \in G$ ಆಗಿರಲಿ.

(i) $$A_\alpha \cdot A_\beta = \begin{bmatrix} \cos\alpha & -\sin\alpha \\ \sin\alpha & \cos\alpha \end{bmatrix}\begin{bmatrix} \cos\beta & -\sin\beta \\ \sin\beta & \cos\beta \end{bmatrix}$$

$$= \begin{bmatrix} \cos(\alpha+\beta) & -\sin(\alpha+\beta) \\ \sin(\alpha+\beta) & \cos(\alpha+\beta) \end{bmatrix} = A_{\alpha+\beta} \in G$$

ಏಕೆಂದರೆ $\alpha, \beta$ ವಾಸ್ತವ ಸಂಖ್ಯೆಗಳಾಗಿದ್ದರೆ $\alpha+\beta$ವೂ ವಾಸ್ತವ ಸಂಖ್ಯೆ ಆಗಿರುತ್ತದೆ.

ಆದುದರಿಂದ, $G$ ನಲ್ಲಿ ಆವೃತ ಗುಣವು ನಿಜವಾಗಿದೆ.

(ii) $n \times n$ ಮಾತೃಕೆಗಳ ಗುಣಾಕಾರವು ಸಹವರ್ತನೀಯ ಎಂದು ನಮಗೆ ತಿಳಿದಿದೆ.

ಆದ್ದರಿಂದ ಕೊಟ್ಟಿರುವ ಗಣದಲ್ಲೂ ಈ ಗುಣವು ನಿಜವಾಗಿದೆ.

(iii) $$I = \begin{bmatrix} 1 & 0 \\ 0 & 1 \end{bmatrix} = \begin{bmatrix} \cos 0 & -\sin 0 \\ \sin 0 & \cos 0 \end{bmatrix} = A_0$$

ಎಂಬುದು ಏಕದವಾಗಿರುತ್ತದೆ.

(iv) ಮಾತೃಕೆ $A$ಯ ವಿಲೋಮ $A^{-1} = \dfrac{\text{Adj } A}{|A|}$

ಇಲ್ಲಿ, $|A_\alpha| = \cos^2\alpha + \sin^2\alpha = 1 \neq 0 \quad \therefore A_\alpha^{-1}$ ಅಸ್ತಿತ್ವದಲ್ಲಿದೆ.

$$\text{Adj } A_\alpha = \begin{bmatrix} \cos\alpha & \sin\alpha \\ -\sin\alpha & \cos\alpha \end{bmatrix} = \begin{bmatrix} \cos(-\alpha) & -\sin(-\alpha) \\ \sin(-\alpha) & \cos(-\alpha) \end{bmatrix}$$

$$\therefore A_\alpha^{-1} = \begin{bmatrix} \cos(-\alpha) & -\sin(-\alpha) \\ \sin(-\alpha) & \cos(-\alpha) \end{bmatrix} = A_{-\alpha} \in G$$

ಆದುದರಿಂದ, ಪ್ರತಿ ಅಂಶ $A_\alpha$ ಕ್ಕೂ ವಿಲೋಮವು ಇದೆ.

(v) $$A_\alpha \cdot A_\beta = \begin{bmatrix} \cos(\alpha+\beta) & -\sin(\alpha+\beta) \\ \sin(\alpha+\beta) & \cos(\alpha+\beta) \end{bmatrix}$$

$$= \begin{bmatrix} \cos(\beta+\alpha) & -\sin(\beta+\alpha) \\ \sin(\beta+\alpha) & \cos(\beta+\alpha) \end{bmatrix}$$

$\alpha,\beta$ ವಾಸ್ತವ ಸಂಖ್ಯೆಗಳಾಗಿರುವುದರಿಂದ

$$\alpha+\beta = \beta+\alpha$$

$$\therefore A_\alpha \cdot A_\beta = A_\beta \cdot A_\alpha$$

ಅಂದರೆ, $G$ ಯು ಪರಿವರ್ತನೀಯ ಸಂಕುಲ.

### 5.1.5 ಮಾಡ್ಯುಲೊ ಗಣಿತದಲ್ಲಿ ಸಂಕಲನ ಮತ್ತು ಗುಣಾಕಾರ

$Z_6$ ನಲ್ಲಿ ಮ್ಯಾಡುಲೋ 6 ಸಂಕಲನದ ಕೋಷ್ಟಕವನ್ನು ತಯಾರಿಸಿ.

$Z_6 = \{0,1,2,3,4,5\}$

| $\oplus_6$ | 0 | 1 | 2 | 3 | 4 | 5 |
|---|---|---|---|---|---|---|
| 0 | 0 | 1 | 2 | 3 | 4 | 5 |
| 1 | 1 | 2 | 3 | 4 | 5 | 0 |
| 2 | 2 | 3 | 4 | 5 | 0 | 1 |
| 3 | 3 | 4 | 5 | 0 | 1 | 2 |
| 4 | 4 | 5 | 0 | 1 | 2 | 3 |
| 5 | 5 | 0 | 1 | 2 | 3 | 4 |

$\oplus_6$ ಸಂಕಲನದ ಮೊತ್ತವನ್ನು ಕಂಡುಹಿಡಿಯಲು $Z_6$ ನ ಎರಡು ಅಂಶಗಳ ಸಾಧಾರಣ ಮೊತ್ತ ಕಂಡುಹಿಡಿದು, ಅದನ್ನು 6 ರಿಂದ ಭಾಗಿಸಿ ಬರುವ ಶೇಷವನ್ನು ಸಂಧಿ ಸ್ಥಾನದಲ್ಲಿ ಬರೆಯಬೇಕು.

**8. ಮಾಡ್ಯುಲೋ ಗಣಿತದ ಸಂಕುಲಗಳು**

$Z_5 = \{0, 1, 2, 3, 4\}$ ಮಾಡ್ಯುಲೊ 5 ಸಂಕಲನದಲ್ಲಿ $(Z_5, \oplus_5)$ ಯು ಒಂದು ಪರಿಮಿತ ಪರಿವರ್ತನೀಯ ಸಂಕುಲ ಎಂದು ತೋರಿಸಿ.

| $\oplus_5$ | 0 | 1 | 2 | 3 | 4 |
|---|---|---|---|---|---|
| 0 | 0 | 1 | 2 | 3 | 4 |
| 1 | 1 | 2 | 3 | 4 | 0 |
| 2 | 2 | 3 | 4 | 0 | 1 |
| 3 | 3 | 4 | 0 | 1 | 2 |
| 4 | 4 | 0 | 1 | 2 | 3 |

(i) **ಆವೃತ ಗುಣ:**

ಕೋಷ್ಟಕದ ದಾಖಲೆಗಳೆಲ್ಲವೂ $Z_5$ ಗೆ ಸೇರಿವೆ. ಆದುದರಿಂದ ಆವೃತ ಗುಣ ನಿಜವಾಗಿದೆ.

(ii) **ಸಹವರ್ತನೀಯ ಗುಣ:**

$Z_5$ ನ ಯಾವುದೇ ಮೂರು ಅಂಶಗಳನ್ನು ತೆಗೆದುಕೊಂಡು ಈ ಗುಣವನ್ನು ಪರೀಕ್ಷಿಸಬಹುದು. ಉದಾಹರಣೆಗೆ

$$(2 \oplus_5 4) \oplus_5 3 = 1 \oplus_5 3 = 4$$

ಮತ್ತು $2 \oplus_5 (4 \oplus_5 3) = 2 \oplus_5 2 = 4$

ಆದುದರಿಂದ ಸಹವರ್ತನೀಯ ಗುಣವು ತೃಪ್ತಿಗೊಂಡಿದೆ.

(iii) ಏಕದವು 0 ಆಗಿದೆ. ಏಕೆಂದರೆ ಪ್ರಧಾನ ಸಂಖ್ಯೆ 0 ಆಗಿರುವ ಅಡ್ಡ ಸಾಲು ಮೇಲಿನ ಸಾಲಿಗೆ ತದ್ರೂಪವಾಗಿದೆ.

(iv) 0ವು ಪ್ರತಿ ಅಡ್ಡ ಸಾಲು ಮತ್ತು ಕಂಬ ಸಾಲಿನಲ್ಲಿದೆ. ಈ ಕೋಷ್ಟಕದಿಂದ ನಮಗೆ ಈ ಅಂಶವು ತಿಳಿದುಬರುತ್ತದೆ:

$0 + 0 = 0$

$1 + 4 = 4 + 1 = 0, \quad 4 + 1 = 1 + 4 = 0$

$2 + 3 = 3 + 2 = 0 \quad \therefore (0)^{-1} = 0 \quad (2)^{-1} = 3, \quad (4)^{-1} = 1$

$3 + 2 = 2 + 3 = 0 \quad (1)^{-1} = 4 \quad (3)^{-1} = 2$

ಪ್ರತಿ ಅಂಶಕ್ಕೂ ವಿಲೋಮವಿದೆ.

(v) ಈ ಕೋಷ್ಟಕದ ಮುಖ್ಯ ಕರ್ಣದ ಮೇಲ್ಗಡೆಯ ಪ್ರತಿ ಅಂಶವೂ ಕೆಳಗಡೆಯ ಪ್ರತಿಫಲಿತ ಅಂಶಕ್ಕೆ ಸಮಾನವಾಗಿರುವುದರಿಂದ ಪರಿವರ್ತನೀಯ ನಿಯಮವೂ ನಿಜವಾಗಿದೆ.

ಆದುದರಿಂದ, $(Z_5, \oplus_5)$ ಒಂದು ಪರಿಮಿತ ಪರಿವರ್ತನೀಯ ಸಂಕುಲ.

9. $G = \{2,4,6,8\}$ ಇದು ಮ್ಯಾಡುಲೊ 10ರ ಗುಣಾಕಾರದಲ್ಲಿ ಸಂಕುಲವೇ ಎಂದು ಪರೀಕ್ಷಿಸಿರಿ.

| $\otimes_{10}$ | 2 | 4 | 6 | 8 |
|---|---|---|---|---|
| 2 | 4 | 8 | 2 | 6 |
| 4 | 8 | 6 | 4 | 2 |
| 6 | 2 | 4 | 6 | 8 |
| 8 | 6 | 2 | 8 | 4 |

(i) ಆವೃತ ಗುಣ: ಕೋಷ್ಟಕದ ದಾಖಲೆಗಳೆಲ್ಲವೂ $G$ ಗೆ ಸೇರಿವೆ. ಆದುದರಿಂದ ಆವೃತ ಗುಣ ನಿಜವಾಗಿದೆ.

(ii) ಸಹವರ್ತನೀಯ ಗುಣ: $G$ಯ ಯಾವುದೇ ಮೂರು ಅಂಶಗಳನ್ನು ತೆಗೆದುಕೊಳ್ಳಿ. ಉದಾಹರಣೆಗೆ, , $2, 6, 8 \in G$

$(2 \otimes 6) \otimes 8 = 2 \otimes 8 = 6$

$2 \otimes (6 \otimes 8) = 2 \otimes 8 = 6$

ಆದುದರಿಂದ ಸಹವರ್ತನೀಯ ಗುಣವು ತೃಪ್ತಿಗೊಂಡಿದೆ.

(iii) ಏಕದವು '6' ಆಗಿದೆ ; ಏಕೆಂದರೆ ಪ್ರಧಾನ ಸಂಖ್ಯೆ '6' ಆಗಿರುವ ಅಡ್ಡಸಾಲು ಅದರ ಮೇಲಿನ ಸಾಲಿಗೆ ತದ್ರೂಪವಾಗಿದೆ.

(iv) ಕೋಷ್ಟಕದಿಂದ ನಮಗೆ ಈ ಕೆಳಗಿನ ಅಂಶವು ತಿಳಿದಿರುತ್ತದೆ:

$2 \otimes 8 = 8 \otimes 2 = 6 \qquad \therefore (2)^{-1} = 8$

$4 \otimes 4 = 4 \otimes 4 = 6 \qquad \therefore (4)^{-1} = 4$

$6 \otimes 6 = 6 \otimes 6 = 6 \qquad \therefore (6)^{-1} = 6$

$8 \otimes 2 = 2 \otimes 8 = 6 \qquad \therefore (8)^{-1} = 2$

ಅಂದರೆ, ಪ್ರತಿ ಅಂಶಕ್ಕೂ ವಿಲೋಮವಿದೆ.

(v) ಈ ಕೋಷ್ಟಕದ ಮುಖ್ಯ ಕರ್ಣದ ಮೇಲ್ಗಡೆಯ ಪ್ರತಿ ಅಂಶವೂ ಕೆಳಗಡೆ ಪ್ರತಿಫಲಿತ ಅಂಶಗಳಿಗೆ ಸಮಾನವಾಗಿರುವುದರಿಂದ ಪರಿವರ್ತನೀಯ ಗುಣವೂ ತೃಪ್ತಿಗೊಂಡಿದೆ. ಆದುದರಿಂದ $G$ಯು ಒಂದು ಪರಿಮಿತ ಪರಿವರ್ತನೀಯ ಸಂಕುಲ.

10. $G=\{1,3,5,7,8\}$ ಇದು ಮಾಡ್ಯುಲೊ 11 ರ ಗುಣಾಕಾರದಲ್ಲಿ ಸಂಕುಲವೇ ಎಂದು ಪರೀಕ್ಷಿಸಿರಿ.

| $\otimes_{11}$ | 1 | 3 | 5 | 7 | 8 |
|---|---|---|---|---|---|
| 1 | 1 | 3 | 5 | 7 | 8 |
| 3 | 3 | 9 | 4 | 10 | 2 |
| 5 | 5 | 4 | 3 | 2 | 7 |
| 7 | 7 | 20 | 2 | 5 | 1 |
| 8 | 8 | 2 | 7 | 1 | 9 |

ಆವೃತ ಗುಣ: ಕೋಷ್ಟಕದ ದಾಖಲೆಗಳಲ್ಲಿ ಹಲವು ಅಂಶಗಳು, 9, 10, 4 ಅಂದರೆ $\in G$ ಆದುದರಿಂದ ಆವೃತ ಗುಣವು ನಿಜವಲ್ಲ. ಆದುದರಿಂದ $G$ ಯು ಸಂಕುಲವಲ್ಲ.

## 5.2 ಕ್ರಮಯೋಜನೆಗಳ ಸಂಕುಲ

$A = \{a, b, c\}$ ಎಂದು ತೆಗೆದುಕೊಳ್ಳಿ.

$A$ ಯಲ್ಲಿ 3 ಅಂಶಗಳಿದ್ದು $^3P_3 = 6$ ಕ್ರಮಯೋಜನೆಯನ್ನು ಮಾಡಬಹುದು. ಒಂದು ಗಣವು ಈ 6 ವಿವಿಧ ಕ್ರಮ ಯೋಜನೆಗಳನ್ನು ಹೊಂದಿದ್ದರೆ ಅದನ್ನು ಸಮಮಿತ ಕ್ರಮಯೋಜನೆಯ ಗಣ ಎಂದು ಕರೆಯುತ್ತೇವೆ. ಇದನ್ನು $S_3$ ಎಂದು ಸೂಚಿಸುತ್ತೇವೆ. ಈ ಕ್ರಮಯೋಜನೆಯನ್ನು ಎರಡು ಸಾಲುಗಳಲ್ಲಿ ಸೂಚಿಸುತ್ತೇವೆ

$$S_3 = \left[\begin{pmatrix} a & b & c \\ a & b & c \end{pmatrix}, \begin{pmatrix} a & b & c \\ a & c & b \end{pmatrix}, \begin{pmatrix} a & b & c \\ b & a & c \end{pmatrix}, \begin{pmatrix} a & b & c \\ b & c & a \end{pmatrix}, \begin{pmatrix} a & b & c \\ c & a & b \end{pmatrix}, \begin{pmatrix} a & b & c \\ c & b & a \end{pmatrix}\right]$$

ಈ ಕ್ರಮ ಯೋಜನೆಗಳನ್ನು $P_0, P_1, P_2, P_3, P_4, P_5$ ಎಂದು ಸೂಚಿಸಿದಾಗ

$$S_3 = \{P_0, P_1, P_2, P_3, P_4, P_5\}$$

**ಎರಡು ಕ್ರಮಯೋಜನೆಗಳ ಗುಣಲಬ್ಧ**

ಉದಾಹರಣೆಗೆ, ಎರಡು ಕ್ರಮಯೋಜನೆ $P_3$ ಮತ್ತು $P_4$ ಗಳನ್ನು ತೆಗೆದುಕೊಳ್ಳಿ. ಆಗ

$$P_3 . P_4 = \begin{pmatrix} a & b & c \\ b & c & a \end{pmatrix} \cdot \begin{pmatrix} a & b & c \\ c & a & b \end{pmatrix} = P_0$$

ಎರಡನೇ ಕ್ರಮಯೋಜನೆಯ ಮೊದಲಿನ ಸಾಲನ್ನು ಒಂದನೇ ಕ್ರಮಯೋಜನೆಯ ಎರಡನೇ ಸಾಲಿನ ಕ್ರಮದಲ್ಲಿ ಬರೆಯಿರಿ. ಅದಕ್ಕೆ ಅನುಗುಣವಾಗಿ ಎರಡನೇ ಕ್ರಮಯೋಜನೆಯ ಎರಡನೆಯ ಸಾಲನ್ನು ಬರೆಯಬೇಕು. ಆಗ

$$P_3.P_4 = \begin{pmatrix} a & b & c \\ b & c & a \end{pmatrix} . \begin{pmatrix} b & c & a \\ a & b & c \end{pmatrix} = \begin{pmatrix} a & b & c \\ a & b & c \end{pmatrix} = P_0$$

ಇದೇ ರೀತಿಯಾಗಿ, $P_3.P_2$ನ್ನು ಕಂಡುಹಿಡಿಯಬಹುದು.

ಈಗ, $P_2.P_1$ ಮತ್ತು $P_1.P_2$ ಗಳನ್ನು ಪರಿಶಿಲಿಸೋಣ:

$$P_2.P_1 = \begin{pmatrix} a & b & c \\ b & a & c \end{pmatrix} . \begin{pmatrix} a & b & c \\ a & c & b \end{pmatrix}$$

$$= \begin{pmatrix} a & b & c \\ b & a & c \end{pmatrix} \begin{pmatrix} b & a & c \\ c & a & b \end{pmatrix}$$

$$= \begin{pmatrix} a & b & c \\ c & a & b \end{pmatrix} = P_4$$

$$\therefore P_2.P_1 = P_4$$

ಹಾಗೆಯೇ, $P_1.P_2$ ವನ್ನು ಕಂಡುಹಿಡಿಯೋಣ:

$$P_1.P_2 = \begin{pmatrix} a & b & c \\ a & c & b \end{pmatrix} . \begin{pmatrix} a & b & c \\ b & a & c \end{pmatrix}$$

$$= \begin{pmatrix} a & b & c \\ a & c & b \end{pmatrix} \begin{pmatrix} a & c & b \\ b & c & a \end{pmatrix}$$

$$= \begin{pmatrix} a & b & c \\ b & c & a \end{pmatrix} = P_3$$

$$\therefore P_2.P_1 \neq P_1.P_2$$

ಆದ್ದರಿಂದ, ಕ್ರಮಯೋಜನೆಗಳ ಗುಣಾಕಾರವು ಪರಿವರ್ತನೀಯವಲ್ಲ.

ಏಕದ ಕ್ರಮಯೋಜನೆ

$$P_0 = \begin{pmatrix} a & b & c \\ a & b & c \end{pmatrix}$$

ಎಂಬುದು ಏಕದ ಕ್ರಮ ಯೋಜನೆ

ಉದಾಹರಣೆ

$$P_0.P_5 = \begin{pmatrix} a & b & c \\ a & b & c \end{pmatrix}\begin{pmatrix} a & b & c \\ c & b & a \end{pmatrix} = \begin{pmatrix} a & b & c \\ c & b & a \end{pmatrix} = P_5$$

ವಿಲೋಮ ಕ್ರಮಯೋಜನೆ

$$P_1 = \begin{pmatrix} a & b & c \\ a & c & b \end{pmatrix}$$

ಎಂಬುದರ ವಿಲೋಮ ಕ್ರಮಯೋಜನೆಯು $P_1$ ನ ಎರಡು ಸಾಲುಗಳನ್ನು ಅದಲು ಬದಲು ಮಾಡಿದಾಗ

$$P_1^{-1} = \begin{pmatrix} a & c & b \\ a & b & c \end{pmatrix}$$

$$= \begin{pmatrix} a & b & c \\ a & c & b \end{pmatrix} = P_1 \quad \therefore P_1^{-1} = P_1$$

ಹಾಗೆಯೇ, $P_3 = \begin{pmatrix} a & b & c \\ b & c & a \end{pmatrix}$

$$\therefore P_3^{-1} = \begin{pmatrix} b & c & a \\ a & b & c \end{pmatrix}$$

$$= \begin{pmatrix} a & b & c \\ c & a & b \end{pmatrix} = P_4 \quad \therefore P_3^{-1} = P_4$$

ಪ್ರಮೇಯ : ಕ್ರಮಯೋಜನೆಗಳ ಗುಣಲಬ್ಧ ದ್ವಿಮಾನ ಕ್ರಿಯೆಯಲ್ಲಿ ಕ್ರಮಯೋಜನೆಗಳ ಗಣ $S_3$ ಒಂದು ಸಂಕುಲ.

ಸಾಧನೆ:

$S = \{a, b, c\}$ ಆದಾಗ

$S_3 = \{P_o, P_1, P_2, P_3, P_4, P_5\}$

ಇಲ್ಲಿ, $P_o = \begin{pmatrix} a & b & c \\ a & b & c \end{pmatrix}$ $P_1 = \begin{pmatrix} a & b & c \\ a & c & b \end{pmatrix}$

$P_2 = \begin{pmatrix} a & b & c \\ b & a & c \end{pmatrix}$ $P_3 = \begin{pmatrix} a & b & c \\ b & c & a \end{pmatrix}$

$P_4 = \begin{pmatrix} a & b & c \\ c & a & b \end{pmatrix}$ $P_5 = \begin{pmatrix} a & b & c \\ c & b & a \end{pmatrix}$

ಮೊದಲು ಕ್ರಮಯೋಜನೆಗಳ ಗುಣಲಬ್ಧದ ಕೋಷ್ಟಕವನ್ನು ಬರೆಯೋಣ:

| . | $P_o$ | $P_1$ | $P_2$ | $P_3$ | $P_4$ | $P_5$ |
|---|---|---|---|---|---|---|
| $P_o$ | $P_o$ | $P_1$ | $P_2$ | $P_3$ | $P_4$ | $P_5$ |
| $P_1$ | $P_1$ | $P_o$ | $P_3$ | $P_2$ | $P_5$ | $P_4$ |
| $P_2$ | $P_2$ | $P_4$ | $P_o$ | $P_5$ | $P_1$ | $P_3$ |
| $P_3$ | $P_3$ | $P_5$ | $P_1$ | $P_4$ | $P_o$ | $P_2$ |
| $P_4$ | $P_4$ | $P_2$ | $P_5$ | $P_o$ | $P_3$ | $P_1$ |
| $P_5$ | $P_5$ | $P_3$ | $P_4$ | $P_1$ | $P_2$ | $P_o$ |

(i) **ಆವೃತ ಗುಣ:** ಈ ಕೋಷ್ಟಕದ ಎಲ್ಲಾ ಅಂಶಗಳೂ $S_3$ ಯಲ್ಲಿವೆ. ಆದುದರಿಂದ ಆವೃತಗುಣ ತೃಪ್ತಿಗೊಂಡಿದೆ.

(ii) **ಸಹವರ್ತನೀಯ ಗುಣ:** $P_3$, $P_1$, $P_5$ ಈ ಮೂರು ಅಂಶಗಳನ್ನು ತೆಗೆದುಕೊಳ್ಳಿ.

ಈಗ, $(P_3.P_1).P_5 = P_5.P_5 = P_o$

ಮತ್ತು $P_3.(P_1.P_5) = P_3.\ P_4 = P_o$

$\therefore (P_3.P_1).P_5 = P_3.(P_1.P_5)$

ಹೀಗೆ ಸಹವರ್ತನೀಯ ಗುಣವನ್ನು ಮನಗಾಣಬಹುದು.

(iii) ಏಕದ ಅಂಶ: ಕೋಷ್ಟಕದಿಂದ $P_0$ ವು ಏಕದ ಎಂದು ತಿಳಿದು ಬರುತ್ತದೆ.

(iv) ವಿಲೋಮ: ಕೋಷ್ಟಕದಿಂದ

$P_0^{-1} = P_0$ $\quad P_3^{-1} = P_4$

$P_1^{-1} = P_1$ $\quad P_4^{-1} = P_3$

$P_2^{-1} = P_2$ $\quad P_5^{-1} = P_5$

ಅಂದರೆ, ಎಲ್ಲಾ ಅಂಶಗಳಿಗೂ ವಿಲೋಮಗಳಿವೆ.

ಆದ್ದರಿಂದ, $S_3$ ಕ್ರಮಯೋಜನೆಗಳ ಗುಣಲಬ್ಧದಲ್ಲಿ ಒಂದು ಸಂಕುಲ. ಆದರೆ ಇದು ಅಪರಿವರ್ತನೀಯ ಸಂಕುಲ.

## 5.3 ಒಂದರ ವರ್ಗಮೂಲ, ಘನಮೂಲ, ಚತುರ್ಥ ಮೂಲಗಳು

ಇವುಗಳು ಗುಣಾಕಾರ ಪರಿಕ್ರಿಯೆಯಲ್ಲಿ ಪರಿವರ್ತನೀಯ ಸಂಕುಲಗಳು ಎಂದು ಸಾಧಿಸೋಣ.

(1) **ಒಂದರ ವರ್ಗಮೂಲಗಳು**

$x = \sqrt{1}$ ಎಂದಿರಲಿ.

$\therefore x^2 = 1$

ಅಥವಾ $x^2 - 1 = 0$

ಅಥವಾ $(x-1)(x+1) = 0$

ಅಂದರೆ, $x = 1, -1$ ಇವುಗಳು ಒಂದರ ವರ್ಗಮೂಲಗಳು

ಗುಣಾಕಾರ ಪರಿಕ್ರಿಯೆಯಲ್ಲಿ ಕೋಷ್ಟಕ : $G = \{1, -1\}$ ಆಗಿರಲಿ.

| × | 1 | −1 |
|---|---|---|
| 1 | 1 | −1 |
| −1 | −1 | 1 |

(i) ಆವೃತ ಗುಣ: ಕೋಷ್ಟಕದ ಎಲ್ಲಾ ಅಂಶಗಳೂ $G$ ಯಲ್ಲಿವೆ. ಆದುದರಿಂದ ಆವೃತ ಗುಣವು ತೃಪ್ತಿಗೊಂಡಿದೆ.

(ii) ಸಹವರ್ತನೀಯ ಗುಣ:

$1, -1, 1 \in G$

$\{1 \times (-1)\} \times 1 = -1 \times 1 = -1$

$1 \times \{(-1) \times 1\} = 1 \times -1 = -1$

ಆದುದರಿಂದ ಸಹವರ್ತನೀಯ ಗುಣವು ತೃಪ್ತಿಗೊಂಡಿದೆ.

(iii) 1 ಇದು ಏಕದವಾಗಿರುತ್ತದೆ.

(iv) ಕೋಷ್ಟಕದಿಂದ $1 \times 1 = 1 \quad \therefore (1)^{-1} = 1$

$(-1) \times (-1) = 1 \quad \therefore (-1)^{-1} = -1$

ಆದುದರಿಂದ $G$ ನಲ್ಲಿ ಎಲ್ಲಾ ಅಂಶಗಳಿಗೂ ವಿಲೋಮಗಳಿವೆ.

(v) ಪರಿವರ್ತನೀಯ ಗುಣವೂ ತೃಪ್ತಿಗೊಂಡಿದೆ.

ಒಂದರ ವರ್ಗಮೂಲಗಳು ಗುಣಾಕಾರ ಪ್ರತಿಕ್ರಿಯೆಯಲ್ಲಿ ಪರಿವರ್ತನೀಯ ಸಂಕುಲವಾಗಿದೆ.

**(2)** **ಒಂದರ ಘನಮೂಲಗಳು**

$x = 1^{1/3}$ ಎಂದಿರಲಿ

$\therefore \; x^3 - 1 = 0$

ಅಥವಾ $(x-1)(x^2+x+1) = 0$

ಅಥವಾ $x - 1 = 0$ ಮತ್ತು $x^2 + x + 1 = 0$

ಅಂದರೆ, $x = 1$

ಮತ್ತು $x = \dfrac{-1 \pm \sqrt{1-4}}{2} = \dfrac{-1 \pm \sqrt{3}\, i}{2}$

$$\omega = \frac{-1+i\sqrt{3}}{2} \text{ ಆದರೆ, } \quad \omega^2 = \frac{(-1+i\sqrt{3})^2}{2}$$

ಅಂದರೆ $\omega^2 = \dfrac{1 + i^2 3 - 2i\sqrt{3}}{4} = \dfrac{-1-i\sqrt{3}}{2}$

ಆದ್ದರಿಂದ, $1, \omega, \omega^2$ ಒಂದರ ಘನಮೂಲಗಳಾಗಿವೆ.

$G = \{1, \omega, \omega^2\}$ ಆಗಿರಲಿ.

$G$ ಗಣದಲ್ಲಿ ಗುಣಲಬ್ಧದ ಕೋಷ್ಟಕ:

| . | 1 | $\omega$ | $\omega^2$ |
|---|---|---|---|
| 1 | 1 | $\omega$ | $\omega^2$ |
| $\omega$ | $\omega$ | $\omega^2$ | 1 |
| $\omega^2$ | $\omega^2$ | 1 | $\omega$ |

ಏಕೆಂದರೆ, $\omega.\omega^2 = \omega^3 = 1$

$\omega^2.\omega^2 = \omega^4 = \omega.\omega^3 = \omega.1 = \omega$

(i) ಆವೃತ ಗುಣ: ಕೋಷ್ಟಕದ ಎಲ್ಲಾ ಅಂಶಗಳೂ $G$ ಯಲ್ಲಿವೆ. ಆದುದರಿಂದ ಆವೃತ ಗುಣವು ತೃಪ್ತಿಗೊಂಡಿದೆ.

(*ii*) ಸಹವರ್ತನೀಯ ಗುಣ: $\omega^2, 1, \omega \in G$

ಈಗ, $(\omega^2.1) . \omega = \omega^3 = 1$

ಮತ್ತು $\omega^2 . (1 . \omega) = \omega^3 = 1$

ಆದ್ದರಿಂದ, ಸಹವರ್ತನೀಯ ಗುಣವು ತೃಪ್ತಿಗೊಂಡಿದೆ.

(iii) 1 ಏಕದವಾಗಿದೆ.

(iv) ಕೋಷ್ಟಕದಿಂದ $1.1 = 1$ $\therefore (1)^{-1} = 1$

$\omega.\omega^2 = \omega^2.\omega = 1$ $\therefore (\omega)^{-1} = \omega^2$

$\omega^2.\omega = \omega.\omega^2 = 1$ $(\omega^2)^{-1} = \omega$

ಆದುದರಿಂದ $G$ಯ ಎಲ್ಲಾ ಅಂಶಗಳಿಗೂ ವಿಲೋಮಗಳಿವೆ.

(v) ಕೋಷ್ಟಕದ ಮುಖ್ಯ ಕರ್ಣದ ಕೆಳಗೆ ಮತ್ತು ಮೇಲೆ ಸಮಾನ ಅಂಶಗಳಿವೆ. ಅಂದರೆ ಪರಿವರ್ತನೀಯ ಗುಣವು ತೃಪ್ತಿಗೊಂಡಿದೆ. ಹೀಗೆ, 1 ರ ಘನಮೂಲಗಳ ಗಣವು ಗುಣಾಕಾರ ಕ್ರಿಯೆಯಲ್ಲಿ ಪರಿವರ್ತನೀಯ ಸಂಕುಲವಾಗಿದೆ.

(3) ಒಂದರ ಚತುರ್ಥ ಮೂಲಗಳು

$x = 1^{1/4}$ ಎಂದಿರಲಿ.

$\therefore x^4 - 1 = 0$

ಅಥವಾ $(x^2-1)(x^2+1) = 0$

ಅಥವಾ $x^2-1 = 0$ ಮತ್ತು $x^2+1 = 0$

ಅಥವಾ $(x-1)(x+1) = 0$ ಮತ್ತು $x^2 = -1$

$\therefore x = \pm 1, \pm\sqrt{-1} = \pm 1, \pm i$

ಅಂದರೆ, $\{1, -1, i, -i\}$ ಯು 1 ರ ಚತುರ್ಥ ಮೂಲಗಳ ಗಣ.

$G = \{1, -1, i, -i\}$ ಆಗಿರಲಿ. ಇದರಲ್ಲಿ ಗುಣಲಬ್ಧದ ಕೋಷ್ಟಕ:

| × | 1 | −1 | $i$ | $-i$ |
|---|---|---|---|---|
| 1 | 1 | −1 | $i$ | $-i$ |
| −1 | −1 | 1 | $-i$ | $i$ |
| $i$ | $i$ | $-i$ | −1 | 1 |
| $-i$ | $-i$ | $i$ | 1 | −1 |

(i) ಆವೃತ ಗುಣ: ಕೋಷ್ಟಕದ ಎಲ್ಲಾ ಅಂಶಗಳೂ $G$ ಯಲ್ಲಿವೆ. ಆದುದರಿಂದ ಆವೃತ ಗುಣವು ತೃಪ್ತಿಗೊಂಡಿದೆ.

(ii) **ಸಹ ವರ್ತನೀಯ ಗುಣ:** $-1, i, -i \in G$ ಪರಿಗಣಿಸಿ.

ಈಗ, $-1 \times (i \times -i) = -1 \times (1) = -1$

ಮತ್ತು $(-1 \times i) \times -i = -i \times -i = i^2 = -1$

ಆದುದರಿಂದ ಸಹವರ್ತನೀಯ ಗುಣವು ತೃಪ್ತಿಗೊಂಡಿದೆ.

(iii) 1 ಏಕದವಾಗಿರುತ್ತದೆ.

(iv) ಕೋಷ್ಟಕದಿಂದ $1 \times 1 = 1$ $\therefore (1)^{-1} = 1$

$(-1) \times (-1) = 1$ $\therefore (-1)^{-1} = -1$

$i \times (-i) = (-i) \times i = 1$ $\therefore (+i)^{-1} = -i$

$-i \times i = (i) \times (-i) = 1$ $\therefore (-i)^{-1} = i$

ಆದುದರಿಂದ $G$ ಯ ಎಲ್ಲಾ ಅಂಶಗಳಿಗೂ ವಿಲೋಮಗಳಿವೆ.

(v) ಕೋಷ್ಟಕದ ಮುಖ್ಯ ಕರ್ಣದ ಮೇಲಿನ ಮತ್ತು ಕೆಳಗಿನ ಅಂಶಗಳೂ ಸಮಾನವಾಗಿವೆ. ಅಂದರೆ, ಪರಿವರ್ತನೀಯ ಗುಣವು ತೃಪ್ತಿಗೊಂಡಿವೆ.
ಆದುದರಿಂದ $\{1, -1, i, -i\}$ ಯು ಗುಣಾಕಾರ ಕ್ರಿಯೆಯಲ್ಲಿ ಪರಿವರ್ತನೀಯ ಸಂಕುಲವಾಗಿದೆ.

## 5.4 ಸಂಕುಲದ ಕೆಲವು ಗುಣಗಳು

1. ಸಂಕುಲದ ಏಕದವು ಏಕೈಕವಾಗಿದೆ

$(G, *)$ ಒಂದು ಸಂಕುಲವಾಗಿರಲಿ.

ಅದರಲ್ಲಿ, $e$ ಮತ್ತು $e'$ ಎರಡು ಏಕದವಾಗಿರಲಿ.

ಈಗ, $e$ ಯು ಏಕದವಾಗಿರುವುದರಿಂದ

$e' * e = e * e' = e'$ ...(1)

ಹಾಗೆಯೇ, $e'$ ಯು ಏಕದವಾಗಿರುವುದರಿಂದ

$e * e' = e' * e = e$ ...(2)

ಈಗ, (1) ಮತ್ತು (2) ರಿಂದ

$e = e'$

ಆದುದರಿಂದ ಸಂಕುಲದಲ್ಲಿ ಒಂದೇ ಏಕದವಿರುತ್ತದೆ.

2. $(G, *)$ ಸಂಕುಲದಲ್ಲಿ ಪ್ರತಿ ಅಂಶದ ವಿಲೋಮವೂ ಏಕೈಕವಾಗಿದೆ.

$(G, *)$ ಸಂಕುಲದಲ್ಲಿ $e$ ಯು ಏಕದವಾಗಿರಲಿ.

$a$ ಯು ಯಾವುದೇ ಒಂದು ಅಂಶವಾಗಿರಲಿ. $b$ ಮತ್ತು $c$ ಗಳು $a$ ಯ ವಿಲೋಮಗಳಾಗಿರಲಿ

ಅಂಶ $b$ ಯು $a$ ಯ ವಿಲೋಮವಾಗಿರುವ ಕಾರಣ

$a*b = b*a = e$ ... (1)

ಹಾಗೆಯೇ $c$ ಯು $a$ ಯ ವಿಲೋಮವಾಗಿರುವ ಕಾರಣ

$a*c = c*a = e$ ... (2)

ಈಗ, $b = b*e$ [ಏಕದದ ಗುಣದಿಂದ]

$= b*(a*c)$ [(2) ರಿಂದ]

$= (b*a)*c$ [ಸಹವರ್ತನೀಯ ಗುಣದಿಂದ]

$= e * c$ [(1) ರಿಂದ].

ಅಂದರೆ, $b = c$ (ಏಕದದ ಗುಣದಿಂದ)

ಆದುದರಿಂದ, $a$ಯ ವಿಲೋಮವು ಏಕೈಕವಾಗಿದೆ.

3. **$(G, *)$ ಸಂಕುಲದಲ್ಲಿ $a$ಯು ಯಾವುದೇ ಒಂದು ಅಂಶವಾಗಿದ್ದಲ್ಲಿ $(a^{-1})^{-1} = a$**

$a$ ಅಂಶದ ವಿಲೋಮ $a^{-1} = x$ ಎಂದಿರಲಿ

$\therefore x * a = a^{-1} * a = e$ [ವಿಲೋಮ ಗುಣದಿಂದ]

$a * x = a * a^{-1} = e$

$\therefore x * a = a * x = e$

ಇದರಿಂದ $x$ನ ವಿಲೋಮವು $a$ ಎಂದು ತಿಳಿಯುತ್ತದೆ.

$\therefore x^{-1} = a$

ಅಂದರೆ, $(a^{-1})^{-1} = a$

4. **$a$ ಮತ್ತು $b$ ಗಳು $(G, x)$ ಸಮೂಹದಲ್ಲಿ ಎರಡು ಅಂಶಗಳಾಗಿದ್ದರೆ, $(a \times b)^{-1} = b^{-1} \times a^{-1}$**

ಈ ಮುಂದಿನ 'ಗುಣಲಬ್ದ' ವನ್ನು ಪರಿಗಣಿಸಿ:

$(a \times b) \times (b^{-1} \times a^{-1})$

$= a \times [b \times (b^{-1} \times a^{-1})]$ (ಸಹವರ್ತನೀಯ ಗುಣ)

$= a \times [(b \times b^{-1}) \times a^{-1})]$ (ಸಹವರ್ತನೀಯ ಗುಣ)

$= a \times (e \times a^{-1})$ (ವಿಲೋಮ ಗುಣ)

$= a \times a^{-1}$ (ಏಕದದ ಗುಣ)

$= e$ (ವಿಲೋಮ ಗುಣ)

$\therefore (a \times b) \times (b^{-1} \times a^{-1}) = e$ ...(1)

ಈ ಮುಂದಿನದನ್ನು ತೆಗೆದುಕೊಳ್ಳಿ

$(b^{-1} \times a^{-1}) \times (a \times b)$

$= b^{-1} \times [a^{-1} \times (a \times b)]$ (ಸಹವರ್ತನೀಯ ಗುಣ)

$= b^{-1} \times [(a^{-1} \times a) \times b)]$ (ಸಹವರ್ತನೀಯ ಗುಣ)

$= b^{-1} \times (e \times b)$ (ವಿಲೋಮ ಗುಣ)

$= b^{-1} \times b$ (ಏಕದದ ಗುಣ)

$= e$ (ವಿಲೋಮ ಗುಣ)

$\therefore (b^{-1} \times a^{-1}) \times (a \times b) = e$ ... (2)

ಈಗ, (1) ಮತ್ತು (2) ರಿಂದ

$(a \times b) \times (b^{-1} \times a^{-1}) = (b^{-1} \times a^{-1}) \times (a \times b) = e$

ಅಂದರೆ, $(a \times b)$ದ ವಿಲೋಮವು $b^{-1} \times a^{-1}$

$\therefore (a \times b)^{-1} = b^{-1} \times a^{-1}$

**5. ಎಡ ಮತ್ತು ಬಲ ನಿರಸನ ನಿಯಮಗಳು**

$a, b, c$ ಗಳು $(G,*)$ ಸಂಕುಲದ ಯಾವುದೇ 3 ಅಂಶಗಳಾಗಿರಲಿ.

ಆಗ (i) $a*b = a*c \Longrightarrow b=c$ ಎಡ ನಿರಸನ ನಿಯಮ

(ii) $a*b = c*b \Longrightarrow a=c$ ಬಲ ನಿರಸನ ನಿಯಮ

(i) $a*b = a*c$ ... (1)

$a \in G \Longrightarrow a^{-1} G$

ಈಗ, (1) ರಿಂದ

$a^{-1}*(a*b) = a^{-1}*(a*c)$

$\therefore (a^{-1}*a)*b = (a^{-1}*a)*c$ (ಸಹವರ್ತನೀಯ ಗುಣ)

ಅಥವಾ $e*b = e*c$ (ವಿಲೋಮ ಗುಣ)

ಅಥವಾ $\cdot\, b = c$ (ಏಕದದ ಗುಣ)

$\therefore a*b = a*c \Longrightarrow b=c$

(ii) $a*b = c*b$ ... (2)

ಆಗಿರಲಿ. ಯಾವುದೇ ಅಂಶ

$b \in G \Longrightarrow b^{-1} \in G$

ಈಗ, $(a*b)*b^{-1} = (c*b)*b^{-1}$ [(2) ರಿಂದ]

$\therefore a*(b*b^{-1}) = c*(b*b^{-1})$ (ಸಹವರ್ತನೀಯ ಗುಣ)

ಅಥವಾ $a*e = c*e$ (ವಿಲೋಮ ಗುಣ)

$\therefore a = c$ (ಏಕದದ ಗುಣ)

$\therefore a*b = c*b \Rightarrow a=c$

6. **$a$ ಮತ್ತು $b$ ಗಳು $(G, *)$ ಯ ಎರಡು ಅಂಶಗಳಾಗಿದ್ದರೆ $a*x = b$ ಮತ್ತು $y*a = b$ ಸಮೀಕರಣಗಳ ಉತ್ತರವು $(G\ *)$ ಯಲ್ಲಿದ್ದು ಅದು ಏಕೈಕವಾಗಿರುತ್ತದೆ.**

$a*x = b$ ...(1)

ಸಮೀಕರಣವನ್ನು ಪರಿಗಣಿಸಿ.

$a \in G \therefore a^{-1} \in G$

ಈಗ, $a^{-1} * (a*x) = a^{-1}*b$ (1) ರಿಂದ

ಅಥವಾ $(a^{-1} * a) * x = a^{-1}*b$ (ಸಹವರ್ತನೀಯ ಗುಣ)

ಅಥವಾ $e*x = a^{-1} * b$ (ವಿಲೋಮಗುಣ)

ಅಥವಾ $x = a^{-1} * b$ (ಏಕದದ ಗುಣ)

ಆದ್ದರಿಂದ, $x = a^{-1}*b \in G$ ಯು $a*x = b$ ಸಮೀಕರಣದ ಪರಿಹಾರವಾಗಿದೆ. ಈಗ, ಈ ಪರಿಹಾರವು ಏಕೈಕವಾಗಿದೆ ಎಂದು ತೋರಿಸಬೇಕು. $x_1$ ಮತ್ತು $x_2$ ಗಳು ಎರಡೂ ಅಂಶಗಳು $a*x = b$ ಸಮೀಕರಣದ ಪರಿಹಾರಗಳಾಗಿರಲಿ.

ಅಂದರೆ, $a * x_1 = b$, $a * x_2 = b$

$\therefore a*x_1 = a*x_2$

$\therefore a^{-1} *(a*x_1) = a^{-1}*(a*x_2)$

ಅಥವಾ $(a^{-1}*a) * x_1 = (a^{-1}*a) * x_2$ (ಸಹವರ್ತನೀಯ ಗುಣ)

ಅಂದರೆ, $e * x_1 = e * x_2$ (ವಿಲೋಮ ಗುಣ)

$\therefore x_1 = x_2$ (ಏಕದದ ಗುಣ)

ಅಂದರೆ, $a*x = b$ ಸಮೀಕರಣದ ಉತ್ತರವು ಏಕೈಕವಾಗಿದೆ.

ಈಗ, ಎರಡನೇ ಸಮೀಕರಣವನ್ನು ಪರಿಗಣಿಸೋಣ.

$y *a = b$ ... (2)

$a \in G \quad \therefore a^{-1} \in G$

$\therefore (y*a) * a^{-1} = b*a^{-1}$

ಅಥವಾ $y* (a*a^{-1}) = b*a^{-1}$ (ಸಹವರ್ತನೀಯ ಗುಣ)

$y * e = b*a^{-1}$ (ವಿಲೋಮ ಗುಣ)

$y = b*a^{-1}$ (ಏಕದದ ಗುಣ)

$y = b * a^{-1} \in G$ ಯು $y * a = b$ ಸಮೀಕರಣದ ಪರಿಹಾರವಾಗಿದೆ.

ಈಗ, ಈ ಪರಿಹಾರವು ಏಕೈಕವಾಗಿದೆ ಎಂದು ತೋರಿಸಬೇಕು.

ಅಂದರೆ, $y_1$ ಮತ್ತು $y_2$ ಎರಡೂ $y * a = b$ ಸಮೀಕರಣದ ಪರಿಹಾರವಾಗಿರಲಿ.

$y_1 * a = b$ ಮತ್ತು $y_2 * a = b$

$\therefore y_1 * a = y_2 * a$

$\therefore (y_1 * a) * a^{-1} = (y_2 * a) * a^{-1}$

ಅಥವಾ $y_1 * (a * a^{-1}) = y_2 * (a * a^{-1})$ (ಸಹವರ್ತನೀಯ ಗುಣ)

ಅಥವಾ $y_1 * e = y_2 * e$ (ವಿಲೋಮ ಗುಣ)

ಅಥವಾ $y_1 = y_2$ (ಏಕದ ಗುಣ)

$\therefore y * a = b$ ಸಮೀಕರಣದ ಪರಿಹಾರವು ಏಕೈಕವಾಗಿದೆ.

## 5.5 ಉಪಸಂಕುಲಗಳು

$(G,*)$ ಯು ಒಂದು ಸಂಕುಲವಾಗಿರಲಿ $H$ ಎಂಬುದು $G$ ಯ ಶೂನ್ಯವಲ್ಲದ ಉಪಗಣವಾಗಿರಲಿ. $(H, *)$ ಕೂಡಾ ಒಂದು ಸಂಕುಲವಾದರೆ ಅದನ್ನು $G$ ಯ *ಉಪಸಂಕುಲ* ಎಂದು ಕರೆಯುತ್ತೇವೆ.

ಉದಾಹರಣೆಗಳು

1. $G=\{1, -1, i, -i\}$ ಯು ಗುಣಾಕಾರ ಕ್ರಿಯೆಯಲ್ಲಿ ಒಂದು ಸಂಕುಲವಾಗಿರುತ್ತದೆ.

$H=\{1, -1\}$ ಯು $G$ ಯ ಉಪಗಣ ಮತ್ತು ಇದು ಕೂಡಾ ಗುಣಾಕಾರ ಕ್ರಿಯೆಯಲ್ಲಿ ಸಂಕುಲವಾಗಿದೆ.

ಆದುದರಿಂದ $H$ ಯು $G$ ಯು ಉಪಸಂಕುಲವಾಗಿದೆ.

2. $(R,+)$ ಒಂದು ಸಂಕುಲವಾಗಿದೆ.

$I \subset R$

$(I, +)$ ಕೂಡಾ ಒಂದು ಸಂಕುಲವಾಗಿದೆ.

$\therefore$ $I$ ಯು $R$ ನ ಉಪಸಂಕುಲವಾಗಿದೆ.

3. $G=\{1, -1, i, -i\}$ ಗುಣಲಬ್ಧ ಪರಿಕ್ರಿಯೆಯಲ್ಲಿ ಒಂದು ಸಂಕುಲವಾಗಿದೆ.

$H=\{1, i\} \subset G$ ಆದರೆ $H$ ಉಪಸಂಕುಲವಲ್ಲ. ಏಕೆಂದರೆ $i.i = i^2 = -1 \notin H$. ಅಂದರೆ, ಆವೃತ ಗುಣವು ನಿಜವಲ್ಲ.

**ಸೂಚನೆ :**

$(G, *)$ ಸಂಕುಲವಾಗಿದ್ದಲ್ಲಿ $G$ ಮತ್ತು $\{e\}$ ಗಳನ್ನು ***ಅನುಚಿತ ಉಪಸಂಕುಲ***ಗಳೆಂದು ಕರೆಯುತ್ತೇವೆ

ಪ್ರಮೇಯ 1:

$(G, *)$ ಯ ಶೂನ್ಯವಲ್ಲದ ಉಪಗಣ $H$ ಒಂದು ಉಪಸಂಕುಲ ಆಗಿದ್ದರೆ ಮತ್ತು ಆಗಬೇಕಿದ್ದರೆ ಈ ಕೆಳಗಿನ ಗುಣಗಳನ್ನು ಹೊಂದಿರಬೇಕು.

(i) $\forall\ a, b \in H, \quad a * b \in H$

(ii) $\forall\ a \in H, \quad a^{-1} \in H$

ಸಾಧನೆ:

I $(H, *)$ ಎಂಬುದು $(G, *)$ ಯ ಉಪಸಂಕುಲವಾಗಿರಲಿ.

ಈಗ, (i) $\forall\ a, b \in H,\ a * b \in H$

ಮತ್ತು (ii) $\forall\ a \in H,\ a^{-1} \in H$ ಎಂದು ತೋರಿಸಬೇಕು.

$(H, *)$ ಉಪಸಂಕುಲವಾಗಿದ್ದರೆ ಅದೂ ಒಂದು ಸಂಕುಲವಾಗಿದೆ. ಆದುದರಿಂದ ಆವೃತ ಗುಣ ಮತ್ತು ವಿಲೋಮ ಗುಣಗಳನ್ನು ತೃಪ್ತಿಪಡಿಸುತ್ತದೆ. ಅಂದರೆ

$$\forall\ a, b \in H,\quad a * b \in H$$

$$\forall\ a \in H,\quad a^{-1} \in H$$

II $H \subset G$ ಮತ್ತು

(i) $\forall\ a, b \in H,\ a * b \in H$

(ii) $\forall\ a \in H,\ a^{-1} \in H$ ಎಂದಿರಲಿ.

ಈಗ, $H$ ಒಂದು ಉಪ ಸಂಕುಲ ಎಂದು ತೋರಿಸಬೇಕು.

(i) ಮತ್ತು (ii) ರಿಂದ ಆವೃತ ಗುಣ ಮತ್ತು ವಿಲೋಮ ಗುಣಗಳು $H$ನಲ್ಲಿ ನಿಜ ಎಂದು ತಿಳಿಯುತ್ತದೆ.

(i) ರಲ್ಲಿ $b$ ಯ ಬದಲಿಗೆ $a^{-1}$ ನ್ನು ಬರೆದಾಗ

$$a * a^{-1} \in H$$

ಅಥವಾ $e \in H$

ಅಂದರೆ ಏಕದವು $H$ನಲ್ಲಿ ಇದೆ ಎಂದು ತೋರಿಸಿದಂತಾಯಿತು. ಸಹವರ್ತನೀಯ ಗುಣವು $G$ ಯ ಎಲ್ಲಾ ಅಂಶಗಳಿಗೂ ಅನ್ವಯಿಸುತ್ತದೆ. $H \subset G$ ಆದುದರಿಂದ ಇದು $H$ನ ಎಲ್ಲಾ ಅಂಶಗಳಿಗೂ ಅನ್ವಯಿಸುತ್ತದೆ. ಆದುದರಿಂದ $H$ ನಲ್ಲಿ ಸಂಕುಲದ ಎಲ್ಲಾ ಗುಣಗಳು ತೃಪ್ತಿಗೊಂಡಿವೆ. ಆದುದರಿಂದ $H$ ಎಂಬುದು $G$ ಯ ಉಪ ಸಂಕುಲವಾಗಿದೆ.

ಪ್ರಮೇಯ 2 :

$G$ ಯ ಶೂನ್ಯವಲ್ಲದ ಉಪಗಣ $H$ ಒಂದು ಉಪಸಂಕುಲ ಆಗಿದ್ದರೆ ಮತ್ತು ಆಗಬೇಕಿದ್ದರೆ ಅದು $\forall\ a, b \in H,\ a * b^{-1} \in H$ ಎಂಬ ಗುಣವನ್ನು ಹೊಂದಿರಬೇಕು.

ಸಾಧನೆ:

I $H$ ಎಂಬುದು $G$ ಯ ಉಪಗಣವಾಗಿರಲಿ.

ನಾವು $\forall\ a, b \in H,\ a * b^{-1} \in H$ ಎಂದು ತೋರಿಸಬೇಕು.

$H \subset G$ ಆದುದರಿಂದ $G$ ಯ ಎಲ್ಲಾ ಗುಣಗಳು $H$ ನಲ್ಲಿ ಇವೆ.

ಆದುದರಿಂದ $b \in H \Rightarrow b^{-1} \in H$ (ವಿಲೋಮ ಗುಣ)

ಈಗ, $a \in H,\ b^{-1} \in H$

$\therefore\ a * b^{-1} \in H$ (ಆವೃತ ಗುಣ)

II $H \subset G$ ಮತ್ತು $\forall\ a, b \in H,\ a * b^{-1} \in H$ ಇರಲಿ.

ನಾವು $H$ ಒಂದು ಉಪಸಂಕುಲ ಎಂದು ತೋರಿಸಬೇಕು.

ಈಗ, $a * b^{-1} \in H\ \forall\ a, b \in H$ ಎಂದು ಗೊತ್ತಿದೆ.

ಇದರಲ್ಲಿ $b$ ಯ ಬದಲು $a$ ನ್ನು ಬರೆದಾಗ

$a * a^{-1} \in H \Rightarrow e \in H$

ಅಂದರೆ, ಏಕದವು ಅಸ್ತಿತ್ವದಲ್ಲಿದೆ.

$a * b^{-1} \in H$ ಇದರಲ್ಲಿ $a$ ಯ ಬದಲು $e$ ಬರೆದಾಗ

$e * b^{-1} \in H \therefore\ b^{-1} \in H$

ಅಂದರೆ, ವಿಲೋಮಗುಣ ತೃಪ್ತಿಗೊಂಡಿದೆ.

$a * b^{-1} \in H$ ಇದರಲ್ಲಿ $b$ ಯನ್ನು $b^{-1}$ ನಿಂದ ಬದಲಿಸಿದಾಗ

$a * (b^{-1})^{-1} \in H$

ಅಥವಾ $a * b \in H$

ಅಂದರೆ ಆವೃತ ಗುಣವು ತೃಪ್ತಿಗೊಂಡಿದೆ. $H \subset G$ ಆದುದರಿಂದ ಸಹವರ್ತನೀಯ ಗುಣವು $H$ ನಲ್ಲೂ ನಿಜವೆನಿಸಿದೆ. ಅಂದರೆ, $H$ ನಲ್ಲಿ $G$ ಯ ಎಲ್ಲಾ ಗುಣಗಳೂ ತೃಪ್ತಿಗೊಂಡಿವೆ. ಆದುದರಿಂದ $(H,*)$ ಎಂಬುದು $(G,*)$ ಯ ಉಪಸಂಕುಲ.

**ಉದಾಹರಣೆಗಳು**

1. $Z = \{..., -3, -2, -1, 0, 1, 2, 3....\}$

ಮತ್ತು $H = \{....-3m, -2m, -m, 0, m, 2m, 3m...\}$

($m$ ಯಾವುದೇ ಒಂದು ಪೂರ್ಣಾಂಕ) ಆಗಿದ್ದರೆ, $(H,+)$ ಎಂಬುದು $(Z,+)$ ನ ಉಪಸಂಕುಲ ಎಂದು ತೋರಿಸಿ.

ನಮಗೆ ಈಗಾಗಲೇ $(Z, +)$ ಒಂದು ಸಂಕುಲ ಎಂದು ತಿಳಿದಿದೆ.

ಈಗ, $H \subset G$ ಆಗಿರುವುದರಿಂದ ಮೇಲಿನ ಪ್ರಮೇಯದಿಂದ

$ab^{-1} \in H \ \forall \ a,b \in H$

ಆದರೆ $H$ ಎಂಬುದು $G$ ಯ ಉಪಸಂಕುಲವಾಗುವುದು.

$a = r\,m, \ b = s\,m$

ಎರಡು H ನ ಅಂಶಗಳಾಗಲಿ. ಇಲ್ಲಿ $r$ ಮತ್ತು s ಎಂಬುವು ಯಾವುದೇ ಎರಡು ಪೂರ್ಣಾಂಕಗಳು.

ಇಲ್ಲಿ, $b = sm$ ಆದರೆ $b^{-1} = -sm$

ಏಕೆಂದರೆ ಇಲ್ಲಿ ದ್ವಿಮಾನ ಕ್ರಿಯೆಯು ಸಂಕಲನ

$$\therefore ab^{-1} = r\,m - sm$$
$$= (r - s)m$$
$$= km$$

(ಕಾರಣ $r - s = k$ ಇನ್ನೊಂದು ಪೂರ್ಣಾಂಕ)

ಅಂದರೆ, $ab^{-1} = km \in H$

ಆದ್ದರಿಂದ, $(H, +)$ ಎಂಬುದು $(Z, +)$ ನ ಉಪಸಂಕುಲ.

2. $(G, \times)$ ಒಂದು ಸಂಕುಲ ಮತ್ತು $a \in G$

$H = \{......a^{-3}, a^{-2}, a^{-1}, a^0, a^1, a^2 .....\}$

ಎಂಬುದು $G$ ಯ ಒಂದು ಉಪಸಂಕುಲ ಎಂದು ತೋರಿಸಿ.

ಈಗ, $a \in G$ ಆದರೆ ಆವೃತ ಗುಣದ ಪ್ರಕಾರ $a$ ಯ ಎಲ್ಲಾ (ಪೂರ್ಣಾಂಕ) ಘಾತಗಳು $G$ ಯಲ್ಲಿರುತ್ತವೆ.

$\therefore H \subset G$

ಈಗ, $\forall A, B \in H$ ಗೆ $AB^{-1} \in H$

ಎಂದು ತೋರಿಸಿದರೆ $H$ ಒಂದು ಉಪಸಂಕುಲವಾಗುವುದು.

$A = a^r,\ B = a^s$ ಆಗಿರಲಿ.

$\therefore AB^{-1} = a^r (a^s)^{-1}$

$= a^r . a^{-s} = a^{r-s}$

$= a^k$ (ಇಲ್ಲಿ $r - s = k$ ಒಂದು ಪೂರ್ಣಾಂಕ)

ಅಂದರೆ, $AB^{-1} = a^k \in H$

ಆದ್ದರಿಂದ, $H$ ಎಂಬುದು $G$ ಯ ಉಪಸಂಕುಲ.

3. $H = \{0,2,4\}_{\oplus \text{ mod } 6}$ ಮತ್ತು $G = \{0,1,2,3,4,5\}_{\oplus \text{ mod } 6}$

ಆದರೆ $H$ ಎಂಬದು $G$ ಯ ಉಪಸಂಕುಲ ಎಂದು ತೋರಿಸಿ.

$H \subset G$ ಎಂದು ತಿಳಿದಿದೆ. ಈಗ

$\forall a,b \in H$ ಗೆ $ab^{-1} \in H$

ಎಂದು ತೋರಿಸಿದರೆ $H$ ಎಂಬುದು $G$ ಯ ಉಪಸಂಕುಲವಾಗುತ್ತದೆ.

ಕೊಟ್ಟಿರುವ ಉಪಗಣದಲ್ಲಿ, $\oplus$ mod 6 ಪರಿಕ್ರಿಯೆಯಲ್ಲಿ

$(0)^{-1} = 0$, $(2)^{-1} = 4$ ಮತ್ತು $(4)^{-1} = 2$ ಎಂದು ತಿಳಿದಿದೆ.

ಯಾವುದೇ ಎರಡು ಅಂಶಗಳಾದ $a, b \in H$ ತೆಗೆದುಕೊಂಡಾಗ

$a = 0, \quad b = 2$ ಆದಾಗ $ab^{-1} = 0+4 = 4 \in H$

$a = 0 \quad b = 4$ ಆದಾಗ $ab^{-1} = 0+2 = 2 \in H$

$a = 0 \quad b = 0$ " $ab^{-1} = 0+0 = 0 \in H$

$a = 2 \quad b = 0$ " $ab^{-1} = 2+0 = 2 \in H$

$a = 2 \quad b = 2$ " $ab^{-1} = 2+4 = 0 \in H$

$a = 4 \quad b = 0$ " $ab^{-1} = 4+0 = 4 \in H$

$a = 4 \quad b = 2$ " $ab^{-1} = 4+4 = 2 \in H$

$a = 4 \quad b = 4$ " $ab^{-1} = 4+2 = 0 \in H$

ಇಲ್ಲಿ, $a \oplus^{mod\,6} b^{-1}$ ಯನ್ನು $a \; b^{-1}$ ಎಂದು ಸೂಚಿಸಲಾಗಿದೆ.

$\therefore \; ab^{-1} \in H \quad \forall \; a, b \in H$

ಆದ್ದರಿಂದ, $H$ ಎಂಬುದು $G$ ಯ ಉಪಸಂಕುಲ

## 5.6 ಪರಿವರ್ತನೀಯ ಸಂಕುಲಗಳು

(i) $G$ ಸಂಕುಲದಲ್ಲಿ $(ab)^{-1} = a^{-1} b^{-1}$ ಆದಾಗ $G$ ಯು ಪರಿವರ್ತನೀಯ ಎಂದು ತೋರಿಸಿ.

ನಮಗೆ ಈಗಾಗಲೇ ತಿಳಿದಿರುವಂತೆ $(ab)^{-1} = b^{-1} a^{-1}$

$\therefore \; b^{-1} a^{-1} = a^{-1} b^{-1}$

$b^{-1} = x$ ಎಂದಿರಲಿ $a^{-1} = y$ ಎಂದಿರಲಿ.

ಆಗ, $xy = yx$

ಆದುದರಿಂದ $G$ ಯು ಪರಿವರ್ತನೀಯ.

(ii) $G$ ಸಂಕುಲದ ಪ್ರತಿ ಅಂಶವೂ ಅದರ ವಿಲೋಮವೇ ಆಗಿದ್ದರೆ $G$ ಯು ಪರಿವರ್ತನೀಯ ಎಂದು ತೋರಿಸಿ.

$a, b \in G$ ಆಗಿರಲಿ.

$\therefore a = a^{-1}$ ಮತ್ತು $b = b^{-1}$

ಏಕೆಂದರೆ, $G$ ಯಲ್ಲಿ ಪ್ರತಿ ಅಂಶವು ಅದರ ವಿಲೋಮವಾಗಿದೆ.

ಈಗ, $a, b \in G \Rightarrow ab \in G$

$\therefore ab = (ab)^{-1}$ ... (1)

ಆದರೆ $(ab)^{-1} = b^{-1}\ a^{-1}$ ಎಂದು ತಿಳಿದಿದೆ.

$(ab)^{-1} = ba$ ... (2)

ಈಗ, (1) ಮತ್ತು (2) ರಿಂದ

$ab = ba$

ಆದ್ದರಿಂದ $G$ ಸಂಕುಲವು ಪರಿವರ್ತನೀಯ

(iii) $G$ ಸಂಕುಲದಲ್ಲಿ ಸಮ ಸಂಖ್ಯೆಗಳಷ್ಟು ಅಂಶಗಳಿದ್ದರೆ, ಅದರಲ್ಲಿ $a^{-1} = a$ ಆಗಿರುವಂತೆ ಕನಿಷ್ಠ ಒಂದು ಅಂಶ $a \neq e$ ಇರುತ್ತದೆ.

$G$ ಯಲ್ಲಿ ಸಮಸಂಖ್ಯೆಗಳಷ್ಟು ಅಂಶವಿದೆ ಎಂದು ತಿಳಿದಿದೆ. ಇದು $2n$ ಎಂದಿರಲಿ. ಇದರಲ್ಲಿ $n$ ಅಂಶಗಳು ಮತ್ತು ಉಳಿದ $n$ ಇವುಗಳ ವಿಲೋಮ ಅಂಶಗಳಾಗಿರಲಿ. ಈ $n$ ಅಂಶಗಳಲ್ಲಿ, $e^{-1} = e$ ಆದುದರಿಂದ ಸಮೂಹದಲ್ಲಿ $(2n-1)$ ಅಂಶಗಳಿವೆ ಎಂದಾಯಿತು. ಆಗ $G$ ಯಲ್ಲಿನ ಅಂಶಗಳ ಸಂಖ್ಯೆ ಬೆಸವಾಯಿತು. ಆದುದರಿಂದ $G$ ಯಲ್ಲಿ ಕನಿಷ್ಠ ಇನ್ನೊಂದು ಅಂಶ $a \neq e$ ಇರಬೇಕು. ಅದು $a^{-1} = a$ ಎಂದಾಗಬೇಕು. ಆಗ $G$ ಯಲ್ಲಿ ಅಂಶಗಳು ಸಮಸಂಖ್ಯೆಯಷ್ಟಾಗುತ್ತವೆ.

(iv) $(G, *)$ ಸಂಕುಲದಲ್ಲಿ $a*a = e, b*b = e, c*c = e$ ....

ಅಥವಾ $a^2=e, b^2=e, c^2=e$ ......

ಆದರೆ $G$ ಯು ಪರಿವರ್ತನೀಯ ಎಂದು ತೋರಿಸಿ.

ಈಗ, $a \in G, b \in G$ , $\therefore$ $ab \in G$

$\therefore\ (ab)^2 = e$

ಅಥವಾ $(ab)(ab) = e$

ಅಥವಾ $a(ba)b = e$

ಅಥವಾ $aa(ba)bb = a\,e\,b$

$a^2(ba)b^2 = ab$

$e\,(ba)\,e = ab$ ( ಕಾರಣ $a^2 = e, b^2 = e$)

ಅಥವಾ $ba = ab$

ಆದ್ದರಿಂದ, $G$ ಯು ಪರಿವರ್ತನೀಯ ಸಂಕುಲ.

(v) ಸಂಕುಲ $G$ ಯಲ್ಲಿ $(ab)^2 = a^2b^2\ \forall\ a, b \in G$ ಆದರೆ $G$ ಯು ಪರಿವರ್ತನೀಯ ಎಂದು ತೋರಿಸಿ.

ಈಗ, $(ab)^2 = a^2b^2$

ಅಥವಾ $(ab)(ab) = (aa)\ (bb)$

$a(ba)b = a(ab)\ b$ (ಸಹವರ್ತನೀಯ ಗುಣ)

ಅಥವಾ $ba = ab$ (ನಿರಸನ ನಿಯಮಗಳು)

ಆದ್ದರಿಂದ, $G$ ಯು ಪರಿವರ್ತನೀಯ.

(vi) $G$ ಸಂಕುಲವು ಪರಿವರ್ತನೀಯುವಾದರೆ $(ab)^2 = a^2\,b^2\ \forall\ a, b \in G$ ಎಂದು ತೋರಿಸಿ.

ಈಗ, $(ab)^2 = (ab)(ab)$

$= a(ba)b$

$= a\,(ab)\,b$ ⋅(ಕಾರಣ $G$ ಯು ಪರಿವರ್ತನೀಯ: $ab=ba$)

$= (aa)\,(bb)$ (ಸಹವರ್ತನೀಯ ಗುಣ)

ಅಂದರೆ, $(ab)^2 = a^2b^2$

ಸೂಚನೆ: ಮೇಲಿನ ಫಲಿತಾಂಶಗಳಲ್ಲಿ $a*b$ ಅನ್ನು $ab$ ಎಂದು ಅನುಕೂಲಕ್ಕಾಗಿ ಸೂಚಿಸಲಾಗಿದೆ.

(vii) $(G,*)$ ಸಮೂಹದಲ್ಲಿ 2 ಅಥವಾ 3 ಅಂಶಗಳಿದ್ದರೆ ಅದು ಪರಿವರ್ತನೀಯ ಸಂಕುಲ ಎಂದು ತೋರಿಸಿ.

(1) $G$ ಯಲ್ಲಿ ಎರಡು ಅಂಶಗಳಿದ್ದರೆ, ಒಂದು ಅಂಶ ಏಕದವಾಗಿರಬೇಕು .

$\therefore$ $G=\{a,e\}$ ಆಗಿರಲಿ. ಕೋಷ್ಟಕವನ್ನು ಪರಿಶೀಲಿಸಿ.

| * | a | e |
|---|---|---|
| a | a*a | a |
| e | a | e |

$a*a = a$ ಅಥವಾ $e$ ಆಗಿರಬೇಕು.

$a*a = a$ ಆದರೆ $a=e$, ಇದು ಸಾಧ್ಯವಿಲ್ಲ.

$\therefore$ $a*a = e$ ಆಗಿರಬೇಕು.

ಈಗ, ಕೋಷ್ಟಕವು ಈ ಮುಂದಿನ ಸ್ವರೂಪವನ್ನು ತಾಳುತ್ತದೆ:

| * | a | e |
|---|---|---|
| a | e | a |
| e | a | e |

ಕೋಷ್ಟಕದಲ್ಲಿ ಪ್ರಧಾನಕರ್ಣದ ಎರಡು ಪಾರ್ಶ್ವಗಳಲ್ಲಿ ಒಂದೇ ರೀತಿಯ ಅಂಶಗಳಿವೆ.

ಇದರಿಂದ $G$ ಯು ಪರಿವರ್ತನೀಯ ಎಂದು ತಿಳಿಯುತ್ತದೆ.

(2) $G$ ಯಲ್ಲಿ 3 ಅಂಶಗಳಿದ್ದರೆ, ಒಂದು ಅಂಶ $e$ ಆಗಿರುತ್ತದೆ.

$\therefore$ $G=\{e, a, b\}$ ಆಗಿರಲಿ. ಕೋಷ್ಟಕವನ್ನು ಪರಿಶೀಲಿಸಿ.

| * | e | a | b |
|---|---|---|---|
| e | e | a | b |
| a | a | a*a | a*b |
| b | b | b*a | b*a |

ಈಗ $a*b \neq a$ ಏಕೆಂದರೆ $a*b = a$ ಆದರೆ ನಿರಸನ ನಿಯಮದಿಂದ $b=e$ ಆಗುತ್ತದೆ;

ಇದೇ ರೀತಿ, $a*b \neq b$

ಇದು ಸಾಧ್ಯವಿಲ್ಲ.

$\therefore$ $a*b = e$

ಹಾಗೆಯೇ, $b*a = e$ ಆಗುತ್ತದೆ

$\therefore\ a^{-1} = b$ ಮತ್ತು $b^{-1} = a$

ಈಗ $a*a \neq e$

ಏಕೆಂದರೆ, $a * a = e$ ಆದರೆ $a^{-1}=a$ ಆಗುತ್ತದೆ; ಇದು ಸಾಧ್ಯವಿಲ್ಲ.

ಏಕೆಂದರೆ, $a * a = a$ ಆದರೆ $a=e$; ಇದು ಸಾಧ್ಯವಿಲ್ಲ.

ಹಾಗೆಯೇ, $a * a \neq a$

$\therefore\ a * a = b$

ಇದೇ ರೀತಿಯಾಗಿ $b*b = a$ ಆಗುತ್ತದೆ.

ಈಗ ಕೋಷ್ಟಕವನ್ನು ಈ ರೀತಿ ಬರೆಯಬಹುದು:

| * | e | a | b |
|---|---|---|---|
| e | e | a | b |
| a | a | b | e |
| b | b | e | a |

ಇದರ ಪ್ರಧಾನ ಕರ್ಣದ ಮೇಲೆ ಮತ್ತು ಕೆಳಗೆ ಸಮಾನವಾದ ಒಂದೇ ಅಂಶಗಳಿರುವ ಕಾರಣ ಸಂಕುಲವು ಪರಿವರ್ತನೀಯ.

## ಅಭ್ಯಾಸ - 5

1. ಈ ಕೆಳಗಿನವುಗಳಲ್ಲಿ ಯಾವುವು ದ್ವಿಮಾನ ಕ್ರಿಯೆ ಎಂದು ತಿಳಿಸಿ.

(i) $N$ನಲ್ಲಿ $a*b = a+5b$

(ii) $Z$ನಲ್ಲಿ $a*b = a+b+1$

(iii) $N$ ನಲ್ಲಿ $a*b = \dfrac{a+3b}{a-5b}$

(iv) $R$ನಲ್ಲಿ $a*b = \dfrac{ab}{5}$

(v) $R$ನಲ್ಲಿ $a*b = \sqrt{a^2+b^2}$

(vi) $R$ನಲ್ಲಿ $a*b = \sqrt{a^2-b^2}$

2. (i) $R$ನಲ್ಲಿ $a*b=\dfrac{ab}{7}$ ಎಂದು ಕೊಟ್ಟಾಗ ಈ ಕ್ರಿಯೆಯು ಸಹವರ್ತನೀಯ ಮತ್ತು ಪರಿವರ್ತನೀಯ ಎಂದು ತೋರಿಸಿ.

(ii) $R$ ನಲ್ಲಿ $a*b=3a-5b+7ab$ ಎಂದು ಕೊಟ್ಟಾಗ ಈ ಕ್ರಿಯೆಯು ಸಹವರ್ತನೀಯ ಮತ್ತು ಪರಿವರ್ತನೀಯವೇ ಎಂದು ಪರೀಕ್ಷಿಸಿರಿ.

(iii) $Z$ ನಲ್ಲಿ $a*b = a+b+5$ ಎಂದು ಕೊಟ್ಟಾಗ ಇದರ ಏಕದ ಮತ್ತು $a$ ಯ ವಿಲೋಮವನ್ನು ಕಂಡುಹಿಡಿಯಿರಿ.

(iv) $Z$ ನಲ್ಲಿ $a*b = a+b-1$ ಎಂದು ಕೊಟ್ಟಾಗ ಇದರ ಏಕದವನ್ನು ಮತ್ತು $4^{-1}$ನ್ನು ಕಂಡುಹಿಡಿಯಿರಿ.

(v) ಕ್ರಮಯೋಜನೆ ಸಮೂಹ $S_3$ ಯಲ್ಲಿ $S_1 = \begin{pmatrix}1 & 2 & 3\\ 3 & 1 & 2\end{pmatrix}$ ಆದರೆ $S_1^{-1}$ನ್ನು ಕಂಡುಹಿಡಿಯಿರಿ.

(vi) $f = \begin{pmatrix}1 & 2 & 3\\ 3 & 1 & 2\end{pmatrix}$, $g = \begin{pmatrix}1 & 2 & 3\\ 1 & 3 & 2\end{pmatrix}$ ಆದರೆ $f.g$ ನ್ನು ಕಂಡುಹಿಡಿಯಿರಿ

(vii) $\alpha = \begin{pmatrix}1 & 2 & 3\\ 3 & 2 & 1\end{pmatrix}$, $\beta = \begin{pmatrix}1 & 2 & 3\\ 2 & 3 & 1\end{pmatrix}$ ಆದರೆ $\alpha . \beta$ ನ್ನು ಕಂಡುಹಿಡಿಯಿರಿ

(viii) ಪೂರ್ಣಾಂಕ ಗಣ $Z$ನ ಮೇಲೆ ಯುಗಳ ಪರಿಕ್ರಿಯೆ $*$ನ್ನು $a*b=a+b+2$ ಎಂದು ವ್ಯಾಖ್ಯಿಸಿದರೆ ಅದರ ಏಕದವನ್ನು ಕಂಡುಹಿಡಿಯಿರಿ.

(ix) ಗುಣಾಕಾರ (mod 10)ರ ಸಂಕುಲ $G = \{1,3,7,9\}$ನಲ್ಲಿ 3ರ ವಿಲೋಮವನ್ನು ಕಂಡುಹಿಡಿಯಿರಿ.

(x) $G=\{1, -1, i, -i\}$ ಸಂಕುಲದ ಅನುಚಿತ ಉಪಸಂಕುಲಗಳ ಸಂಖ್ಯೆ ಎಷ್ಟು?

(xi) $G=\{1,5,7,11\}, \times^{mod\ 12}$ ಸಂಕುಲದಲ್ಲಿ $5^{-1}+7^{-1}+11^{-1}$ನ ಬೆಲೆಯನ್ನು ಕಂಡುಹಿಡಿಯಿರಿ.

(xii) ಶೂನ್ಯವಲ್ಲದ ಭಾಗಲಬ್ಧ ಸಂಖ್ಯೆಗಳ ಗಣದಲ್ಲಿ '*' ಪರಿಕ್ರಿಯೆ $a*b=\frac{ab}{2}$ ಆದಾಗ ಅದರ ಏಕದ ಸಂಖ್ಯೆಯನ್ನು ಕಂಡುಹಿಡಿಯಿರಿ.

(xiii) ಶೂನ್ಯವಲ್ಲದ ಭಾಗಲಬ್ಧ ಸಂಖ್ಯೆಗಳ ಗಣದಲ್ಲಿ $a*b=\frac{ab}{7}$ ಆದಾಗ ಪರಿಕ್ರಿಯೆಯು ಸಹವರ್ತನೀಯ ನಿಯಮವನ್ನು ಪಾಲಿಸುವುದೆಂದು ತೋರಿಸಿ.

(xiv) $Q$ ಗಣದ ಮೇಲೆ ಯುಗಳ ಪರಿಕ್ರಿಯೆ * ಅನ್ನು $a*b=\frac{ab}{4}$ ಎಂದು ವ್ಯಾಖ್ಯಿಸಿದರೆ ಏಕದವನ್ನು ಮತ್ತು 8ರ ಅನುಲೋಮವನ್ನು ಕಂಡು ಹಿಡಿಯಿರಿ.

(xv) $(G, *)$ ಸಂಕುಲದಲ್ಲಿ $a,b,c,d$ ಅಂಶಗಳಾಗಿದ್ದರೆ, $(a*b^{-1}*c^{-1}*d)^{-1}=?$

(xvi) $G$ ಯು ಅಬಿಲಿಯನ್ ಸಂಕುಲವಾದರೆ $(a^{-1}b^{-1}c)^{-1}=?$

(xvii) $G=\{1,3,4,5,9\} \times_{mod\ 11}$ ಸಂಕುಲದಲ್ಲಿ 5 ರ ವಿಲೋಮವೇನು?

(xviii) ಶೂನ್ಯರಹಿತ ವಾಸ್ತವ ಸಂಖ್ಯೆಗಳ ಸಂಕುಲದಲ್ಲಿ $a*b=\frac{ab}{3}$ ಆಗಿದ್ದು $2*x*5=10$ ಆದರೆ $x$ ನ ಬೆಲೆಯನ್ನು ಕಂಡುಹಿಡಿಯಿರಿ.

(xix) $Z$ ಗಣದ ಮೇಲೆ ಯುಗಳ ಪರಿಕ್ರಿಯೆ * ಅನ್ನು $a*b=a+b+5$ ಎಂದು ವ್ಯಾಖ್ಯಿಸಿದರೆ ಏಕದವೇನು?

(xx) $\{Z_6, +mod\ 6\}$ ಗಣದಲ್ಲಿ $2+4^{-1}+3^{-1}$ ನ ಬೆಲೆಯನ್ನು ಕಂಡುಹಿಡಿಯಿರಿ.

3. $G=\{-3,-2,-1,0,1,2,3\}$ ಆದಾಗ ಈ ಗಣವು ಸಂಕಲನ ಕ್ರಿಯೆಯಲ್ಲಿ ಸಂಕುಲ ಎಂದು ಪರೀಕ್ಷಿಸಿ.

4. $G$ಯು ಎಲ್ಲಾ ಸಮಸಂಖ್ಯೆಗಳ ಗಣವಾಗಿದ್ದರೆ ಅದು ಸಂಕಲನ ಕ್ರಿಯೆಯಲ್ಲಿ ಸಂಕುಲವೇ ಎಂದು ಪರೀಕ್ಷಿಸಿರಿ.

5. $G$ಯು ಎಲ್ಲಾ ಬೆಸಸಂಖ್ಯೆಗಳ ಗಣವಾಗಿದ್ದರೆ ಅದು ಸಂಕಲನ ಕ್ರಿಯೆಯಲ್ಲಿ ಸಂಕುಲವೇ ಎಂದು ಪರೀಕ್ಷಿಸಿರಿ.

6. $Q-\{0\}$ ಗಣವು ಗುಣಾಕಾರ ಕ್ರಿಯೆಯಲ್ಲಿ ಸಂಕುಲವೇ ಎಂದು ಪರೀಕ್ಷಿಸಿರಿ.

7. $G = \{....2^{-4}, 2^{-3}, 2^{-2}, 2^{-1}, 2^{0}, 2, 2^{2}...\}$ ಗಣವು ಗುಣಾಕಾರ ದ್ವಿಮಾನ ಕ್ರಿಯೆಯಲ್ಲಿ ಒಂದು ಅಪರಿಮಿತ ಪರಿವರ್ತನೀಯ ಸಂಕುಲ ಎಂದು ಸಾಧಿಸಿರಿ.

8. $Z = \{a+ib \mid a,b \in R\}$ ಈ ಗಣವು ಸಂಕಲನ ಕ್ರಿಯೆಯಲ್ಲಿ ಅಪರಿಮಿತ ಪರಿವರ್ತನೀಯ ಸಂಕುಲ ಎಂದು ಸಾಧಿಸಿ.

9. $G = \{a+b\sqrt{2}, a,b \in Q\}$ ಗಣವು ಗುಣಾಕಾರ ಕ್ರಿಯೆಯಲ್ಲಿ ಒಂದು ಸಂಕುಲ ಎಂದು ಸಾಧಿಸಿ.

10. ಎಲ್ಲಾ $m \times n$ ಮಾತೃಕೆಗಳು ಗಣವು (ಮಾತೃಕೆಗಳ ಅಂಶಗಳು, ಪೂರ್ಣಾಂಕ ಅಥವಾ ವಾಸ್ತವ ಸಂಖ್ಯೆಗಳು ಆದಲ್ಲಿ) ಮಾತೃಕೆಗಳ ಸಂಕಲನ ಕ್ರಿಯೆಯಲ್ಲಿ ಒಂದು ಪರಿವರ್ತನೀಯ ಸಂಕುಲ ಎಂದು ತೋರಿಸಿ.

11. $G = \{(\cos\theta + i\sin\theta) \mid \theta \in R\}$ ಗುಣಾಕಾರ ಕ್ರಿಯೆಯಲ್ಲಿ ಒಂದು ಸಂಕುಲ ಎಂದು ತೋರಿಸಿ.

12. $Q-\{1\}$ಗಣದಲ್ಲಿ $a*b = a+b+ab$ ಎಂದು ಕೊಟ್ಟಾಗ ಇದು ಒಂದು ಪರಿವರ್ತನೀಯ ಸಂಕುಲ ಎಂದು ತೋರಿಸಿ.

13. $$G = \left\{ \begin{bmatrix} 1 & 0 \\ 0 & 1 \end{bmatrix}, \begin{bmatrix} -1 & 0 \\ 0 & 1 \end{bmatrix}, \begin{bmatrix} 1 & 0 \\ 0 & -1 \end{bmatrix}, \begin{bmatrix} -1 & 0 \\ 0 & -1 \end{bmatrix} \right\}$$

ಗಣವು ಮಾತೃಕೆಯ ಗುಣಾಕಾರದಲ್ಲಿ ಪರಿವರ್ತನೀಯ ಸಂಕುಲ ಎಂದು ಸಾಧಿಸಿ.

14. ಈ ಕೆಳಗಿನವುಗಳು ಸಂಕುಲವೇ ಎಂದು ಕಂಡುಹಿಡಿಯಿರಿ.

(i) $G = \{0, 1, 2, 3, 4, 5\}$, $\oplus$ mod 6

(ii) $G = \{1, 2, 3, 4, 5\}$, $\oplus$ mod 6

(iii) $G = \{1, 2, 3, 4\}$, $\otimes$ mod 5

(iv) $G = \{0, 3, 6, 9\}$, $\oplus$ mod 12

(v) $G = \{1, 5, 7, 11\}$, $\otimes$ mod 12

(vi) $G = \{1, 2, 3\}$, $\otimes$ mod 4

(vii) $G = \{0\}$, +

(viii) $G = \{1\}$, $\times$

15. $(G, *)$ ಸಂಕುಲದಲ್ಲಿ $a^2 = a$ ಆದರೆ $a = e$ ಎಂದು ತೋರಿಸಿ.

16. $(G, +)$ ಸಮೂಹದಲ್ಲಿ $-(-a) = a \ \forall\, a \in G$ ಎಂದು ತೋರಿಸಿ.

17. $G$ ಯು ಎಲ್ಲಾ ಪೂರ್ಣಾಂಕಗಳ ಗಣವಾಗಿದ್ದು, $H$ ಧನಾತ್ಮಕ ಪೂರ್ಣಾಂಕಗಳ ಗಣವಾಗಿದ್ದರೆ, $H$ ಎಂಬುದು $G$ ಯ ಉಪಸಂಕುಲವೇ ಎಂದು ಪರೀಕ್ಷಿಸಿ. ಇಲ್ಲಿ ಸಂಕಲನವು ದ್ವಿಮಾನಕ್ರಿಯೆ.

18. $G = \{\ldots.\ 2^{-3}, 2^{-2}, 2^{-1}, 2^{0}, 2^{1}, 2^{2} \ldots..\}_{\times}$
$H = \{1, 2, 2^2, 2^3 \ldots\}_{\times}$ ಆದರೆ $H$ ಎಂಬುದು $G$ ಯ ಉಪಸಂಕುಲವೇ ಎಂದು ಪರೀಕ್ಷಿಸಿ.

19. $G = \{1, -1, i, -i\}_{\times}$ ಸಂಕುಲದ ಉಪಸಂಕುಲಗಳನ್ನು ಬರೆಯಿರಿ.

20. $G = \{0, 1, 2, 3, 4, 5\}_{\oplus \text{mod} 6}$ ಸಂಕುಲದ ಉಪ ಸಂಕುಲಗಳು ಈ ಕೆಳಗಿನವುಗಳೇ ಎಂದು ಪರೀಕ್ಷಿಸಿರಿ:

(i) $H_1 = \{0, 3\}$ (ii) $H_2 = \{0, 2, 5\}$

21. $G = \{3^n | n$ ಪೂರ್ಣಾಂಕ$\}$ ಗಣವು ಗುಣಾಕಾರದಲ್ಲಿ ಪರಿವರ್ತನೀಯ (ಅಬಿಲಿಯನ್) ಸಂಕುಲ ಎಂದು ಸಾಧಿಸಿ.

# ಅಧ್ಯಾಯ - 6

# ವೃತ್ತಗಳು

## 6.1.1 ವಿವರಣೆ:

ದತ್ತಬಿಂದುವೊಂದರಿಂದ ನಿರ್ದಿಷ್ಟ ದೂರದಲ್ಲಿರುವ ಬಿಂದುವಿನ ಪಥವು ವೃತ್ತವೆನಿಸುವುದು.

## 6.1.2 ವೃತ್ತದ ಸಮೀಕರಣ

(i) **ಮೂಲಬಿಂದು ಕೇಂದ್ರ:**



ಚಿತ್ರ 6.1

$O(0,0)$ ಮೂಲ ಬಿಂದುವನ್ನು ಕೇಂದ್ರವಾಗಿಯೂ, $r$ ತ್ರಿಜ್ಯವಾಗಿಯೂ ಇರುವ ವೃತ್ತವನ್ನು ಪರಿಗಣಿಸೋಣ. $P(x, y)$ ವೃತ್ತದ ಮೇಲಿರುವ ಯಾವುದಾದರೂ ಒಂದು ಬಿಂದು ಆಗಿರಲಿ (ಚಿತ್ರ 6.1).

$P$ ಬಿಂದುವಿನ ಒಂದು ಪಥದ ನಿಬಂಧನೆ $OP = r$ ಎಂದಾಗುತ್ತದೆ.

ಅಂದರೆ $OP^2 = r^2$

ಅಥವಾ $\boxed{x^2+y^2 = r^2}$

ಇದು, ಮೂಲಬಿಂದು ಕೇಂದ್ರವಾದ ವೃತ್ತದ ಸಮೀಕರಣ.

(ii) **$C(h,k)$ ಕೇಂದ್ರವಾಗಿಯೂ, $r$ ತ್ರಿಜ್ಯವಾಗಿಯೂ ಇರುವ ವೃತ್ತದ ಸಮೀಕರಣ**

$C(h,k)$ ಕೇಂದ್ರವಾಗಿಯೂ, $r$ ತ್ರಿಜ್ಯವಾಗಿಯೂ ಇರುವ ವೃತ್ತವನ್ನು ಪರಿಗಣಿಸೋಣ (ಚಿತ್ರ 6.2).

$P(x,y)$ ಎಂಬುದು ವೃತ್ತದ ಮೇಲಿರುವ ಯಾವುದೇ ಬಿಂದುವಾಗಿರಲಿ.

ಬಿಂದು ಪಥದ ನಿಬಂಧನೆ:

$\cdot\ CP = r$

ಅಥವಾ $CP^2 = r^2$

ಎಂದಾಗುತ್ತದೆ. ಅಂದರೆ

$$\boxed{(x-h)^2 + (y-k)^2 = r^2}$$

ಇದು ವೃತ್ತದ ಸಮೀಕರಣ.




ಚಿತ್ರ 6.2

### 6.1.3 $(x_1,y_1)$ ಮತ್ತು $(x_2,y_2)$ ಗಳು ವ್ಯಾಸವೊಂದರ ತುದಿಗಳಾಗಿ ಉಳ್ಳ ವೃತ್ತದ ಸಮೀಕರಣ

*AB* ವ್ಯಾಸದ ತುದಿಗಳು $(x_1, y_1)$ ಮತ್ತು $(x_2,y_2)$ಆಗಿರಲಿ. $P(x,y)$ ಬಿಂದುವು ವೃತ್ತದ ಮೇಲಿರುವ ಯಾವುದೇ ಬಿಂದುವಾಗಿರಲಿ (ಚಿತ್ರ 6.3) .




ಚಿತ್ರ 6.3

ಚಿತ್ರದ ಆಧಾರದ ಮೇರೆಗೆ

$APB = 90^o$

(ಅರ್ಧವೃತ್ತದಲ್ಲಿನ ಕೋನ)

ಆದ್ದರಿಂದ

$(AP$ ಯ ಓಟ$) \times (PB$ ಯ ಓಟ$) = -1$

ಅಥವಾ $$\left(\frac{y-y_1}{x-x_1}\right)\left(\frac{y-y_2}{x-x_2}\right) = -1$$

ಅಥವಾ $$\boxed{(x-x_1)(x-x_2) + (y-y_1)(y-y_2) = 0}$$

ಇದು ವೃತ್ತದ ಸಮೀಕರಣ.

## 6.1.4. ವೃತ್ತದ ಸಾಮಾನ್ಯ ಸಮೀಕರಣ

$$x^2 + y^2 + 2gx + 2fy + c = 0 \qquad (1)$$

ಎಂಬ ಎರಡನೇ ದರ್ಜೆಯ ಸಮೀಕರಣವನ್ನು ಪರಿಗಣಿಸಿ.

ಸಮೀಕರಣ (1) ನ್ನು

$$(x^2 + 2gx)+(y^2 + 2fy) = -c$$

ಅಥವಾ $(x^2 + 2gx + g^2) + (y^2 + 2fy + f^2) = -c + g^2 + f^2$

ಅಥವಾ $(x+g)^2+(y+f)^2 = (g^2+f^2-c)$

ಎಂದು ಬರೆಯಬಹುದು. ಇದನ್ನು

$$(x + g)^2 + (y + f)^2 = (\sqrt{g^2 + f^2-c})^2$$

ಎಂದು ಪರಿಗಣಿಸಲಾಗುವುದು.

ಈ ಸಮೀಕರಣದಲ್ಲಿ $(-g, -f)$ ಎಂಬುದು ಕೇಂದ್ರಬಿಂದುವನ್ನು ಮತ್ತು $\sqrt{g^2+g^2-c}$ ಎಂಬುದು ತ್ರಿಜ್ಯವನ್ನು ಪ್ರತಿನಿಧಿಸುತ್ತವೆ.

### ವೃತ್ತದ ಸಾಮಾನ್ಯ ಸಮೀಕರಣದ ಲಕ್ಷಣಗಳು

1. $x^2+y^2+2gx+2fy+c=0$ ಎಂಬುದು $x$ ಮತ್ತು $y$ ನಲ್ಲಿರುವ ಎರಡನೇ ಘಾತದ ಸಾಮಾನ್ಯ ಸಮೀಕರಣ. ಇದರಲ್ಲಿ $x^2$ ಮತ್ತು $y^2$ ನ ಸಹಗುಣಕಗಳು ಐಕ್ಯಧಾತುವಾಗಿರುವುವು.

2. ಸಾಮಾನ್ಯ ಸಮೀಕರಣದಲ್ಲಿ $g=0$ ಆದಾಗ $x^2+y^2+2fy+c=0$ ಸಮೀಕರಣವು $y-$ ಅಕ್ಷದ ಮೇಲೆ $(0, -f)$ ಬಿಂದುವನ್ನು ಕೇಂದ್ರಬಿಂದುವಾಗಿವುಳ್ಳ ವೃತ್ತವನ್ನು ಪ್ರತಿನಿಧಿಸುತ್ತದೆ.

3. ಸಾಮಾನ್ಯ ಸಮೀಕರಣದಲ್ಲಿ $f=0$ ಆದಾಗ $x^2+y^2+2gx+c=0$ ಸಮೀಕರಣವು $x-$ಅಕ್ಷದ ಮೇಲಿರುವ $(-g, 0)$ ಬಿಂದುವನ್ನು ಕೇಂದ್ರ ಬಿಂದುವಾಗಿವುಳ್ಳ ವೃತ್ತವನ್ನು ಪ್ರತಿನಿಧಿಸುತ್ತದೆ.

4. ಅದೇ ರೀತಿ $c=0$ ಆದಾಗ $x^2 + y^2 + 2gx + 2fy = 0$ ಸಮೀಕರಣವು ಮೂಲ ಬಿಂದುವಿನಿಂದ ಹಾದು ಹೋಗುವ ವೃತ್ತವನ್ನು ಪ್ರತಿನಿಧಿಸುತ್ತದೆ.

5. $g^2 + f^2 - c$ ಧನಾತ್ಮಕವಾಗಿದ್ದಲ್ಲಿ ವೃತ್ತವನ್ನು ನೈಜವೃತ್ತವೆಂದೂ, ಋಣಾತ್ಮಕವಾಗಿದ್ದಲ್ಲಿ ಊಹ್ಯವೃತ್ತವೆಂದೂ, ಶೂನ್ಯವಾಗಿದ್ದಲ್ಲಿ ಬಿಂದುವೃತ್ತವೆಂದೂ ಪರಿಗಣಿಸಲಾಗುವುದು.

6. ಸೂತ್ರಗಳನ್ನು ಬಳಸುವಾಗ ಸಮೀಕರಣದಲ್ಲಿ $x^2$ ಮತ್ತು $y^2$ ಪದಗಳ ಸಹಗುಣಕಗಳನ್ನು 1 (ಐಕ್ಯಧಾತು) ಆಗಿಸಿಕೊಳ್ಳಬೇಕು.

## ಉದಾಹರಣೆಗಳು

1. (2,3) ಬಿಂದುವನ್ನು ಕೇಂದ್ರವಾಗಿಯೂ, 6 ಮಾನಗಳಷ್ಟು ತ್ರಿಜ್ಯವುಳ್ಳ ವೃತ್ತದ ಸಮೀಕರಣವನ್ನು ಕಂಡುಹಿಡಿಯಿರಿ.

ವೃತ್ತದ ಸಮೀಕರಣವು

$$(x-2)^2 + (y-3)^2 = (6)^2$$

ಅಥವಾ $x^2+y^2-4x-6y-23 = 0$

2. $2x^2 + 2y^2 + 5x + 3y-2 = 0$ ವೃತ್ತದ ಕೇಂದ್ರಬಿಂದು ಮತ್ತು ತ್ರಿಜ್ಯಗಳನ್ನು ಕಂಡುಹಿಡಿಯಿರಿ.

ಸಮೀಕರಣವನ್ನು 2 ರಿಂದ ಭಾಗಿಸಿದಾಗ

$$x^2 + y^2 + \frac{5x}{2} + \frac{3y}{2} - 1 = 0$$

ಎಂದಾಗುತ್ತದೆ. ಆಗ ವೃತ್ತದ ಕೇಂದ್ರಬಿಂದು

$$(-g,-f) \equiv \left(\frac{-5}{4}, \frac{-3}{4}\right)$$

ತ್ರಿಜ್ಯ $= \sqrt{g^2+f^2-c} = \left[\frac{25}{16}+\frac{9}{16}+1\right]^{1/2} = \frac{5\sqrt{2}}{4}$

3. (4,2) ಮತ್ತು (–3,–5) ಬಿಂದುಗಳನ್ನು ವ್ಯಾಸದ ತುದಿಗಳಾಗಿವುಳ್ಳ ವೃತ್ತದ ಸಮೀಕರಣವನ್ನು ಕಂಡುಹಿಡಿಯಿರಿ.

ವೃತ್ತದ ಸಮೀಕರಣವು

$$(x-4)(x+3)+(y-2)(y+5)=0$$

ಅಥವಾ $x^2+y^2-x+3y-22=0$.

4. (4,–1) ಬಿಂದುವನ್ನು ಕೇಂದ್ರವಾಗಿವುಳ್ಳ ಮತ್ತು $x$–ಅಕ್ಷವನ್ನು ಸ್ಪರ್ಶಿಸುವ ವೃತ್ತದ ಸಮೀಕರಣವನ್ನು ಕಂಡುಹಿಡಿಯಿರಿ.

ಕೇಂದ್ರವು $(-g, -f)$ ಆಗಿರುವುದರಿಂದ

$x$ – ಅಕ್ಷವನ್ನು ಸ್ಪರ್ಶಿಸುವ ವೃತ್ತದ ತ್ರಿಜ್ಯವು $|f|$ ಆಗಿರುತ್ತದೆ. ಆದ್ದರಿಂದ $r=1$ (ಚಿತ್ರ 6.4).




ಆಗ ವೃತ್ತದ ಸಮೀಕರಣವು

$$(x-4)^2+(y+1)^2=(1)^2$$

ಅಥವಾ $x^2+y^2-8x+2y+16=0$

ಚಿತ್ರ 6.4

5. (–5,2) ಬಿಂದುವಿನಲ್ಲಿ ಕೇಂದ್ರವುಳ್ಳ, $y$ – ಅಕ್ಷವನ್ನು ಸ್ಪರ್ಶಿಸುವ ವೃತ್ತದ ಸಮೀಕರಣವನ್ನು ಕಂಡುಹಿಡಿಯಿರಿ.

ವೃತ್ತದ ಕೇಂದ್ರವು $(-g, -f)$ ಆಗಿರುವುದರಿಂದ

$y$–ಅಕ್ಷವನ್ನು ಸ್ಪರ್ಶಿಸುವ ವೃತ್ತದ ತ್ರಿಜ್ಯವು $|g|$ ಆಗಿರುತ್ತದೆ (ಚಿತ್ರ 6.5).

ಆದ್ದರಿಂದ $r=1$

ಆಗ ವೃತ್ತದ ಸಮೀಕರಣವು

$(x+5)^2 + (y-2)^2 = (5)^2$

$x^2 + y^2 + 10x - 4y + 4=0$




ಚಿತ್ರ 6.5

6. $(2,-3)$ ಬಿಂದುವನ್ನು ಕೇಂದ್ರವಾಗಿವುಳ್ಳ ಮತ್ತು $3x-4y-8=0$ ಸರಳರೇಖೆಯನ್ನು ಸ್ಪರ್ಶಿಸುವ ವೃತದ ಸಮೀಕರಣವನ್ನು ಕಂಡುಹಿಡಿಯಿರಿ.

ತ್ರಿಜ್ಯ $CP$ ಯು ಕೇಂದ್ರಬಿಂದುವಿನಿಂದ ದತ್ತ ಸರಳರೇಖೆಯ ನಡುವಿನ ದೂರಕ್ಕೆ ಸಮನಾಗಿರುತ್ತದೆ.




ಚಿತ್ರ 6.6

ಸೂತ್ರದಿಂದಾಗಿ $\dfrac{ax_1 + by_1 + c}{\sqrt{a^2 + b^2}}$

$\dfrac{3(2) - 4(-3) - 8}{\sqrt{9+16}} = 2$ ಮೂಲಮಾನಗಳು.

ಆದ್ದರಿಂದ ವೃತ್ತದ ಸಮೀಕರಣವು

$(x-2)^2 + (y+3)^2 = 2^2$

ಅಥವಾ $x^2 + y^2 - 4x + 6y + 9 = 0$.

7. $(2,0)$, $(3,0)$ ಮತ್ತು $(0,3)$ ಬಿಂದುಗಳ ಮೂಲಕ ಹಾದುಹೋಗುವ ವೃತ್ತದ ಸಮೀಕರಣವನ್ನು ಕಂಡುಹಿಡಿಯಿರಿ.

$x^2 + y^2 + 2gx + 2fy + c = 0$ ...(1)

ಇದು ವೃತ್ತದ ಸಮೀಕರಣವೆಂದು ಪರಿಗಣಿಸೋಣ.

ವೃತ್ತವು (2,0), (3,0) ಮತ್ತು (0,3) ಬಿಂದುಗಳ ಮೂಲಕ ಹಾದುಹೋಗುವುದರಿಂದ

$4 + 0 + 4g + c = 0$ ಅಥವಾ $4g + c = -4$

$9 + 0 + 6g + c = 0$ ಅಥವಾ $6g + c = -9$

$0 + 9 + 6(0) + 6f + c = 0$ ಅಥವಾ $6f + c = 0$

ಎಂದಾಗುತ್ತದೆ. ಮತ್ತು ಮೊದಲಿನ ಎರಡು ಸಮೀಕರಣಗಳನ್ನು ಬಿಡಿಸುವುದರಿಂದ

$g = \frac{-5}{2}$ ಮತ್ತು $c = 6$

ಕೊನೆಯ ಸಮೀಕರಣದಿಂದ $f = \frac{-5}{2}$

ಆದ್ದರಿಂದ, (1) ರಿಂದ ವೃತ್ತದ ಸಮೀಕರಣವು

$x^2 + y^2 - 5x - 5y + 6 = 0.$

8. ನಿರ್ದೇಶಕ ಅಕ್ಷಗಳನ್ನು (5,0) ಮತ್ತು (0,5) ಬಿಂದುಗಳಲ್ಲಿ ಸ್ಪರ್ಶಿಸುವ ವೃತ್ತದ ಸಮೀಕರಣವನ್ನು ಕಂಡುಹಿಡಿಯಿರಿ.

ಎರಡೂ ಅಕ್ಷಗಳನ್ನು ಸ್ಪರ್ಶಿಸುವ ವೃತ್ತದ ತ್ರಿಜ್ಯವು

$r = |g| = |f|$ ಆಗಿರುತ್ತದೆ.

ಅಂದರೆ ವೃತ್ತದ ಕೇಂದ್ರ ಬಿಂದುವು (5,5) ಎಂದಾಗುತ್ತದೆ (ಚಿತ್ರ 6.7).

ಆದ್ದರಿಂದ ವೃತ್ತದ ಸಮೀಕರಣವು

$(x-5)^2 + (y-5)^2 = 25$

ಅಥವಾ $x^2 + y^2 - 10x - 10y + 25 = 0$




ಚಿತ್ರ 6.7

9. ಕೆಳಗೆ ಸೂಚಿಸಿರುವ ವೃತ್ತಗಳು ಬಾಹ್ಯವಾಗಿ ಸ್ಪರ್ಶಿಸುತ್ತವೆಯೆಂದು ತೋರಿಸಿ.

$x^2+y^2+2x+4y+1 = 0$ ಮತ್ತು $x^2+y^2-4x-4y-1=0$

ಈ ವೃತ್ತಗಳ ಕೇಂದ್ರ ಬಿಂದುಗಳು ಮತ್ತು ತ್ರಿಜ್ಯಗಳು ಹೀಗಿವೆ:

$C_1 \equiv (-1, -2)$ ಮತ್ತು $r_1 = \sqrt{1+4-1} = 2$

$C_2 \equiv (2, 2)$ ಮತ್ತು $r_2 = \sqrt{(4+4+1)} = 3$

$\therefore C_1C_2 = \sqrt{(-1-2)^2 + (-22)^2} = \sqrt{9+16} = 5$

$\therefore C_1C_2 = r_1+r_2$

ಅಂದರೆ, 5 ವೃತ್ತಗಳು ಬಾಹ್ಯವಾಗಿ ಸ್ಪರ್ಶಿಸುತ್ತವೆ.

10. ಕೆಳಗೆ ಸೂಚಿಸಿರುವ ವೃತ್ತಗಳು ಆಂತರಿಕವಾಗಿ ಸ್ಪರ್ಶಿಸುತ್ತವೆ ಎಂದು ನಿರೂಪಿಸಿ.

$x^2+y^2-2x+6y+6 = 0$ ಮತ್ತು $x^2+y^2-5x+6y+15=0$

ಈ ವೃತ್ತಗಳ ಕೇಂದ್ರಗಳು ಮತ್ತು ತ್ರಿಜ್ಯಗಳು:

$C_1 \equiv (1, -3),\ r_1 = \sqrt{1+9-6} = 2$

$C_2 \equiv (5/2, -3)\ \ r_2 = \sqrt{25/4+9-15} = 1/2$

$$C_1C_2 = \sqrt{\left(1-\frac{5}{2}\right)^2+(-3+3)^2} = \frac{3}{2},\ r_1-r_2 = 2-\frac{1}{2} = \frac{3}{2}$$

$C_1C_2 = r_1-r_2$ ಆಗಿರುವುದರಿಂದ ವೃತ್ತಗಳು ಆಂತರಿಕವಾಗಿ ಸ್ಪರ್ಶಿಸುತ್ತವೆ.

## ಅಭ್ಯಾಸ - 6.1

I ಕೆಳಗೆ ಸೂಚಿಸಿರುವ ಕೇಂದ್ರ ಬಿಂದು ಮತ್ತು ತ್ರಿಜ್ಯವುಳ್ಳ ವೃತ್ತದ ಸಮೀಕರಣಗಳನ್ನು ಕಂಡುಹಿಯಿರಿ.

| | ಕೇಂದ್ರ ಬಿಂದು | ತ್ರಿಜ್ಯ |
|---|---|---|
| (i) | (3, -5) | 4 |
| (ii) | (0,-5) | 6 |

II ಕೆಳಗೆ ಸೂಚಿಸಿರುವ ವೃತ್ತಗಳ ಕೇಂದ್ರಬಿಂದು ಮತ್ತು ತ್ರಿಜ್ಯವನ್ನು ಕಂಡು ಹಿಡಿಯಿರಿ.

(i) $2(x^2+y^2) + 6x-10y+9 = 0$

(ii) $5x^2+5y^2+4x-8y = 16$

III 1. (1, 1) , (2, -1) ಮತ್ತು (3, 2) ಬಿಂದುಗಳ ಮೂಲಕ ಹಾದುಹೋಗುವ ವೃತ್ತದ ಸಮೀಕರಣವನ್ನು ಕಂಡುಹಿಡಿಯಿರಿ.

2. $x^2+y^2-8x+2y = 0$ ವೃತ್ತದ ಕೇಂದ್ರ ಬಿಂದುವು $4x-y = 17$ ಸರಳರೇಖೆಯ ಮೇಲಿರುವುದೆಂದು ತೋರಿಸಿ.

3. $x+y=6$ ಮತ್ತು $x+2y=4$ ಸಮೀಕರಣಗಳು ವೃತ್ತದ ಎರಡು ವ್ಯಾಸಗಳಾಗಿದ್ದು, ವೃತ್ತದ ತ್ರಿಜ್ಯವು 10 ಮಾನಗಳಷ್ಟಿದ್ದರೆ ವೃತ್ತದ ಸಮೀಕರಣವನ್ನು ಕಂಡುಹಿಡಿಯಿರಿ.

4. ಮೂಲಬಿಂದುವಿನ ಮೂಲಕ ಹಾದುಹೋಗುವ $x$ ಮತ್ತು $y$ ರೇಖಾಂತರಗಳು ಧನದಿಶೆಯಲ್ಲಿ ಕ್ರಮವಾಗಿ 4 ಮತ್ತು 6 ಮಾನಗಳಿಷ್ಟಿರುವ ವೃತ್ತದ ಸಮೀಕರಣವನ್ನು ಕಂಡುಹಿಡಿಯಿರಿ.

5. (6, 1) ಬಿಂದುವಿನಲ್ಲಿ ಕೇಂದ್ರಬಿಂದುವುಳ್ಳ ಮತ್ತು $5x+12y=3$ ಸರಳರೇಖೆಯನ್ನು ಸ್ಪರ್ಶಿಸುವ ವೃತ್ತದ ಸಮೀಕರಣವನ್ನು ಕಂಡುಹಿಡಿಯಿರಿ.

6. (1, 2) ಮತ್ತು (2,4) ಬಿಂದುಗಳು ಒಂದು ವ್ಯಾಸದ ತುದಿಗಳಾಗಿರುವ ವೃತ್ತದ ಸಮೀಕರಣವನ್ನು ಕಂಡುಹಿಡಿಯಿರಿ.

7. $x^2+y^2+4x-4y+4 = 0$ ವೃತ್ತವು ಅಕ್ಷಗಳನ್ನು ಸ್ಪರ್ಶಿಸುತ್ತದೆಯೆಂದು ತೋರಿಸಿ.

8. $x^2+y^2-2x+6y+6 = 0$ ಮತ್ತು $x^2+y^2-5x+6y+15 = 0$ ವೃತ್ತಗಳು ಆಂತರಿಕವಾಗಿ ಸ್ಪರ್ಶಿಸುವುವೆಂದು ನಿರೂಪಿಸಿ.

9. $x^2+y^2-4x-6y-12 = 0$ ಮತ್ತು $x^2+y^2+6x+18y+26 = 0$ ವೃತ್ತಗಳು ಬಾಹ್ಯವಾಗಿ ಸ್ಪರ್ಶಿಸುವುವೆಂದು ತೋರಿಸಿ ಮತ್ತು ಸ್ಪರ್ಶಬಿಂದುವಿನ ನಿರ್ದೇಶಕಗಳನ್ನು ಕಂಡುಹಿಡಿಯಿರಿ.

10. $x - 0$, $y = 0$ ಮತ್ತು $x = c$ ಸರಳರೇಖೆಗಳನ್ನು ಸ್ಪರ್ಶಿಸುವ ವೃತ್ತದ ಸಮೀಕರಣವನ್ನು ಕಂಡುಹಿಡಿಯಿರಿ.

11. (1, 1), (–2, 2), (–2, –8) ಮತ್ತು (–6, 0) ಬಿಂದುಗಳು ಏಕವೃತ್ತಗತ ಎಂದು ತೋರಿಸಿ.

12. (5, 1) ಮತ್ತು (3, 4) ಬಿಂದುಗಳ ಮೂಲಕ ಹಾದುಹೋಗುವ ಮತ್ತು $x$–ಅಕ್ಷದ ಮೇಲೆ ಕೇಂದ್ರ ಬಿಂದುವುಳ್ಳ ವೃತ್ತದ ಸಮೀಕರಣವನ್ನು ಕಂಡುಹಿಡಿಯಿರಿ.

13. $3x+y = 15$ ಸರಳರೇಖೆಯು $x^2+y^2-2x-4y-5 = 0$ ವೃತ್ತವನ್ನು ಛೇದಿಸುವ ಬಿಂದುವಿನ ನಿರ್ದೇಶಕಗಳನ್ನು ಕಂಡುಹಿಡಿಯಿರಿ ಮತ್ತು ಇದಕ್ಕೆ ನಿಮ್ಮ ಅಭಿಪ್ರಾಯವೇನು?

14. $x^2+y^2-4x-6y-12 = 0$ ವೃತ್ತವನ್ನು ಆಂತರಿಕವಾಗಿ (–1, –1) ಬಿಂದುವಿನಲ್ಲಿ ಸ್ಪರ್ಶಿಸುವ ಮತ್ತು 3 ಮಾನಗಳಷ್ಟು ತ್ರಿಜ್ಯವುಳ್ಳ ವೃತ್ತದ ಸಮೀಕರಣವನ್ನು ಕಂಡುಹಿಡಿಯಿರಿ.

15. (–1, 1) ಬಿಂದುವಿನಲ್ಲಿ ಕೇಂದ್ರಬಿಂದುವುಳ್ಳ ಮತ್ತು $x^2+y^2-4x+6y = 3$ ವೃತ್ತವನ್ನು ಬಾಹ್ಯವಾಗಿ ಸ್ಪರ್ಶಿಸುವಂತೆ ವೃತ್ತವೊಂದನ್ನು ರಚಿಸಲಾಗಿದೆ. ಈ ವೃತ್ತವು ಎರಡೂ ಅಕ್ಷಗಳನ್ನು ಸ್ಪರ್ಶಿಸುವುದೆಂದು ತೋರಿಸಿ.

### 6.2.1 ವೃತ್ತದ ಸ್ಪರ್ಶಕದ ಸಮೀಕರಣ

ವೃತ್ತದ ಸಮೀಕರಣವು
$x^2+y^2+2gx+2fy+c = 0$
ಆ ಗಿರಲಿ. $P(x_1, y_1)$ ವೃತ್ತದ
ಮೇಲಿರುವ ಬಿಂದುವಾಗಿರಲಿ.




ಚಿತ್ರ 6.8

ಚಿತ್ರ 6.8ರ ಆಧಾರದ ಮೇರೆಗೆ $CP$ ಮತ್ತು $PT$ ಒಂದಕ್ಕೊಂದು ಲಂಬವಾಗಿವೆ. $CP$ ಯ ಓಟವು

$$\frac{y_1+f}{x_1+g}$$

ಆಗ $PT$ ಯ ಓಟವು

$$-\frac{x_1+g}{y_1+f}$$

ಎಂದಾಗುತ್ತದೆ. ಆದ್ದರಿಂದ ವೃತ್ತದ ಸ್ಪರ್ಶಕದ ಸಮೀಕರಣವನ್ನು

$$y-y_1 = -\frac{x_1+g}{y_1+f}(x-x_1)$$

ಅಥವಾ $(y-y_1)(y_1+f) = -(x_1+g)(x-x_1)$

ಅಥವಾ $xx_1+yy_1+gx+fy = x_1^2+y_1^2+gx_1+fy_1$

ಈಗ $(gx_1+fy_1+c)$ ಅನ್ನು ಎರಡೂ ಬದಿಗಳಲ್ಲಿ ಸಂಕಲನ ಮಾಡಿದಾಗ

$$xx_1+yy_1+g(x+x_1)+f(y+y_1)+c = x_1^2+y_1^2+2gx_1+2fy_1+c$$

ಅಥವಾ $\boxed{xx_1+yy_1+g(x+x_1)+f(y+y_1)+c=0}$

ಏಕೆಂದರೆ $(x_1, y_1)$ ಬಿಂದುವು ವೃತ್ತದ ಮೇಲಿರುವುದರಿಂದ ಸಮೀಕರಣದ ಬಲಬದಿಯ ಉಕ್ತಿಯು ಶೂನ್ಯವಾಗುವುದು.

ಈ ಮೇಲಿನ ಸಮೀಕರಣವು ವೃತ್ತದ ಸ್ಪರ್ಶಕದ ಸಮೀಕರಣ.

## 6.2.2 $y = mx+c$ ಸರಳರೇಖೆಯು ವೃತ್ತವನ್ನು ಸ್ಪರ್ಶಿಸಲು ಸ್ಪರ್ಶಕವೆನಿಸುವ ನಿಬಂಧನೆ

$y = mx+c$ ಸಮೀಕರಣದಿಂದ $y$ ನ ಬೆಲೆಯನ್ನು ವೃತ್ತದ ಸಮೀಕರಣ $x^2+y^2=a^2$ ನಲ್ಲಿ ಆದೇಶಿಸಿದಾಗ

$x^2+(mx+c)^2 = a^2$ ಅಥವಾ $(1+m^2)x^2+2mcx+c^2-a^2 = 0$ ಎಂದಾಗುವುದು. ಇದು $x$–ನಲ್ಲಿರುವ ಒಂದು ವರ್ಗಸಮೀಕರಣ ಮತ್ತು $y = mx+c$ ಸರಳರೇಖೆಯು ವೃತ್ತವನ್ನು ಏಕಬಿಂದುವಿನಲ್ಲಿ ಸ್ಪರ್ಶಿಸುವುದರಿಂದ ಸಮೀಕರಣದ ಮೂಲಗಳು ನೈಜವಾಗಿರುತ್ತವೆ ಹಾಗೂ ಸಮನಾಗಿರುತ್ತವೆ. ಆದ್ದರಿಂದ ವರ್ಗಸಮೀಕರಣದ ಶೋಧಕವು ಶೂನ್ಯವಾಗಿರುತ್ತದೆ:

$$4m^2c^2-4(c^2-a^2)\ (1-m^2) = 0$$

ಅಥವಾ $a^2(1+m^2) = c^2$

ಅಥವಾ $\boxed{c = \pm a\sqrt{1+m^2}}$

ಇದು $y = mx+c$ ಸರಳರೇಖೆಯು $x^2+y^2 = a^2$ ವೃತ್ತದ ಸ್ಪರ್ಶಕವೆನಿಸುವ ನಿಬಂಧನೆ.

**ಸೂಚನೆ :** ಈ ಮೇಲಿನ ನಿಬಂಧನೆಯಿಂದಾಗಿ

$$y = mx \pm a\sqrt{1+m^2} \qquad \text{..... (1)}$$

ಸಮೀಕರಣಗಳನ್ನುಳ್ಳ ಎರಡು ಸಮಾಂತರ ಸ್ಪರ್ಶಕಗಳನ್ನು ವೃತ್ತ $x^2+y^2= a^2$ ಹೊಂದಿರುತ್ತದೆ. ಓಟ $m$ ಗೆ ಬೇರೆ ಬೇರೆ ಬೆಲೆಗಳನ್ನು ಕೊಡುತ್ತ ಹೋದರೆ ಬೇರೆ ಬೇರೆ ಸ್ಪರ್ಶಕ ಯುಗ್ಮಗಳು ದೊರೆಯುತ್ತವೆ. ಇಂತಹ ಎಲ್ಲಾ ಸ್ಪರ್ಶಕ ರೇಖೆಗಳನ್ನೂ ವೃತ್ತವು ಸ್ಪರ್ಶಿಸುವುದರಿಂದ, $x^2+y^2=a^2$ ವೃತ್ತವನ್ನು ಸರಳರೇಖೆಗಳ ಗಣ (1) ರ "ಎನ್ವಲಪ್" ಎಂದು ಕರೆಯುತ್ತೇವೆ.

## ಅಭ್ಯಾಸ - 6.2

1. $x^2+y^2-6x-8y=0$ ವೃತ್ತಕ್ಕೆ ಮೂಲಬಿಂದುವಿನಲ್ಲಿ ಸ್ಪರ್ಶಕದ ಸಮೀಕರಣವನ್ನು ಕಂಡುಹಿಡಿಯಿರಿ.

2. $x$ – ಅಕ್ಷದೊಂದಿಗೆ $45°$ ಗಳಷ್ಟು ಬಾಗುವುಳ್ಳ $x^2+y^2-6x-4y+5=0$ ವೃತ್ತದ ಸ್ಪರ್ಶಕಗಳ ಸಮೀಕರಣಗಳನ್ನು ಕಂಡುಹಿಡಿಯಿರಿ. (ಸುಳುಹು: ಸ್ಪರ್ಶಕದ ಓಟವು, $\tan 45° = 1$ ಆದ್ದರಿಂದ ಅದರ ಸಮೀಕರಣವನ್ನು $y=x+c$ ಎಂದು ಪರಿಗಣಿಸಿ).

3. $(3, -3)$ ಬಿಂದುವಿನಿಂದ $x^2+y^2+8x+4y-5=0$ ವೃತ್ತದ ಸ್ಪರ್ಶಕಗಳ ಸಮೀಕರಣಗಳನ್ನು ಕಂಡುಹಿಡಿಯಿರಿ.

4. $x^2+y^2=5$ ವೃತ್ತಕ್ಕೆ $(1, -2)$ ಬಿಂದುವಿನಲ್ಲಿರುವ ಸ್ಪರ್ಶಕವು $x^2+y^2-8x+6y+20=0$ ವೃತ್ತವನ್ನು ಸ್ಪರ್ಶಿಸುವುದೆಂದು ತೋರಿಸಿ ಮತ್ತು ಸ್ಪರ್ಶಬಿಂದುವಿನ ನಿರ್ದೇಶಕಗಳನ್ನು ಕಂಡುಹಿಡಿಯಿರಿ.

5. $x^2+y^2+4x-4y+4=0$ ವೃತ್ತದ ಸ್ಪರ್ಶಕಗಳು ಅಕ್ಷಗಳೊಂದಿಗೆ ಸಮರೇಖಾಂತರವುಳ್ಳವುಗಳಾದಲ್ಲಿ ಅವುಗಳ ಸಮೀಕರಣಗಳನ್ನು ಕಂಡುಹಿಡಿಯಿರಿ.

6. $3x-4y-7=0$ ಸರಳರೇಖೆಗೆ ಸಮಾನಾಂತರವಾಗಿಯೂ ಮತ್ತು ಲಂಬವಾಗಿಯೂ ಇರುವ $x^2+y^2-2x-4y-4=0$ ವೃತ್ತದ ಸ್ಪರ್ಶಕಗಳನ್ನು ಕಂಡುಹಿಡಿಯಿರಿ.

7. $7y-x=5$ ಸರಳರೇಖೆಯು $x^2+y^2-5x+5y=0$ ವೃತ್ತವನ್ನು ಸ್ಪರ್ಶಿಸುವುದೆಂದು ತೋರಿಸಿ ಮತ್ತು ಸ್ಪರ್ಶಬಿಂದುವಿನ ನಿರ್ದೇಶಕಗಳನ್ನು ಕಂಡುಹಿಡಿಯಿರಿ.

### 6.3 ಒಂದು ಹೊರಬಿಂದುವಿನಿಂದ ವೃತ್ತಕ್ಕೆ ಎಳೆಯಲ್ಪಟ್ಟ ಸ್ಪರ್ಶಕದ ಉದ್ದ

ವೃತ್ತದ ಸಮೀಕರಣವು $x^2+y^2+2gx+2fy+c=0$ ಎಂದಿರಲಿ.

$P(x_1, y_1)$ ವೃತ್ತದ ಹೊರಗೆ ಇರುವ ಒಂದು ಬಿಂದುವಾಗಿರಲಿ (ಚಿತ್ರ 6.9).

$C(-g, -f)$ ವೃತ್ತದ ಕೇಂದ್ರಬಿಂದು ಮತ್ತು $PT$ ವೃತ್ತದ ಸ್ಪರ್ಶಕವಾಗಿರಲಿ.

$CT$ ವೃತ್ತದ ತ್ರಿಜ್ಯವಾಗಿರುವುದರಿಂದ

$CT = \sqrt{g^2+f^2-c}$

$CT$ ಯು $PT$ ಗೆ ಲಂಬವಾಗಿರುವುದರಿಂದ

$PCT$ ತ್ರಿಕೋನದಿಂದ

$PC^2 = PT^2+CT^2$

ಅಂದರೆ, $(x_1+g)^2 + (y_1+f)^2 = PT^2+(\sqrt{g^2+f^2-c})^2$

ಅಥವಾ $PT^2 = (x_1+g)^2 + (y_1+g)^2 -(g^2+f^2-c)$

$= x_1^2+y_1^2+2gx_1+2fy_1+c$

ಆದ್ದರಿಂದ $(x_1, y_1)$ ಬಿಂದುವಿನಿಂದ ಸ್ಪರ್ಶಕದ ಉದ್ದ

$$\boldsymbol{PT = \sqrt{x_1^2+y_1^2+2gx_1+2fy_1+c}}$$




ಚಿತ್ರ 6.9

**ಸೂಚನೆ:** (i) $(x_1, y_1)$ ಬಿಂದುವು ವೃತ್ತದ *ಹೊರಗೆ* ಇದ್ದಲ್ಲಿ

$x_1^2+y_1^2+2gx_1+2fy_1+c > 0$

(ii) $(x_1,y_1)$ ಬಿಂದುವು ವೃತ್ತದ *ಮೇಲೆ* ಇದ್ದಲ್ಲಿ

$x_1^2+y_1^2+2gx_1+2fy_1+c = 0$

(iii) $(x_1, y_1)$ ಬಿಂದುವು ವೃತ್ತದ ಒಳಗೆ ಇದ್ದಲ್ಲಿ

$x_1^2+y_1^2+2gx_1+2fy_1+c < 0$

ಎಂದು ಪರಿಗಣಿಸಲಾಗುವುದು.

## ಅಭ್ಯಾಸ - 6.3

1. (–2, 1) (0, 0) (4, –3) ಬಿಂದುಗಳು ಕ್ರಮವಾಗಿ $x^2+y^2-5x+3y=0$ ವೃತ್ತದ ಹೊರಗೆ, ಮೇಲೆ ಮತ್ತು ಒಳಗೆ ಇರುವುವೆಂಬುದನ್ನು ತೋರಿಸಿ.

2. (–1, 0), (0, 2) ಮತ್ತು (–2, 1) ಬಿಂದುಗಳಿಂದ ಸ್ಪರ್ಶಕಗಳ ಉದ್ದಗಳು ಕ್ರಮವಾಗಿ 3, $\sqrt{10}$ ಮತ್ತು $3\sqrt{3}$ ಆದರೆ ವೃತ್ತದ ಸಮೀಕರಣವನ್ನು ಕಂಡುಹಿಡಿಯಿರಿ.

3. (4, 1) ಬಿಂದುವಿನಿಂದ $2(x^2+y^2)-3x+4y+6=0$ ವೃತ್ತಕ್ಕೆ ಎಳೆಯಸ್ಪಟ್ಟ ಸ್ಪರ್ಶಕದ ಉದ್ದವನ್ನು ಕಂಡುಹಿಡಿಯಿರಿ.

4. $x^2+y^2+2gx+2fy+c=0$ ವೃತ್ತದ ಮೇಲಿನ ಯಾವುದೇ ಬಿಂದುವಿನಿಂದ $x^2+y^2+2gx+2fy+c_1=0$ ವೃತ್ತಕ್ಕೆ ಎಳೆಯಲ್ಪಟ್ಟ ಸ್ಪರ್ಶಕದ ಉದ್ದವನ್ನು ಕಂಡುಹಿಡಿಯಿರಿ.

5. ಬಿಂದುವೊಂದರಿಂದ $x^2+y^2+4x+3=0$ ಮತ್ತು $x^2y^2-6x+5=0$ ವೃತ್ತಗಳಿಗೆ ಎಳೆಯಲ್ಪಟ್ಟ ಸ್ಪರ್ಶಕಗಳ ಉದ್ದಗಳ ನಿಷ್ಪತ್ತಿಯು 1 : 2 ಆದರೆ, ಬಿಂದುಪಥವು ಒಂದು ವೃತ್ತವೆಂದು ನಿರೂಪಿಸಿ. ಆ ವೃತ್ತದ ಕೇಂದ್ರ ಬಿಂದು ಮತ್ತು ತ್ರಿಜ್ಯವನ್ನು ಕಂಡುಹಿಡಿಯಿರಿ.

### 6.4.1 ಬಿಂದುವಿನ ಘಾತ

ವೃತ್ತದ ಕೇಂದ್ರಬಿಂದು $C$ ಮತ್ತು ತ್ರಿಜ್ಯ $r$ ಆಗಿರಲಿ. ಆಗ, $CP^2-r$ $P$ ಬಿಂದುವಿನ ಘಾತ ಎಂದು ಕರೆಯಲಾಗುವುದು (ಚಿತ್ರ 6.10).

(i) $P$ ಬಿಂದುವು ವೃತ್ತದ ಹೊರಗೆ ಇದ್ದಲ್ಲಿ

$CP > r$, ಆಗ $CP^2-r^2 > 0$ ಆಗುತ್ತದೆ.

(ii) ಅದೇ ರೀತಿ $P$ ಬಿಂದುವು ವೃತ್ತದ ಒಳಗೆ ಇದ್ದಲ್ಲಿ

$CP < r$ ಆಗ $CP^2-r^2 < 0$ ಆಗುತ್ತದೆ.




ಚಿತ್ರ 6.10

(iii) $P$ ಬಿಂದುವು ವೃತ್ತದ ಮೇಲೆ ಇದ್ದರೆ $CP=r$ ಆಗುವುದು. ಆಗ $CP^2-r^2=0$

ಆದ್ದರಿಂದ ಬಿಂದುವಿನ ಘಾತವು, ಬಿಂದುವು ವೃತ್ತದ ಹೊರಗೆ, ಒಳಗೆ ಅಥವಾ ವೃತ್ತದ ಮೇಲೆ ಇರುವಾಗ ಕ್ರಮವಾಗಿ ಧನಾತ್ಮಕ, ಋಣಾತ್ಮಕ ಅಥವಾ ಶೂನ್ಯವಾಗಿರುವುದು.

ಈಗ $P(x_1, y_1)$ ಬಿಂದುವು $x^2+y^2+2gx+2fy+c = 0$ ವೃತ್ತದ ಮೇಲಿರುವ ಬಿಂದುವಾದಲ್ಲಿ ವೃತ್ತದ ಕೇಂದ್ರ ಬಿಂದು $(-g, -f)$ ಮತ್ತು ತ್ರಿಜ್ಯ $=\sqrt{g^2+f^2-c}$

ಆಗ $CP^2-r^2 = (x_1+g)^2+(y_1+f)^2- \sqrt{(g^2+f^2-c)}$

$$= x_1^2+y_1^2+2gx_1+2fy_1+c$$

ಇದನ್ನು $P(x_1, y_1)$ ಬಿಂದುವಿನ ಘಾತವೆನಿಸುವುದು.

## 6.4.2 ಎರಡು ವೃತ್ತಗಳ ಮೂಲಾಕ್ಷ

ಎರಡು ವೃತ್ತಗಳಿಗೆ ಅನುಗುಣವಾಗಿ ಚಲಿಸುವ ಬಿಂದುವೊಂದರ ಘಾತಗಳು ಸಮನಾಗಿದ್ದಲ್ಲಿ ಅಂತಹ ಬಿಂದುವಿನ ಬಿಂದುಪಥವನ್ನು ವೃತ್ತಗಳ ಮೂಲಾಕ್ಷವೆಂದು ಕರೆಯಲಾಗುವುದು.

ಎರಡು ವೃತ್ತಗಳ ಸಮೀಕರಣಗಳು

$$x^2+y^2+2g_1x+2f_1y+c_1=0 \quad ....(1)$$

ಮತ್ತು $$x^2+y^2+2g_2x+2f_2y+c_2 = 0 \quad ....(2)$$

ಆಗಿರಲಿ. $P(x, y)$ ಮೂಲಾಕ್ಷದ ಮೇಲಿರುವ ಯಾವುದೇ ಬಿಂದುವಾಗಿರಲಿ. (1) ಮತ್ತು (2) ವೃತ್ತಗಳಿಗೆ ಅನುಗುಣವಾಗಿ $P$ ಬಿಂದುವಿನ ಘಾತವು ಸಮನಾಗಿರುವುದರಿಂದ

$$x^2+y^2+2g_1x+2f_1y+c_1 = x^2+y^2+2g_2x+2f_2y+c_2$$

ಅಥವಾ $$\boxed{2(g_1-g_2)x+2(f_1-f_2)y+c_1-c_2 = 0}$$

ಇದು ಎರಡು ವೃತ್ತಗಳ ಮೂಲಾಕ್ಷದ ಸಮೀಕರಣ.

**ಸೂಚನೆ:** (i) ಮೂಲಾಕ್ಷವು $x$ ಮತ್ತು $y$ ನಲ್ಲಿರುವ ಒಂದನೆಯ ಘಾತದ ಸಮೀಕರಣವಾಗಿದೆ. ಆದ್ದರಿಂದ ಮೂಲಾಕ್ಷವು ಒಂದು ಸರಳರೇಖೆ.

(ii) $S=0$ ಮತ್ತು $T= 0$ ಎಂಬುವು ಎರಡು ವೃತ್ತಗಳ ಸಾಮಾನ್ಯ ರೂಪದ

ಸಮೀಕರಣಗಳನ್ನು ಸೂಚಿಸಿದರೆ

$$S - T = 0$$

ಎಂಬುದು ಅವುಗಳ *ಮೂಲಾಕ್ಷದ ಸಮೀಕರಣವಾಗಿರುತ್ತದೆ.*

### 6.4.3 ಮೂರು ವೃತ್ತಗಳ ಮೂಲಾಕ್ಷ ಕೇಂದ್ರ

*ಏಕರೇಖಸ್ಥ ಕೇಂದ್ರಗಳಿಲ್ಲದಿರುವ ಮೂರು ವೃತ್ತಗಳಲ್ಲಿ ಒಂದೊಂದು ಸಲ ಎರಡು ವೃತ್ತಗಳಂತೆ ಆರಿಸಿಕೊಂಡರೆ ಅವುಗಳಿಂದ ದೊರೆಯುವ ಮೂರು ಮೂಲಾಕ್ಷಗಳು ಏಕ ಬಿಂದುಸ್ಥವಾಗುವುವು.* ಈ ಬಿಂದುವನ್ನು ಆ ವೃತ್ತಗಳ ಮೂಲಾಕ್ಷ ಕೇಂದ್ರವೆಂದು ಕರೆಯಲಾಗುವುದು.




ಚಿತ್ರ 6.11

**ಸೂಚನೆ:** ಮೂಲಾಕ್ಷ ಕೇಂದ್ರವು ವೃತ್ತಗಳ ಹೊರಗೆ ಇದ್ದಲ್ಲಿ, ಮೂಲಾಕ್ಷ ಕೇಂದ್ರ ಬಿಂದುವಿನಿಂದ ಎಳೆಯಲ್ಪಟ್ಟ ಸ್ಪರ್ಶಕಗಳ ಉದ್ದವು ಸಮನಾಗಿರುವುದು.

**ಪ್ರಮೇಯ:** ಎರಡು ವೃತ್ತಗಳ ಮೂಲಾಕ್ಷವು ವೃತ್ತಗಳ ಕೇಂದ್ರ ಬಿಂದುಗಳನ್ನು ಸೇರಿಸುವ ಸರಳರೇಖೆಗೆ ಲಂಬವಾಗಿರುವುದು.

**ಸಾಧನೆ:** ವೃತ್ತಗಳ ಸಮೀಕರಣಗಳು

$$S \equiv x^2+y^2+2g_1x+2f_1y+c_1 = 0$$

ಮತ್ತು $T \equiv x^2+y^2+2g_2x+2f_2y+c_2 = 0$

ಆಗಿರಲಿ. ಈ ವೃತ್ತಗಳ ಮೂಲಾಕ್ಷದ ಸಮೀಕರಣವು $S - T = 0$

ಅಂದರೆ, $2(g_1-g_2)x+2(f_1-f_2)+c_1-c_2=0$

ಎಂದಾಗುತ್ತದೆ. $A$ ಮತ್ತು $B$ ವೃತ್ತಗಳ ಕೇಂದ್ರಬಿಂದುಗಳಾಗಿರಲಿ (ಚಿತ್ರ 6.12)

$AB$ ಸರಳರೇಖೆಯ ಓಟವು $m_1=\dfrac{f_1-f_2}{g_1-g_2}$

ಮೂಲಾಕ್ಷ ಓಟವು $m_2=-\dfrac{g_1-g_2}{f_1-f_2}$

ಇದರಿಂದ $m_1\, m_2=-1$ ಎಂದು ನಿರೂಪಿತವಾಗಿದೆ.




(ಚಿತ್ರ 6.12)

ಆ ಕಾರಣ ಮೂಲಾಕ್ಷವು ವೃತ್ತಗಳ ಕೇಂದ್ರ ಬಿಂದುಗಳನ್ನು ಸೇರಿಸುವ ಸರಳರೇಖೆಗೆ ಲಂಬವಾಗಿರುವುದೆಂಬುದು ಸಾಧಿತವಾಗಿದೆ.

**ಸೂಚನೆ:** (1) ವೃತ್ತಗಳು ಸ್ಪರ್ಶಿಸಿದರೆ ಮೂಲಾಕ್ಷವು ಅವುಗಳ ಸಾಮಾನ್ಯ ಸ್ಪರ್ಶಕವಾಗಿರುವುದು.

(2) ವೃತ್ತಗಳು ಛೇದಿಸಿದರೆ ಮೂಲಾಕ್ಷವು ಅವುಗಳ ಸಾಮಾನ್ಯ ಜ್ಯಾ ಆಗಿರುವುದು.

(3) ಎರಡು ಛೇದಿಸುವ ವೃತ್ತಗಳ ಛೇದನ ಬಿಂದುಗಳನ್ನು ಪಡೆಯಲು, ಅವುಗಳ ಮೂಲಾಕ್ಷದ ಸಮೀಕರಣವನ್ನು ದತ್ತ ವೃತ್ತಗಳಲ್ಲಿ ಯಾವುದಾದರೊಂದರ ಸಮೀಕರಣದೊಂದಿಗೆ ಬಿಡಿಸಬೇಕು.

## ಅಭ್ಯಾಸ – 6.4

1. $x^2+y^2+2x+4y-7 = 0$ ಮತ್ತು $x^2+y^2-6x+2y-5 = 0$ ವೃತ್ತಗಳ ಮೂಲಾಕ್ಷವನ್ನು ಕಂಡುಹಿಡಿಯಿರಿ. ಈ ಮೂಲಾಕ್ಷವು ವೃತ್ತಗಳ ಕೇಂದ್ರಬಿಂದುಗಳನ್ನು ಸೇರಿಸುವ ಸರಳರೇಖೆಗೆ ಲಂಬವಾಗಿದೆಯೆಂದು ನಿರೂಪಿಸಿ.

2. $2x^2+2y^2-x+5y-7 = 0$ ಮತ್ತು $x^2+y^2+3x+4y-2 = 0$ ವೃತ್ತಗಳ ಮೂಲಾಕ್ಷವನ್ನು ಕಂಡುಹಿಡಿಯಿರಿ.

3. $x^2+y^2+2x+2y+1 = 0$ ಮತ್ತು $x^2+y^2-10x-6y+14 = 0$ ವೃತ್ತಗಳ ಮೂಲಾಕ್ಷವನ್ನು ಕಂಡುಹಿಡಿಯಿರಿ.

4. $x^2+y^2-6x-6y+4 = 0$, $x^2+y^2-2x-4y+3 = 0$ ಮತ್ತು $x^2+y^2+2x+2y+1 = 0$ ವೃತ್ತಗಳ ಮೂಲಾಕ್ಷ ಕೇಂದ್ರವನ್ನು ಕಂಡುಹಿಡಿಯಿರಿ.

5. $x^2+y^2+4x+7 = 0$, $2x^2+2y^2+3x+5y+9 = 0$ ಮತ್ತು $x^2+y^2+y = 0$ ಈ ವೃತ್ತಗಳ ಮೂಲಾಕ್ಷ ಕೇಂದ್ರವನ್ನು ಕಂಡುಹಿಡಿಯಿರಿ.

6. $x^2+y^2-8x+4y+2 = 0$ ಮತ್ತು $x^2+y^2+2x-6y+2 = 0$ ವೃತ್ತಗಳ ಸಾಮಾನ್ಯ ಸ್ಪರ್ಶಕದ ಸಮೀಕರಣವನ್ನು ಕಂಡುಹಿಡಿಯಿರಿ.

7. $x^2+y^2-4x-6y+12 = 0$ ಮತ್ತು $5(x^2+y^2)-8x-14y-32 = 0$ ವೃತ್ತಗಳ ಸಾಮಾನ್ಯ ಸ್ಪರ್ಶಕದ ಸಮೀಕರಣವನ್ನು ಕಂಡುಹಿಡಿಯಿರಿ.

### 6.5.1 ಲಂಬ ವೃತ್ತಗಳು

ಛೇದಿಸುವ ಎರಡು ವೃತ್ತಗಳ ಛೇದನಬಿಂದುವಿನಲ್ಲಿ ವೃತ್ತಗಳಿಗೆ ಎಳೆಯಲ್ಪಟ್ಟ ಎರಡು ಸ್ಪರ್ಶಕಗಳ ನಡುವಿನ ಕೋನವನ್ನು ವೃತ್ತಗಳ ನಡುವಿನ ಕೋನವೆಂದು ಪರಿಗಣಿಸಲಾಗುವುದು. ಸ್ಪರ್ಶಕಗಳ ನಡುವಿನ ಕೋನವು ಲಂಬಕೋನವಾದರೆ ವೃತ್ತಗಳು ಲಂಬವೃತ್ತಗಳೆಂದು ಕರೆಯುತ್ತೇವೆ.

### 6.5.2 ವೃತ್ತಗಳು ಲಂಬವೃತ್ತಗಳೆಂದೆನಿಸುವ ನಿಬಂಧನೆ

ಛೇದಿಸುವ ಎರಡು ವೃತ್ತಗಳ ಸಮೀಕರಣಗಳು

$x^2+y^2+2g_1x+2f_1y+c_1 = 0$ ಮತ್ತು

$x^2+y^2+2g_2x+2f_2y+c_2 = 0$ ಆಗಿರಲಿ.

ಚಿತ್ರ 6.13 ರ ಆಧಾರದ ಮೇರೆಗೆ

$AC = \sqrt{g_1^2+f_1^2-c_1}$

ಮತ್ತು $BC = \sqrt{g_2^2+f_2^2-c}$

S T C A B

ಚಿತ್ರ 6.13

ಎಂದಾಗುತ್ತದೆ. ಹಾಗೆಯೇ ಕೇಂದ್ರಗಳು

$A \equiv (-g_1, -f_1), B \equiv (-g_2, -f_2)$

ವೃತ್ತಗಳು $C$ ಬಿಂದುವಿನಲ್ಲಿ ಛೇದಿಸಲಿ ಮತ್ತು ಇವುಗಳು ಲಂಬವೃತ್ತಗಳಾಗಿರಲಿ. ಈಗ $ABC$ ಲಂಬಕೋನ ತ್ರಿಕೋನದಲ್ಲಿ ಪೈಥಾಗರಸ್‌ನ ಪ್ರಮೇಯದಂತೆ

$AB^2= AC^2+BC^2$

ಅಂದರೆ, $(-g_1+g_2)^2+(-f_1+f_2)^2 = g_1^2+f_1^2-c_1+g_2^2+f_2^2-c_2$

ಅಥವಾ $\boxed{2g_1g_2+2f_1f_2 = c_1+c_2}$

ಇದು ವೃತ್ತಗಳು ಲಂಬವೃತ್ತಗಳೆಂದೆನಿಸಲು ಬೇಕಾದ ನಿಬಂಧನೆ.

**ಸೂಚನೆ:** ಎರಡು ವೃತ್ತಗಳನ್ನು ಲಂಬವಾಗಿ ಛೇದಿಸುವ ಯಾವುದೇ ವೃತ್ತದ ಕೇಂದ್ರಬಿಂದುವು ಆ ಎರಡು ವೃತ್ತಗಳ ಮೂಲಾಕ್ಷದ ಮೇಲಿರುತ್ತದೆ.

**ಉದಾಹರಣೆಗಳು**

1. $x^2+y^2+2x-4y+5=0$ ಮತ್ತು $x^2+y^2-6x+4y-19=0$ ವೃತ್ತಗಳು ಲಂಬವೃತ್ತಗಳೆಂದು ತೋರಿಸಿ.

ದತ್ತ ವೃತ್ತಗಳ ಕೇಂದ್ರ ಬಿಂದುಗಳ ನಿರ್ದೇಶಕಗಳು

$(-g_1, -f_1) \equiv (-1, 2)$ ಮತ್ತು $(-g_2, -f_2) \equiv (3, -2)$

ಲಂಬವೃತ್ತಗಳೆನಿಸಲು ಬೇಕಾದ ನಿಬಂಧನೆ

$2g_1g_2+2f_1f_2=c_1+c_2$

ಇಲ್ಲಿ $2g_1g_2+2f_1f_2 = 2(1)(-3)+2(-2)(2) = -6-8 = -14$ ...(1)

ಮತ್ತು $c_1+c_2= 5-19 = -14$ ..... (2)

(1) ಮತ್ತು (2) ರಿಂದ ವೃತ್ತಗಳು ಲಂಬವೃತ್ತಗಳೆಂದು ಸಿದ್ಧವಾಗುತ್ತದೆ.

2. $x^2+y^2-x+22y+3=0$ ಮತ್ತು $x^2+y^2+7x+6y+c=0$ ವೃತ್ತಗಳು ಲಂಬವೃತ್ತಗಳಾದಲ್ಲಿ '$c$' ಯ ಬೆಲೆಯನ್ನು ಕಂಡುಹಿಡಿಯಿರಿ.

ಇಲ್ಲಿ, $2g_1g_2+2f_1f_2 = c_1+c_2$ ನಿಬಂಧನೆಯಂತೆ

$$2(-1/2)(7/2)+2(11)(3) = 3+c$$

ಅಥವಾ $c = \dfrac{119}{2}$ ಎಂದಾಗುತ್ತದೆ.

3. ಮೂಲಬಿಂದುವಿನ ಮೂಲಕ ಹಾದುಹೋಗುವ ಮತ್ತು $x^2+y^2+8x+4y-6=0$ ಹಾಗೂ $x^2+y^2+2x+6y+1=0$ ವೃತ್ತಗಳನ್ನು ಲಂಬವಾಗಿ ಛೇದಿಸುವ ವೃತ್ತದ ಸಮೀಕರಣವನ್ನು ಕಂಡುಹಿಡಿಯಿರಿ.

ನಮಗೆ ಬೇಕಾಗಿರುವ ವೃತ್ತದ ಸಮೀಕರಣವನ್ನು

$$x^2+y^2+2gx+2fy+c=0$$

ಎಂದು ಪರಿಗಣಿಸೋಣ. ಈ ವೃತ್ತವು ಮೂಲಬಿಂದುವಿನ ಮೂಲಕ ಹಾದು ಹೋಗುವುದರಿಂದ $c = 0$ ಎಂದಾಗುತ್ತದೆ.

ಈ ವೃತ್ತವು ದತ್ತ ವೃತ್ತಗಳನ್ನು ಲಂಬವಾಗಿ ಛೇದಿಸುವುದರಿಂದ

$2g(4)+2f(2)=c-6$ ಮತ್ತು

$2g(1)+2f(3)= c+1$

ಎಂದಾಗುತ್ತದೆ. $c = 0$ ಆಗಿರುವುದರಿಂದ

$8g+4f=-6$

$2g+6f=1$

ಈ ಸಮೀಕರಣಗಳನ್ನು ಬಿಡಿಸುವುದರಿಂದ $f = 1/2$ ಮತ್ತು $g = -1$ ಆದ್ದರಿಂದ ವೃತ್ತದ ಸಮೀಕರಣವು $x^2+y^2-2x+y=0$ ಎಂದಾಗುತ್ತದೆ.

4 $x^2 + y^2 + 2x + 4y + 1 = 0$, $2x^2 + 2y^2 + 6x + 8y - 3 = 0$ ಮತ್ತು $x^2 + y^2 - 2x + 6y - 3 = 0$ ವೃತ್ತಗಳನ್ನೂ ಲಂಬವಾಗಿ ಛೇದಿಸುವ ವೃತ್ತದ ಸಮೀಕರಣವನ್ನು ಕಂಡುಹಿಡಿಯಿರಿ.

ಕೊಟ್ಟಿರುವ ವೃತ್ತಗಳ ಸಮೀಕರಣಗಳು ಹೀಗಿವೆ :

$$x^2+y^2+2x+4y+1=0 \qquad \text{..... (1)}$$
$$2x^2+2y^2+6x+8y-3=0 \qquad \text{..... (2)}$$
$$x^2+y^2-2x+6y-3=0 \qquad \text{..... (3)}$$

(1) ಮತ್ತು (2) ವೃತ್ತಗಳ ಮೂಲಾಕ್ಷವು $x = \frac{5}{2}$

(1) ಮತ್ತು (3) ವೃತ್ತಗಳ ಮೂಲಾಕ್ಷವು $2x-y+2=0$ ಎಂದಾಗುತ್ತದೆ.

ಈ ಮೂಲಾಕ್ಷಗಳನ್ನು ಬಿಡಿಸುವುದರಿಂದ ಮೂಲಾಕ್ಷಕೇಂದ್ರವು $\left(\frac{5}{2}, 7\right)$ ಎಂದಾಗುತ್ತದೆ.

ನಮಗೆ ಬೇಕಾಗಿರುವ ವೃತ್ತದ ತ್ರಿಜ್ಯವು ಮೂಲಾಕ್ಷಕೇಂದ್ರದಿಂದ ಯಾವುದೇ ದತ್ತವೃತ್ತಕ್ಕೆ ಎಳೆಯಲ್ಪಟ್ಟ ಸ್ಪರ್ಶಕದ ಉದ್ದಕ್ಕೆ ಸಮನಾಗಿರುತ್ತದೆ.

ಆದ್ದರಿಂದ ತ್ರಿಜ್ಯ $= \sqrt{\frac{25}{4} + 49 + 5 + 28 + 1} = \sqrt{\frac{357}{4}}$

ಆದ್ದರಿಂದ ವೃತ್ತದ ಸಮೀಕರಣವು

$$(x - 5/2)^2 + (y - 7)^2 = \frac{357}{4}$$

ಅಥವಾ $x^2 + y^2 - 5x - 14y + \frac{25}{4} + 49 = \frac{357}{4}$

ಅಥವಾ $x^2 + y^2 - 5x - 14y - 34 = 0$ ಎಂದಾಗುತ್ತದೆ.

## ಅಭ್ಯಾಸ – 6.5

1. $x^2+y^2-8x-6y+21=0$ ಮತ್ತು $x^2+y^2-2y-15=0$ ವೃತ್ತಗಳು ಲಂಬವಾಗಿ ಛೇಧಿಸುತ್ತವೆಯೆಂದು ತೋರಿಸಿ.

2. ಕೆಳಗೆ ಸೂಚಿಸಿರುವ ವೃತ್ತಗಳನ್ನು ಲಂಬವಾಗಿ ಛೇದಿಸುವ ವೃತ್ತದ ಸಮೀಕರಣ ವನ್ನು ಕಂಡುಹಿಡಿಯಿರಿ:

   (i) $x^2+y^2+5x-2y+4=0$

   (ii) $x^2+y^2+2x+4y+1=0$

   (iii) $x^2+y^2+4x+4y-1=0$

3. ಮೂಲಬಿಂದುವಿನಲ್ಲಿ ಕೇಂದ್ರವುಳ್ಳ ಮತ್ತು $x^2+y^2-8y+12=0$ ಹಾಗೂ $x^2+y^2-4x-6y-3=0$ ವೃತ್ತಗಳನ್ನು ಲಂಬವಾಗಿ ಛೇದಿಸುವ ವೃತ್ತದ ಸಮೀಕರಣವನ್ನು ಕಂಡುಹಿಡಿಯಿರಿ.

4. (2, 3) ಮತ್ತು (5, 6) ಬಿಂದುಗಳಲ್ಲಿ ಕೇಂದ್ರಗಳುಳ್ಳ ಮತ್ತು ಒಂದಕ್ಕೊಂದು ಲಂಬವಾಗಿ ಛೇದಿಸುವ ಎರಡು ವೃತ್ತಗಳ ಸಮೀಕರಣಗಳನ್ನು ಕಂಡುಹಿಡಿಯಿರಿ.

5. $x^2+y^2-6y+1=0$ ಮತ್ತು $x^2+y^2-4y+1=0$ ವೃತ್ತಗಳನ್ನು ಲಂಬವಾಗಿ ಛೇದಿಸುವ ಮತ್ತು $3x+4y+5=0$ ಸರಳರೇಖೆಯನ್ನು ಸ್ಪರ್ಶಿಸುವ ಎರಡು ವೃತ್ತಗಳನ್ನು ಕಂಡುಹಿಡಿಯಿರಿ.

6. $x^2+y^2+2x-2y-2=0$ ಮತ್ತು $x^2+y^2+6x-4y+4=0$ ವೃತ್ತಗಳನ್ನು ಲಂಬವಾಗಿ ಛೇದಿಸುವ ಮತ್ತು $4x-3y+3=0$ ಸರಳರೇಖೆಯ ಮೇಲೆ ಕೇಂದ್ರಬಿಂದುವುಳ್ಳ ವೃತ್ತದ ಸಮೀಕರಣವನ್ನು ಕಂಡುಹಿಡಿಯಿರಿ.

7. $x^2+y^2+4x+6y+7=0$ ವೃತ್ತವನ್ನು ಲಂಬವಾಗಿ ಛೇದಿಸುವ ಮತ್ತು ಕೇಂದ್ರವು (3, 4) ಆಗಿರುವ ವೃತ್ತದ ಸಮೀಕರಣವನ್ನು ಕಂಡುಹಿಡಿಯಿರಿ.

8. $x^2+y^2+2g_1x+2f_1y+c_1=0$ ಮತ್ತು $x^2+y^2+2g_2x+2f_2y+c_2=0$ ವೃತ್ತಗಳನ್ನು ಲಂಬವಾಗಿ ಛೇದಿಸುವ ವೃತ್ತದ ಕೇಂದ್ರ ಬಿಂದುವಿನ ಬಿಂದುಪಥವನ್ನು ಕಂಡುಹಿಡಿಯಿರಿ.

### 6.6.1 ಸಹಮೂಲಾಕ್ಷ ವೃತ್ತಗಳ ವ್ಯವಸ್ಥೆ

ವೃತ್ತಗಳ ಒಂದು ವ್ಯವಸ್ಥೆಯಲ್ಲಿ ಪ್ರತಿಯೊಂದು ಜೊತೆ ವೃತ್ತಗಳ ಮೂಲಾಕ್ಷವು ಒಂದೇ ಆಗಿದ್ದಲ್ಲಿ, ಅಂತಹ ವ್ಯವಸ್ಥೆಯನ್ನು *ಸಹಮೂಲಾಕ್ಷ ವ್ಯವಸ್ಥೆ* (ಕೋಆಕ್ಸಿಯಲ್ ಸಿಸ್ಟಂ) ಎಂದು ಕರೆಯುತ್ತೇವೆ.

$S_1 = 0$ ಮತ್ತು $S_2 = 0$ ಎರಡು ವೃತ್ತಗಳನ್ನು ಪ್ರತಿನಿಧಿಸಿದರೆ $S_1+\lambda_1 S_2=0$ ಮತ್ತು $S_1+\lambda_2 S_2=0$ ವ್ಯವಸ್ಥೆಯ ಎರಡು ನಿರ್ದಿಷ್ಟ ವೃತ್ತಗಳನ್ನು ಪ್ರತಿನಿಧಿಸಲಿ ಮತ್ತು $\lambda_1 \neq -1$, $\lambda_2 \neq -1$ ಹಾಗೂ $\lambda_1 \neq \lambda_2$ ಇರಲಿ.

ಈ ಸಮೀಕರಣಗಳನ್ನು ಪ್ರಮಾಣಕ ರೂಪದಲ್ಲಿ ಬರೆದಾಗ

$$\frac{S_1+\lambda_1 S_2}{1+\lambda_1} = 0 \quad \text{ಮತ್ತು} \quad \frac{S_1+\lambda_2 S_2}{1+\lambda_2} = 0$$

ಎಂದಾಗುತ್ತದೆ. ಆದ್ದರಿಂದ ಈ ವೃತ್ತಗಳ ಮೂಲಾಕ್ಷವು

$$\frac{S_1+\lambda_1 S_2}{1+\lambda_1} - \frac{S_1+\lambda_2 S_2}{1+\lambda_2} = 0$$

ಅಥವಾ $(\lambda_2-\lambda_1)(S_1-S_2) = 0$

ಆದರೆ, $\lambda_2-\lambda_1 \neq 0$ ಆಗಿರುವುದರಿಂದ $S_1-S_2 = 0$ ಎಂದಾಗುತ್ತದೆ.

ಆದ್ದರಿಂದ, ವ್ಯವಸ್ಥೆಯ ಯಾವುದೇ ಎರಡು ನಿರ್ದಿಷ್ಟ ವೃತ್ತಗಳು ಒಂದೇ ಮೂಲಾಕ್ಷವನ್ನು ಹೊಂದಿರುತ್ತವೆ ಎಂಬುದು ನಿರೂಪಿತವಾಗಿದೆ.

**ಸೂಚನೆ :** ಯಾವುದೇ ಎರಡು ವೃತ್ತಗಳ ಮೂಲಾಕ್ಷವು ಅವುಗಳ ಕೇಂದ್ರ ಬಿಂದುಗಳನ್ನು ಸೇರಿಸುವ ಸರಳರೇಖೆಗೆ ಲಂಬವಾಗಿರುವುದರಿಂದ ಮತ್ತು ಇದು ಎಲ್ಲ ಜೊತೆ ವೃತ್ತಗಳಿಗೆ ಅನ್ವಯವಾಗುವುದರಿಂದ ಎಲ್ಲ ಸಹಮೂಲಾಕ್ಷ ವೃತ್ತಗಳ ಕೇಂದ್ರ ಬಿಂದುಗಳು ಏಕರೇಖಸ್ಥವಾಗಿರುತ್ತವೆ.

### 6.6.2 ಸಹಮೂಲಾಕ್ಷ ವೃತ್ತಗಳ ವ್ಯವಸ್ಥೆಯ ಸಮೀಕರಣ

ಎರಡು ವೃತ್ತಗಳ ಕೇಂದ್ರಬಿಂದುಗಳು $x$–ಅಕ್ಷದ ಮೇಲಿರಲಿ. $y$–ಅಕ್ಷವು ವೃತ್ತಗಳ ಮೂಲಾಕ್ಷವಾಗಿರಲಿ.

ಸಹಮೂಲಾಕ್ಷದ ವೃತ್ತವೊಂದರ ಸಮೀಕರಣವು ($f$=0 ಆಗಿರುವುದರಿಂದ)

$x^2+y^2+2gx+c=0$ ಎಂದು ಪರಿಗಣಿಸೋಣ.

ಸಹಮೂಲಾಕ್ಷ ವ್ಯವಸ್ಥೆಯ ಯಾವುದೇ ಎರಡು ವೃತ್ತಗಳ ಸಮೀಕರಣಗಳು

$x^2+y^2+2g_1x+c_1=0$

ಮತ್ತು $x^2+y^2+2g_2x+c_2=0$

ಎಂದಿರಲಿ. ಆಗ ಅವುಗಳ ಮೂಲಾಕ್ಷವು

$2x(g_1-g_2)+c_1-c_2=0$

ಎಂದಾಗುವುದು. ಆದರೆ ಪ್ರಕಲ್ಪನೆಗನುಗುಣವಾಗಿ ಮೂಲಾಕ್ಷವು $x=0$ ಎಂದಿದೆ.

ಆದ್ದರಿಂದ $c_1-c_2=0$

ಅಥವಾ $c_1=c_2$ ಆಗುತ್ತದೆ.

ಆದ್ದರಿಂದ ***ಸಹಮೂಲಾಕ್ಷ ವೃತ್ತಗಳ ವ್ಯವಸ್ಥೆ***ಯ ಸಮೀಕರಣವು

$$\boxed{x^2+y^2+2gx+c=0}$$

ಎಂದು ಪರಿಗಣಿಸಲಾಗುವುದು. ಈ ಸಮೀಕರಣದಲ್ಲಿ '$g$'ಯು ಚರ ಮತ್ತು '$c$' ಯು ಸ್ಥಿರ ಆಗಿರುತ್ತವೆ.

**ಸೂಚನೆ :** $U\equiv lx+my+n=0$ ಮೂಲಾಕ್ಷವಾಗಿಯೂ $S\equiv x^2+y^2+2gx+2fy+c=0$ ಸಹ ಮೂಲಾಕ್ಷ ವ್ಯವಸ್ಥೆಯ ಯಾವುದೇ ಒಂದು ವೃತ್ತವಾದಲ್ಲಿ, ಸಹಮೂಲಾಕ್ಷ ವ್ಯವಸ್ಥೆಯ ಸಮೀಕರಣವು $S+\lambda U=0$ ಎಂದಾಗುವುದು.

### 6.6.3 ಸಹಮೂಲಾಕ್ಷ ವೃತ್ತಗಳ ವ್ಯವಸ್ಥೆಯ ಮಿತಿ ಬಿಂದುಗಳು

$x^2+y^2+2\lambda x+c=0$

ಸಮೀಕರಣವು λದ ವಿವಿಧ ಬೆಲೆಗಳಿಗೆ ಒಂದು ಸಹಮೂಲಾಕ್ಷ ವೃತ್ತಗಳ ವ್ಯವಸ್ಥೆಯನ್ನು ಪ್ರತಿನಿಧಿಸುತ್ತದೆ.

ಈಗ, $\lambda = \pm\sqrt{c}$ ಆದಾಗ ವ್ಯವಸ್ಥೆಯ ಎರಡು ವೃತ್ತಗಳ ಸಮೀಕರಣಗಳು

$x^2+y^2+2\sqrt{c}\,x+c=0$ ಮತ್ತು $x^2+y^2-2\sqrt{c}\,x+c=0$ ಎಂದಾಗುತ್ತವೆ.

ಈ ಸಮೀಕರಣಗಳನ್ನು

$$(x+\sqrt{c})^2+y^2 = 0$$

ಹಾಗೂ $(x-\sqrt{c})^2+y^2 = 0$

ಎಂದು ಬರೆಯಬಹುದು. ಈ ವೃತ್ತಗಳ ತ್ರಿಜ್ಯವು ಶೂನ್ಯವೆಂದು ಮತ್ತು ವೃತ್ತಗಳ ಕೇಂದ್ರಬಿಂದುಗಳು **$(-\sqrt{c}, 0)$** ಮತ್ತು **$(\sqrt{c}, 0)$** ಎಂಬುದನ್ನು ಗಮನಿಸಬಹುದು.

ಈ ಕೇಂದ್ರಬಿಂದುಗಳನ್ನು ಸಹಮೂಲಾಕ್ಷ ವೃತ್ತಗಳ ವ್ಯವಸ್ಥೆಯ *ಮಿತಿ ಬಿಂದುಗಳೆಂದು* ಕರೆಯುತ್ತೇವೆ.

**ಸೂಚನೆ:** (i) '$c$'ಯು ಧನಾತ್ಮಕವಾಗಿದ್ದಲ್ಲಿ ಮಿತಿ ಬಿಂದುಗಳು ನೈಜವಾಗಿರುತ್ತವೆ, ಹಾಗೂ ವೃತ್ತಗಳು ಛೇದಿಸುವುದಿಲ್ಲ.

(ii) '$c$' ಯು ಋಣಾತ್ಮಕವಾಗಿದ್ದಲ್ಲಿ ಮಿತಿ ಬಿಂದುಗಳು ಊಹ್ಯವಾಗಿರುತ್ತವೆ ಮತ್ತು ವೃತ್ತಗಳು ಛೇದಿಸುತ್ತವೆ.

### 6.6.4 ಲಂಬ ಸಹಮೂಲಾಕ್ಷ ವ್ಯವಸ್ಥೆ

ಒಂದು ಸಹಮೂಲಾಕ್ಷ ವ್ಯವಸ್ಥೆಯ ವೃತ್ತಗಳನ್ನು ಲಂಬವಾಗಿ ಛೇದಿಸುವ ವೃತ್ತದ ಸಮೀಕರಣವನ್ನು ಕಂಡುಹಿಡಿಯೋಣ.

ಸಹಮೂಲಾಕ್ಷ ವ್ಯವಸ್ಥೆಯ ವೃತ್ತಗಳ ಕೇಂದ್ರಗಳುಳ್ಳ ಸರಳರೇಖೆಯು

$x$-ಅಕ್ಷವಾಗಿರಲಿ ಮತ್ತು ಅವುಗಳ ಮೂಲಾಕ್ಷವು $y$–ಅಕ್ಷವಾಗಿರಲಿ.

ಆಗ ಸಹಮೂಲಾಕ್ಷ ವ್ಯವಸ್ಥೆಯ ಸಮೀಕರಣವು

$$x^2+y^2+2\lambda x+c=0 \qquad \dots (1)$$

ಎಂದಾಗುತ್ತದೆ. ಈ ವೃತ್ತಗಳನ್ನು ಲಂಬವಾಗಿ ಛೇದಿಸುವ ವೃತ್ತದ ಸಮೀಕರಣವು

$$x^2+y^2+2gx+2fy+k=0 \qquad \dots (2)$$

ಆಗಿರಲಿ. ಆಗ ಲಂಬವೃತ್ತಗಳ ನಿಬಂಧನೆಗೆ ಒಳಪಡಿಸಿದಾಗ

$$2\lambda g = c+k$$

ಎಂದಾಗುತ್ತದೆ. ಇದು λದ ಎಲ್ಲ ಬೆಲೆಗಳಿಗೆ ಅನ್ವಯವಾಗುತ್ತದೆ.

$\lambda_1$ ಮತ್ತು $\lambda_2$ ಎರಡು ನಿರ್ದಿಷ್ಟ ಬೆಲೆಗಳಾಗಿರಲಿ. ಆಗ

$$2\lambda_1 g = c+k$$

ಮತ್ತು $2\lambda_2 g = c+k$

ಅಥವಾ $2(\lambda_1-\lambda_2)\, g=0$

ಆದರೆ, $\lambda_1 \neq \lambda_2$ ಆಗಿರುವುದರಿಂದ $g=0$ ಮತ್ತು $k=-c$ ಎಂದಾಗುತ್ತದೆ.

ಈಗ ಸಹಮೂಲಾಕ್ಷ ವ್ಯವಸ್ಥೆಯ ವೃತ್ತಗಳನ್ನು ಲಂಬವಾಗಿ ಛೇದಿಸುವ ವೃತ್ತದ ಸಮೀಕರಣವನ್ನು ($g=0$ ಆಗಿರುವುದರಿಂದ)

$$x^2+y^2+2fy-c=0 \qquad \text{... (3)}$$

ಎಂದು ಪರಗಣಿಸಲಾಗುವುದು.

ಸೂಚನೆ : (i) ಸಮೀಕರಣ (3) ರಿಂದ $f$ನ ಬೇರೆ ಬೇರೆ ಬೆಲೆಗಳಿಗೆ ಒಂದು ಸಹಮೂಲಾಕ್ಷ ವ್ಯವಸ್ಥೆ (1) ರ ವೃತ್ತಗಳನ್ನು ಲಂಬವಾಗಿ ಛೇದಿಸುವ ಇನ್ನೊಂದು ಸಹಮೂಲಾಕ್ಷ ವೃತ್ತಗಳ ವ್ಯವಸ್ಥೆಯು ಲಭಿಸುತ್ತದೆ.

(ii) ಲಂಬ ಸಹಮೂಲಾಕ್ಷ ವ್ಯವಸ್ಥೆ (3) ರ ಮಿತಿ ಬಿಂದುಗಳು $(0, \pm\sqrt{c})$ ಎಂದಾಗುತ್ತವೆ.

## ಉದಾಹರಣೆಗಳು

1. $x^2+y^2+2x+4y+7=0$ ಮತ್ತು $x^2+y^2+4x+2y+5=0$ ವೃತ್ತಗಳಿಂದ ನಿರ್ಮಿತವಾದ ಸಹಮೂಲಾಕ್ಷ ವೃತ್ತಗಳ ವ್ಯವಸ್ಥೆಯ ಮಿತಿ ಬಿಂದುಗಳನ್ನು ಕಂಡುಹಿಡಿಯಿರಿ.

ಮೂಲಾಕ್ಷ ಸಮೀಕರಣವು [$S_1-S_2=0$ ಪ್ರಯೋಗದಿಂದ]

$$U \equiv x-y-1=0$$

ಆಗ ಸಹಮೂಲಾಕ್ಷ ವೃತ್ತಗಳ ವ್ಯವಸ್ಥೆಯನ್ನು ಪ್ರತಿನಿಧಿಸುವ ಸಮೀಕರಣವು

$$x^2+y^2+4x+2y+5+\lambda(x-y-1)=0 \quad [S+\lambda U=0]$$

ಎಂದಾಗುತ್ತದೆ. ಈ ವೃತ್ತದ ತ್ರಿಜ್ಯವು

$$\sqrt{\left[\frac{(4+\lambda)}{2}\right]^2+\left[\frac{(2-\lambda)}{2}\right]^2-(5-\lambda)}$$

ಎಂದಾಗುತ್ತದೆ. ಇದನ್ನು ಸರಳೀಕರಿಸಿದಾಗ

$$\text{ತ್ರಿಜ್ಯ} = \tfrac{1}{2}\sqrt{2\lambda^2+8\lambda}$$

ಈ ತ್ರಿಜ್ಯವು, $\lambda=0$ ಅಥವಾ $\lambda=-4$ ಆದಾಗ ಶೂನ್ಯವಾಗುವುದು.

ಮಿತಿ ಬಿಂದುಗಳು ಶೂನ್ಯತ್ರಿಜ್ಯವುಳ್ಳ ವೃತ್ತಗಳ ಕೇಂದ್ರಬಿಂದುಗಳು ಆಗಿರುವುದರಿಂದ

ಮಿತಿ ಬಿಂದುಗಳು $\equiv \left[\dfrac{-(4+\lambda)}{2}, \ -\dfrac{(2-\lambda)}{2}\right]$

ಅಂದರೆ, (–2, –1) ಮತ್ತು (0, –3) ಎಂದಾಗುತ್ತವೆ.

2. $x^2+y^2+4x+3=0$, $x^2+y^2-6x+5=0$ ವೃತ್ತಗಳಿಗೆ ಬಿಂದುವೊಂದರಿಂದ ಎಳೆಯಲ್ಪಟ್ಟ ಸ್ಪರ್ಶಕಗಳ ಉದ್ದಗಳ ನಿಷ್ಪತ್ತಿಯು $m:n$ ಆದರೆ, ಆ ಬಿಂದುವಿನ ಬಿಂದು ಪಥವು ಸಹಮೂಲಾಕ್ಷ ವೃತ್ತಗಳ ವ್ಯವಸ್ಥೆಯನ್ನು ಪ್ರತಿನಿಧಿಸುತ್ತದೆ ಎಂದು ಸಾಧಿಸಿ.

$P(x_1, y_1)$ ಬಿಂದುವಿನಿಂದ ಕೊಟ್ಟಿರುವ ವೃತ್ತಗಳಿಗೆ ಎಳೆಯಲ್ಪಟ್ಟ ಸ್ಪರ್ಶಕಗಳ ಉದ್ದಗಳು $t_1$ ಮತ್ತು $t_2$ ಆಗಿರಲಿ.

ಅಂದರೆ, $t_1^2 = x_1^2+y_1^2+4x_1+3$

ಮತ್ತು $t_2^2 = x_1^2+y_1^2-6x_1+5$

ಆದರೆ ದತ್ತ ಮೂಲಗಳಿಂದ $t_1$ ಮತ್ತು $t_2$ಗಳ ಪ್ರಮಾಣ

$$\frac{t_1}{t_2} = \frac{m}{n}$$

ಅಥವಾ $t_1^2 - \dfrac{m^2}{n^2} t_2^2 = 0$ ಆಗುವುದು.

ಅಂದರೆ, $x_1^2 + y_1^2 + 4x_1 + 3 - \dfrac{m^2}{n^2}(x_1^2 + y_1^2 - 6x_1 + 5) = 0$

ಈ ಸಮೀಕರಣವು $P(x_1,y_1)$ ಬಿಂದುವಿನ ಬಿಂದುಪಥವನ್ನು ಮತ್ತು ಇದು $S_1+\lambda S_2=0$ ಎಂಬ ರೂಪದಲ್ಲಿರುವುದರಿಂದ ಇದು ಸಹಮೂಲಾಕ್ಷ ವೃತ್ತಗಳ ವ್ಯವಸ್ಥೆಯನ್ನು ಪ್ರತಿನಿಧಿಸುತ್ತದೆ. ಆ ಕಾರಣ ಮೇಲಿನ ಸಮೀಕರಣವನ್ನು ಸಾಮಾನ್ಯರೂಪದಲ್ಲಿ ಅಂದರೆ,

$$x^2 + y^2 + 4x + 3 - \frac{m^2}{n^2}(x^2 + y^2 - 6x + 5) = 0$$

ಎಂದು ಬರೆಯಬಹುದು.

# ಅಭ್ಯಾಸ - 6.6

1. $x^2+y^2-2x-4y-4=0$ ಮತ್ತು $x^2+y^2+10x+12y+45=0$ ವೃತ್ತಗಳಿಗೆ ಬಿಂದುವೊಂದರಿಂದ ಎಳೆಯಲ್ಪಟ್ಟ ಸ್ಪರ್ಶಕಗಳ ಉದ್ದಗಳ ಪ್ರಮಾಣವು 3:4 ಆದರೆ, ಆ ಬಿಂದುವಿನ ಬಿಂದುಪಥವು ಒಂದು ವೃತ್ತವನ್ನು ಪ್ರತಿನಿಧಿಸುತ್ತದೆ ಎಂದು ಸಾಧಿಸಿ.

2. ಕೆಳಗೆ ಸೂಚಿಸಿರುವ ವೃತ್ತಗಳಿಂದ ನಿರ್ಮಿತವಾದ ಸಹಮೂಲಾಕ್ಷ ವ್ಯವಸ್ಥೆಯ ಮಿತಿ ಬಿಂದುಗಳನ್ನು ಕಂಡುಹಿಡಿಯಿರಿ.

   (i) $x^2+y^2-6x-6y+4=0$ ಮತ್ತು $x^2+y^2-2x-4y+3=0$

   (ii) $x^2+y^2+2x-6y=0$ ಮತ್ತು $2x^2+2y^2-10y+5=0$

   (iii) $x^2+y^2+x-5y+9=0$ ಮತ್ತು $x^2+y^2-8x-2y-3=0$

3. ಸಹಮೂಲಾಕ್ಷ ವ್ಯವಸ್ಥೆಯ ಮಿತಿ ಬಿಂದುವೊಂದು (2, 1) ಆಗಿದ್ದು, ಮತ್ತು ವೃತ್ತವೊಂದರ ಸಮೀಕರಣವು $x^2+y^2-6x-4y-3=0$ ಆದರೆ ಮೂಲಾಕ್ಷದ ಸಮೀಕರಣ ಮತ್ತು ಉಳಿದ ಮಿತಿ ಬಿಂದುವಿನ ನಿರ್ದೇಶಕಗಳನ್ನು ಕಂಡುಹಿಡಿಯಿರಿ.

4. $(x-1)^2+(y-2)^2+\lambda(x^2+y^2+2x+5)=0$ ವ್ಯವಸ್ಥೆಯ ಮಿತಿ ಬಿಂದುಗಳಲ್ಲಿ ಒಂದು (1, 2) ಎಂದು ಸಾಧಿಸಿ ಮತ್ತು ಇನ್ನೊಂದು ಮಿತಿ ಬಿಂದುವನ್ನು ಕಂಡುಹಿಡಿಯಿರಿ.

# ಅಧ್ಯಾಯ - 7

# ಶಂಕುಜಗಳು

## 7.1 ಶಂಕುಜಗಳ ವ್ಯಾಖ್ಯೆ

ಒಂದು ಪೊಳ್ಳಾದ ಲಂಬವೃತ್ತೀಯ ಶಂಕುವನ್ನು ಸಮತಲವೊಂದರಿಂದ ಕತ್ತರಿಸಿದಾಗ ಬರುವ ವಕ್ರರೇಖೆಗಳನ್ನು ಶಂಕುಜಗಳೆಂದು ಕರೆಯುತ್ತೇವೆ. ಸಮತಲವು ಶಂಕುವಿನ ಅಕ್ಷಕ್ಕೆ ಲಂಬವಾಗಿದ್ದರೆ ಶಂಕುಜವನ್ನು ವೃತ್ತವೆಂದು ಕರೆಯುತ್ತೇವೆ. ಶಂಕುವಿನ ಅಕ್ಷದೊಂದಿಗಿನ ಸಮತಲದ ಬಾಗುವನ್ನು ಬದಲಾಯಿಸುವ ಮೂಲಕ ವಿವಿಧ ಶಂಕುಜ ವಕ್ರರೇಖೆಗಳನ್ನು ಪಡೆಯಬಹುದು. ಅವುಗಳನ್ನು *ಪೆರಾಬೋಲಾ, ದೀರ್ಘವೃತ್ತ* (ಎಲಿಪ್ಸ್) ಮತ್ತು *ಹೈಪರ್‌ಬೋಲಾ* ಎಂದು ವರ್ಗೀಕರಿಸಲಾಗಿದೆ.

ನಿರ್ದೇಶಕ ರೇಖಾಗಣಿತದ ಪ್ರಕಾರ ಶಂಕುಜವನ್ನು, ಚಲಿಸುವ ಬಿಂದುವಿನ ಒಂದು ನಿರ್ದಿಷ್ಟ ಬಿಂದುವಿನಿಂದ ಇರುವ ದೂರ ಮತ್ತು ಒಂದು ನಿರ್ದಿಷ್ಟ ಸರಳರೇಖೆಯಿಂದ ಇರುವ ದೂರದ ನಿಷ್ಪತ್ತಿಯು ಸ್ಥಿರವಾಗಿ ಹೊಂದಿರುವ ಬಿಂದುವಿನ ಬಿಂದು ಪಥವೆಂದು ಪರಿಗಣಿಸಲಾಗುವುದು.

ನಿರ್ದಿಷ್ಟ ಬಿಂದುವನ್ನು *ನಾಭಿ* ಎಂದು ಕರೆಯುತ್ತೇವೆ ಮತ್ತು ನಿರ್ದಿಷ್ಟ ಸರಳ ರೇಖೆಯನ್ನು ಚಾಲಕ (ಡೈರೆಕ್ಟ್ರಿಕ್ಸ್) ವೆಂದು ಕರೆಯುತ್ತೆವೆ. ಸ್ಥಿರ ನಿಷ್ಪತ್ತಿಯನ್ನು ಉತ್ಕೇಂದ್ರತೆ ಎಂದು ಕರೆಯುತ್ತೇವೆ.

$P$ ಯಾವುದೆ ಚಲಿಸುವ ಬಿಂದುವಾಗಿರಲಿ.

$S$ ಅನ್ನು ನಾಭಿಯಾಗಿಯೂ, $d$ ಅನ್ನು ಚಾಲಕ ವೆಂದೂ ಪರಿಗಣಿಸೋಣ (ಚಿತ್ರ 7.1).

$PM$ ಚಾಲಕಕ್ಕೆ ಲಂಬವಾಗಿ ಎಳೆಯಲ್ಪಡಲಿ. ಶಂಕುಜದ ವ್ಯಾಖ್ಯೆಯಂತೆ,

$$\frac{SP}{PM} = e$$




ಚಿತ್ರ 7.1

'$e$' ಅನ್ನು ಉತ್ಕೇಂದ್ರತೆ (ಎಕ್ಸೆಂಟ್ರಿಸಿಟಿ) ಎಂದು ಪರಿಗಣಿಸಲಾಗುತ್ತದೆ.

$e=1$ ಆದಾಗ, ಶಂಕುಜವನ್ನು *ಪೆರಾಬೋಲಾ*ವೆಂದು,

$e<1$ ಆದಾಗ, ಶಂಕುಜವನ್ನು *ದೀರ್ಘವೃತ್ತ*ವೆಂದು

$e>1$ ಆದಾಗ ಶಂಕುಜವನ್ನು *ಹೈಪರ್‌ಬೋಲಾ*ವೆಂದು ಪರಿಗಣಿಸಲಾಗುವುದು.

### 7.2.1 ಪೆರಾಬೊಲಾದ ಪ್ರಮಾಣಪೂರ್ಣ ಸಮೀಕರಣ

ಯಾವ ಶಂಕುಜದ ಉತ್ಕೇಂದ್ರತೆ 1 ಆಗಿರುತ್ತದೆಯೋ ಅಂತಹ ಶಂಕುಜವನ್ನು ಪೆರಾಬೊಲಾವೆಂದು ಕರೆಯುತ್ತೇವೆ.

$P(x, y)$ ಎಂಬುದು ಸಮತಲದಲ್ಲಿನ ಯಾವುದೇ ಬಿಂದುವಾಗಿರಲಿ. ಈ ಬಿಂದುವು $d$ ಚಾಲಕದಿಂದಲೂ, $S$ ನಾಭಿಯಿಂದಲೂ ಸಮದೂರದಲ್ಲಿ ಚಲಿಸುತ್ತದೆ.

$PM$ ಅನ್ನು ಚಾಲಕಕ್ಕೆ ಲಂಬವಾಗಿ ಎಳೆಯಲ್ಪಡಲಿ. $S$ ಮುಖಾಂತರ $SZ$




ಚಿತ್ರ 7.2

ಸರಳರೇಖೆಯನ್ನು ಚಾಲಕಕ್ಕೆ ಲಂಬವಾಗಿ ಎಳೆಯಿರಿ. $SZ = a$ ಎಂದಿರಲಿ. $A$ ಎಂಬುದು $SZ$ನ ಮಧ್ಯಬಿಂದುವಾಗಿರಲಿ. ಆಗ $SA = AZ = a$ ಎಂದಾಗುತ್ತದೆ (ಚಿತ್ರ 7.2).

$A$ ಅನ್ನು ಮೂಲ ಬಿಂದುವಾಗಿಟ್ಟುಕೊಂಡು $AX$ ಮತ್ತು $AY$ ಅಕ್ಷಗಳು ಎಳೆಯಿರಿ. ಆಗ, $AX$ ಅನ್ನು $x$–ಅಕ್ಷವೆಂದು, $AY$ ಅನ್ನು $y$–ಅಕ್ಷವೆಂದು ಪರಿಗಣಿಸಲಾಗುವುದು. $P$ ಯಿಂದ $PN$ ಅನ್ನು $x$–ಅಕ್ಷಕ್ಕೆ ಲಂಬವಾಗಿ ಎಳೆಯಿರಿ. $A$ನ ನಿರ್ದೇಶಕಗಳು $(0, 0)$ ಮತ್ತು ನಾಭಿ $S$ ಬಿಂದುವು $x$–ಅಕ್ಷದ ಮೇಲಿರುವುದರಿಂದ, ಅದರ ನಿರ್ದೇಶಕಗಳು $(a, 0)$ ಎಂದಾಗುತ್ತದೆ.

ಪೆರಾಬೊಲಾದ ವ್ಯಾಖ್ಯೆಯಂತೆ $P$ ಬಿಂದುವಿನ ಬಿಂದುಪಥದ ನಿಬಂಧನೆ

$$SP = PM$$

ಅಥವಾ $SP^2 = PM^2$

$$\text{ಅಂದರೆ, } (x-a)^2+y^2 = (x+a)^2$$

$$\text{ಅಥವಾ } x^2+a^2-2ax+y^2 = x^2+a^2+2ax$$

$$\text{ಅಥವಾ } \boxed{y^2 = 4ax}$$

ಎಂದಾಗುತ್ತದೆ. ಇದು ಪೆರಾಬೊಲಾದ ಪ್ರಮಾಣಪೂರ್ಣ ಸಮೀಕರಣ.

### 7.2.2 ಪೆರಾಬೊಲಾ $y^2 = 4ax$ ನ ಲಾಕ್ಷಣಿಕಗಳು

1. $x$ ಮತ್ತು $y$ಗಳಿಗೆ ವಿವಿಧ ಬೆಲೆಗಳಿಗನುಗುಣವಾಗಿ ಈ ಸಮೀಕರಣವು ಬಲಗಡೆಗೆ ಮುಚ್ಚಿರದ ಅನಂತ ವಕ್ರರೇಖೆಯನ್ನು ಚಿತ್ರಿಸುವುದು.

2. $AX$ ಅನ್ನು ಪೆರಾಬೊಲಾದ ಅಕ್ಷವೆಂದು ಪರಿಗಣಿಸಲಾಗುವುದು.

3. ಈ ವಕ್ರರೇಖೆಯು $x$–ಅಕ್ಷದ ಎರಡೂ ಬದಿಯಲ್ಲಿ ಸಮಾಂಗವಾಗಿರುವುದು.

4. ಚಿತ್ರ 7.2ರಲ್ಲಿ $A$ ಬಿಂದುವನ್ನು *ಶೃಂಗ*ವೆಂದು ಕರೆಯಲಾಗುವುದು ಮತ್ತು ಅದರ ನಿರ್ದೇಶಕಗಳು (0, 0) ಆಗಿರುತ್ತದೆ.

5. $S$ ನಾಭಿಯು $x$–ಅಕ್ಷದ ಮೇಲಿರುವುದರಿಂದ ಅದರ ನಿರ್ದೇಶಕಗಳು $(a, 0)$ ಆಗುತ್ತದೆ.

6. $d$ ಚಾಲಕದ ಸಮೀಕರಣವು $x=-a$ ಎಂದಾಗುವುದು.

### 7.2.3 ನಾಭಿಲಂಬದ ಉದ್ದ

ಪೆರಾಬೊಲಾದ ನಾಭಿ ಮೂಲಕ $x$–ಅಕ್ಷಕ್ಕೆ ಲಂಬವಾಗಿ ಎಳೆಯಲ್ಪಟ್ಟ ಜ್ಯಾ ಅನ್ನು *ನಾಭಿಲಂಬ* (ಲ್ಯಾಟಸ್ ರೆಕ್ಟಂ) ಎಂದು ಕರೆಯುತ್ತೇವೆ.

ಚಿತ್ರ 7.3 ರಲ್ಲಿ $LSL'$ ನಾಭಿಲಂಬವನ್ನು ಪ್ರತಿನಿಧಿಸುತ್ತದೆ.

$L$ ಮತ್ತು $L'$ ಪೆರಾಬೊಲಾದ ಮೇಲಿರುವ ಬಿಂದುಗಳಾದ್ದರಿಂದ ಅವುಗಳ ನಿರ್ದೇಶಕಗಳು ಕ್ರಮವಾಗಿ $(a, SL)$ ಮತ್ತು $(a, -SL)$ ಎಂದಾಗುವುದು.

$L(a, SL)$ ಬಿಂದುವು $y^2=4ax$ ಪೆರಾಬೊಲಾದ ಮೇಲಿರುವುದರಿಂದ $(SL)^2 = 4a.a$

ಅಥವಾ $SL= 2a$ ಆಗುವುದು.




ಚಿತ್ರ 7.3

ಆಗ ನಾಭಿಲಂಬ $LL' = 4a$ ಆಗುವುದು.

$L$ ಮತ್ತು $L'$ಗಳ ನಿರ್ದೇಶಕಗಳು ಕ್ರಮವಾಗಿ $(a, +2a)$ ಮತ್ತು $(a, -2a)$ ಎಂದಾಗುವುವು.

**ಸೂಚನೆ:** ನಾಭಿ $(a, 0)$ ಮತ್ತು $P(x, y)$ ಬಿಂದುವಿನ ನಡುವಿನ ಅಂತರವನ್ನು ನಾಭದೂರವೆಂದು ಕರೆಯುತ್ತೇವೆ. $P$ ಬಿಂದುವಿನ ನಾಭಿದೂರವನ್ನು $x+a$ ಎಂದು ಪರಿಗಣಿಸಲಾಗುವುದು.

## 7.2.4 ಪೆರಾಬೊಲಾದ ಇತರ ರೂಪಗಳು

| ಪೆರಾಬೊಲಾದ ಸಮೀಕರಣಗಳು | ಪೆರಾಬೊಲಾದ ಅಕ್ಷ | ಶೃಂಗದ ನಿರ್ದೇಶಕಗಳು | ಚಾಲಕದ ಸಮೀಕರಣ | ನಾಭಿ | ನಾಭಿ ಲಂಬದ ಎರಡು ತುದಿಗಳು | ನಾಭಿ ಲಂಬದ ಉದ್ದ |
|---|---|---|---|---|---|---|
| 1 $y^2=-4ax$ (ಚಿತ್ರ 7.4) | $y=0$ ($x$–ಅಕ್ಷ) | (0, 0) | $x=a$ | $(-a, 0)$ | $(-a, \pm 2a)$ | $4a$ |
| 2 $x^2=4ay$ (ಚಿತ್ರ 7.5) | $x=0$ ($y$–ಅಕ್ಷ) | (0, 0) | $y=-a$ | $(0, a)$ | $(\pm 2a, a)$ | $4a$ |
| 3. $x^2=-4ay$ (ಚಿತ್ರ 7.6) | $x=0$ ($y$–ಅಕ್ಷ) | (0, 0) | $y=a$ | $(0, -a)$ | $(\pm 2a, -a)$ | $4a$ |

1. $y^2 = -4ax$




ಚಿತ್ರ 7.4

2. $x^2 = 4ay$




ಚಿತ್ರ 7.5

3. $x^2=-4ay$




ಚಿತ್ರ 7.6

4. $(h,k)$ ಶೃಂಗವನ್ನುಳ್ಳ ಪೆರಾಬೋಲಾದ ಸಮೀಕರಣ

$(y-k)^2 = 4a(x-h)$




ಚಿತ್ರ 7.7

ಉದಾಹರಣೆಗಳು

1. ನಾಭಿಯು (1, –1) ಮತ್ತು ಚಾಲಕವು $x+y+7=0$ ಆಗಿರುವ ಪೆರಾಬೋಲಾದ ಸಮೀಕರಣವನ್ನು ಕಂಡುಹಿಡಿಯಿರಿ.

$P(x, y)$ ಪೆರಾಬೋಲಾದ ಮೇಲಿರುವ ಯಾವುದೇ ಬಿಂದುವಾಗಿರಲಿ ಮತ್ತು $S$ ನಾಭಿಯಾಗಿರಲಿ. $PM$ಅನ್ನು ಚಾಲಕಕ್ಕೆ ಲಂಬವಾಗಿ ಎಳೆಯಲ್ಪಟ್ಟಾಗ ಪೆರಾಬೋಲಾದ ವ್ಯಾಖ್ಯೆಯಿಂದ

$SP=PM$ ಅಥವಾ $SP^2=PM^2$

ಎಂಬುದು ತಿಳಿದಿದೆ.

ಅಂದರೆ, $(x-1)^2+(y+1)^2 = \left(\dfrac{x+y+7}{\sqrt{2}}\right)^2$

ಅಥವಾ $x^2+y^2-2x+2x+2y+2 = \left(\dfrac{x+y+7}{\sqrt{2}}\right)^2$

ಇದನ್ನು ಸರಳೀಕರಿಸಿದಾಗ ಪೆರಾಬೋಲಾದ ಸಮೀಕರಣವು

$x^2+y^2-18x-10y-45=0$

2. $y^2=ax+b$ ಪೆರಾಬೋಲಾದ ನಾಭಿ, ನಾಭಿಲಂಬದ ಉದ್ದ ಮತ್ತು ಚಾಲಕದ ಸಮೀಕರಣವನ್ನು ಕಂಡುಹಿಡಿಯಿರಿ.

$y^2=ax+b$ ಸಮೀಕರಣವನ್ನು

$y^2= a[x-(-b/a)]$

ಎಂಬ ಬರೆಯಬಹುದು. ಇದನ್ನು $(y-k)^2=4a(x-h)$

ಸಮೀಕರಣದೊಂದಿಗೆ ಹೋಲಿಸಿದಾಗ

ನಾಭಿಯು $\equiv \left(\dfrac{a^2-4b}{4a}, 0\right)$

ನಾಭಿಲಂಬದ ಉದ್ದ $= 4\left(\dfrac{a}{4}\right) = a$

ಚಾಲಕದ ಸಮೀಕರಣವು

$$x + \frac{b}{a} = \frac{a}{4}$$

ಅಥವಾ $4ax+a^2+4b=0$.

3. $y^2 = 8x$ ಪೆರಾಬೋಲಾದ ಮೇಲಿರುವ ಒಂದು ಬಿಂದುವಿನ ನಾಭಿದೂರ 8 ಆದರೆ, ಆ ಬಿಂದುವಿನ ನಿರ್ದೇಶಕಗಳನ್ನು ಕಂಡುಹಿಡಿಯಿರಿ.

ಬಿಂದುವಿನ ನಿರ್ದೇಶಕಗಳು $(x_1, y_1)$ ಎಂದಿರಲಿ.

$$y^2 = 8x$$

ಸಮೀಕರಣವನ್ನು $y^2 = 4ax$ ನೊಂದಿಗೆ ಹೋಲಿಸಿದಾಗ

$$4a=8 \therefore a=2$$

ಈಗ, ನಾಭಿದೂರ = 8

ಅಂದರೆ $x_1+a=8$

ಅಥವಾ $x_1 = 8-2=6$

$(x_1, y_1)$ ಬಿಂದುವು ಪೆರಾಬೋಲಾದ ಮೇಲಿರುವುದರಿಂದ

$$y_1^2 = 8(6)$$

ಅಥವಾ $y_1 = \pm 4\sqrt{3}$

ಆದ್ದರಿಂದ ಅಂತಹ ಬಿಂದುಗಳ ನಿರ್ದೇಶಕಗಳು $(6, \pm 4\sqrt{3})$

## ಅಭ್ಯಾಸ - 7.1

I ಕೆಳಗೆ ಸೂಚಿಸಿರುವ ಪೆರಾಬೊಲಾಗಳ ನಾಭಿ, ಶೃಂಗ, ನಾಭಿಲಂಬದ ಎರಡು ತುದಿಗಳು ಮತ್ತು ಚಾಲಕದ ಸಮೀಕರಣಗಳನ್ನು ಕಂಡುಹಿಡಿಯಿರಿ.

1. $y^2 = 20x$
2. $3x^2 + 2y = 0$
3. $y^2 = 4x - 2y + 3 = 0$

II 1. ಶೃಂಗವು (0, 0) ಮತ್ತು ಅಕ್ಷವು $y$–ಅಕ್ಷವೂ ಆಗಿದ್ದು (½, 2) ಮೂಲಕ ಹಾದು ಹೋಗುವ ಪೆರಾಬೊಲಾದ ಸಮೀಕರಣವನ್ನು ಕಂಡುಹಿಡಿಯಿರಿ.

2. ನಾಭಿಯು (3, –4) ಮತ್ತು ಚಾಲಕದ ಸಮೀಕರಣವು $x–y+5=0$ ಆಗಿರುವ ಪೆರಾಬೊಲಾದ ಸಮೀಕರಣವನ್ನು ಕಂಡುಹಿಡಿಯಿರಿ.

3. $y^2=8x$ ಪೆರಾಬೊಲಾದ ಮೇಲಿರುವ ಬಿಂದುವಿನ ನಾಭಿದೂರವು 4 ಆದರೆ ಆ ಬಿಂದುವಿನ ನಿರ್ದೇಶಕಗಳನ್ನು ಕಂಡುಹಿಡಿಯಿರಿ.

4. ನಾಭಿಲಂಬದ ಎರಡು ತುದಿಗಳು (6, 7) ಮತ್ತು (6, –1) ಆದರೆ ಪೆರಾಬೊಲಾದ ಸಮೀಕರಣವನ್ನು ಕಂಡುಹಿಡಿಯಿರಿ.

5. ಚಾಲಕದ ಸಮೀಕರಣವು $y=1$ ಮತ್ತು ಪೆರಾಬೊಲಾದ ಅಕ್ಷವು $x=1$ ಹಾಗೂ ನಾಭಿಲಂಬದ ಉದ್ದ 16 ಮಾನಗಳಷ್ಟಿರುವ ಪೆರಾಬೊಲಾದ ಸಮೀಕರಣವನ್ನು ಕಂಡುಹಿಡಿಯಿರಿ.

### 7.3.1 ದೀರ್ಘವೃತ್ತದ ಪ್ರಮಾಣಪೂರ್ಣ ಸಮೀಕರಣ

ಐಕ್ಯಕ್ಕಿಂತ ಕಡಿಮೆ ಇರುವ ಉತ್ಕೇಂದ್ರತೆಯನ್ನುಳ್ಳ ಶಂಕುಜವನ್ನು ದೀರ್ಘವೃತ್ತವೆಂದು ಕರೆಯುತ್ತೇವೆ.

$S$ ನಾಭಿಯು ಮತ್ತು $d_1$ ಚಾಲಕವಾಗಿರಲಿ ಹಾಗೂ $e$ ದೀರ್ಘವೃತ್ತದ ಉತ್ಕೇಂದ್ರತೆಯಾಗಿರಲಿ. $d_1$ ಚಾಲಕಕ್ಕೆ $SZ$ ಲಂಬವಾಗಿ ಎಳೆಯಿರಿ (ಚಿತ್ರ 7.8).




ಚಿತ್ರ 7.8

$SZ$ ಸರಳರೇಖೆಯು $A$ ಮತ್ತು $A'$ ಬಿಂದುಗಳಲ್ಲಿ ಕ್ರಮವಾಗಿ ಅಂತರೀಯವಾಗಿಯೂ ಮತ್ತು ಬಾಹ್ಯವಾಗಿಯೂ $e$:1 ನಿಷ್ಪತ್ತಿಯಿಂದ ವಿಭಜಿಸಲಿ. ಅಂದರೆ

$$\frac{SA}{AZ} = \frac{SA'}{A'Z} = \frac{e}{1} \qquad \ldots (1)$$

ಎಂದಾಗುತ್ತದೆ.

$AA' = 2a$ ಆಗಿರಲಿ. $C$ ಯು $AA'$ ನ ಮಧ್ಯಬಿಂದುವಾಗಿರಲಿ. $C$ ಅನ್ನು ಮೂಲ ಬಿಂದುವಾಗಿಟ್ಟುಕೊಂಡು $CZ$ ರೇಖೆಯನ್ನು $x$–ಅಕ್ಷವಾಗಿಯೂ, $CY$ ರೇಖೆಯನ್ನು $y$–ಅಕ್ಷವಾಗಿಯೂ ಎಳೆಯಿರಿ.

ಮೇಲಿನ ಸಮೀಕರಣಗಳಿಂದ

$$SA = eAZ \text{ ಮತ್ತು } SA' = eA'Z$$

ಎಂದು ಬರೆಯಬಹುದು. ಈ (1) ಸಮೀಕರಣಗಳನ್ನು ಸಂಕಲನಮಾಡಿದಾಗ

$$SA + SA' = e[AZ + A'Z]$$

ಎಂದಾಗುತ್ತದೆ.

ಚಿತ್ರದ ಆಧಾರದ ಮೇರೆಗೆ

$$AA' = e[CZ - CA + CA' + CZ]$$

ಅಥವಾ $AA = e(2CZ)$ [ಕಾರಣ $CA = CA'$ ಆಗಿರುವುದರಿಂದ]

ಅಥವಾ $2a = 2eCZ$

ಅಥವಾ $CZ = \frac{a}{e}$ ... (2)

ಇದೇ ರೀತಿ, (1) ಸಮೀಕರಣಗಳನ್ನು ವ್ಯವಕಲಿಸಿದಾಗ

$SA' - SA = e[A'Z - AZ]$

ಎಂದಾಗುವುದು. ಅಂದರೆ

$CA' + CS - CA + CS = e(AA')$

ಅಥವಾ $2CS = e(2a)$

ಅಥವಾ $CS = ae$ ... (3)

ಎಂದಾಗುತ್ತದೆ. $S$ ನಾಭಿಯು $x$–ಅಕ್ಷದ ಮೇಲಿರುವುದರಿಂದ ಮತ್ತು (3) ರಿಂದಾಗಿ

$\boldsymbol{S \equiv (ae, 0)}$

ದೀರ್ಘವೃತ್ತದ ಮೇಲಿನ ಯಾವುದೇ ಬಿಂದುವಿನ ಬಿಂದು ಪಥದ ನಿಬಂಧನೆಯು

$\frac{SP}{PM} = e$

ಅಥವಾ $SP = e\,PM$

ಅಥವಾ $SP^2 = e^2 PM^2$

[ಇಲ್ಲಿ $e<1$] ಆಗಿರುತ್ತದೆ.

ಅಂದರೆ $(x-ae)^2 + y^2 = (ex-a)^2$

ಅಥವಾ $x^2 + a^2e^2 - 2xae + y^2 = e^2x^2 - 2aex + a^2$

ಅಥವಾ $x^2(1-e^2) + y^2 = a^2(1-e^2)$

ಈ ಹಂತದಲ್ಲಿ $a^2(1-e^2)$ ನಿಂದ ಪ್ರತಿಯೊಂದು ಪದವನ್ನು ಭಾಗಿಸಿದಾಗ

$$\frac{x^2}{a^2} + \frac{y^2}{a^2(1-e^2)} = 1$$

ಅಥವಾ $$\boxed{\frac{x^2}{a^2} + \frac{y^2}{b^2} = 1}$$ ... (4)

ಇಲ್ಲಿ $\boldsymbol{b^2 = a^2(1-e^2)}$ ಎಂದು ಪರಿಗಣಿಸಲಾಗುವುದು.

ಸಮೀಕರಣ (4)ಅನ್ನು ದೀರ್ಘವೃತ್ತದ ಪ್ರಮಾಣಪೂರ್ಣ ಸಮೀಕರಣವೆಂದು ಪರಿಗಣಿಸಲಾಗುವುದು.

### 7.3.2 $\frac{x^2}{a^2} + \frac{y^2}{b^2} = 1$ ದೀರ್ಘವೃತ್ತದ ಲಾಕ್ಷಣಿಕಗಳು

$\frac{x^2}{a^2} + \frac{y^2}{b^2} = 1$ ಸಮೀಕರಣದಿಂದ $x$ ನ ಉತ್ಪನ್ನವು $x = \pm a \left[1 - \frac{y^2}{b^2}\right]^{1/2}$ ಎಂದಾಗುವುದು. ಇದರಲ್ಲಿ $y$ ನ ಬೆಲೆಯು $b$ ಗಿಂತಲೂ ಕಡಿಮೆ ಇರುತ್ತದೆ. $y$ ನ ಉತ್ಪನ್ನವು $y = \pm\ b \left[1 - \frac{X^2}{a^2}\right]^{1/2}$ ಎಂದಾಗುವುದು. ಇದರಲ್ಲಿ $x$ ನ ಬೆಲೆಯು $a$ ಗಿಂತ ಕಡಿಮೆ ಬೆಲೆ ಯಾಗಿರುತ್ತದೆ. ಆದ್ದರಿಂದ, ಈ ಕೆಳಗಿನ ಅಂಶಗಳನ್ನು ಗಮನಿಸಬಹುದು :

1. ಈ ದೀರ್ಘವೃತ್ತವು ಅಕ್ಷಗಳೊಂದಿಗೆ ಸಮಾಂಗವಾಗಿದೆ.

2. $C$ ಅನ್ನು ದೀರ್ಘವೃತ್ತದ ಮಧ್ಯಬಿಂದುವೆಂದು ಕರೆಯುತ್ತೇವೆ.

3. ದೀರ್ಘವೃತ್ತವು $x$–ಅಕ್ಷವನ್ನು $A$ ಮತ್ತು $A'$ ಬಿಂದುಗಳಲ್ಲಿ ಛೇದಿಸುತ್ತದೆ. $AA'$ ಅನ್ನು *ದೀರ್ಘಾಕ್ಷ*ವೆಂದು ಕರೆಯುತ್ತೇವೆ. $A$, $A'$ ಗಳ ನಿರ್ದೇಶಕಗಳು ಕ್ರಮವಾಗಿ $(a, 0)$ ಮತ್ತು $(-a, 0)$ ಎಂದಾಗುತ್ತವೆ. ದೀರ್ಘವೃತ್ತವು $y$-ಅಕ್ಷವನ್ನು $B'$ ಮತ್ತು $B$ ಬಿಂದುಗಳಲ್ಲಿ ಛೇದಿಸುತ್ತದೆ. $BB'$ ಅನ್ನು *ಹ್ರಸ್ವಾಕ್ಷ*ವೆಂದು ಕರೆಯುತ್ತೇವೆ. $B$ ಮತ್ತು $B'$ ಗಳ ನಿರ್ದೇಶಕಗಳು ಕ್ರಮವಾಗಿ $(0, b)$ ಮತ್ತು $(0, -b)$ ಆಗಿರುತ್ತವೆ. $AA' = 2a$ ಮತ್ತು $BB' = 2b$ ಎಂದು ಪರಿಗಣಿಸಲಾಗುವುದು. ಮತ್ತೊಂದು ಗಮನಿಸಬೇಕಾದ ಅಂಶವೆಂದರೆ ಮೇಲೆ ಸೂಚಿಸಿರುವ ದೀರ್ಘವೃತ್ತದಲ್ಲಿ $a > b$ ಆಗಿರುತ್ತದೆ.

4. $S$ ಮತ್ತು $S'$ ಗಳನ್ನು ದೀರ್ಘವೃತ್ತದ *ನಾಭಿ*ಗಳೆಂದು ಕರೆಯುತ್ತೇವೆ.

5. $d_1$, $d_2$ ಸರಳರೇಖೆಗಳನ್ನು ದೀರ್ಘವೃತ್ತದ *ಚಾಲಕ*ಗಳೆಂದು ಕರೆಯುತ್ತೇವೆ. ಅವುಗಳ ಸಮೀಕರಣಗಳು (7.3.1 ನಲ್ಲಿ (2) ರಿಂದಾಗಿ)

$$x = \frac{a}{e} \quad \text{ಮತ್ತು} \quad x = \frac{-a}{e}$$

6. ದೀರ್ಘವೃತ್ತದ ಉತ್ಕೇಂದ್ರತೆಯನ್ನು

$$e = \frac{\sqrt{a^2-b^2}}{a}$$

ಸಮೀಕರಣದಿಂದ ಪಡೆಯಬಹುದು.

### 7.3.3 ನಾಭಿಲಂಬದ ಉದ್ದ




ಚಿತ್ರ 7.9

ಚಿತ್ರ 7.9 ರಲ್ಲಿ $LL'$ ಜ್ಯಾವು $S$ ನಾಭಿಯ ಮೂಲಕವೂ, $L_1L'_1$ ಜ್ಯಾವು $S_1$ ಮೂಲಕವೂ $x$–ಅಕ್ಷಕ್ಕೆ ಲಂಬವಾಗಿರಲಿ. $LSL'$ ಅನ್ನು ಮತ್ತು $L_1S_1L_1'$ ಅನ್ನು **ನಾಭಿಲಂಬ**ಗಳೆಂದು ಕರೆಯುತ್ತೇವೆ.

$L$ ಬಿಂದುವು ದೀರ್ಘವೃತ್ತದ ಮೇಲಿರುವುದರಿಂದ ಅದರ $x$ – ನಿರ್ದೇಶಕವು $ae$ ಎಂದಾಗುತ್ತದೆ ಮತ್ತು $y$–ನಿರ್ದೇಶಕವನ್ನು ಕೆಳಗೆ ಸೂಚಿಸಿರುವಂತೆ ಕಂಡುಹಿಡಿಯಬಹುದು.

$$\frac{x^2}{a^2} + \frac{y^2}{b^2} = 1$$

ದೀರ್ಘವೃತ್ತದ ಸಮೀಕರಣವಾಗಿರುವುದರಿಂದ

$$\frac{a^2e^2}{a^2} + \frac{y^2}{b^2} = 1$$

ಎಂದು ಬರೆಯಬಹುದು. ಆಗ

$$y^2 = b^2\,(1 - e^2)$$

ಅಥವಾ $y^2 = b^2 \dfrac{b^2}{a^2}$ | ಕಾರಣ $b^2 = a^2\,(1-e^2)$

ಆದ್ದರಿಂದ, $y = \dfrac{b^2}{a}$ | ಅಥವಾ $\dfrac{b^2}{a^2} = 1 - e^2$

ಅಂತೆಯೇ ನಾಭಿಲಂಬಾಂತರಗಳ ನಿರ್ದೇಶಕಗಳು ಕ್ರಮವಾಗಿ

$$L \equiv \left(ae, \frac{b^2}{a}\right), \quad L^1 \equiv \left(ae, \frac{-b^2}{a}\right)$$

$$L_1 \equiv \left(-ae, \frac{b^2}{a}\right), \quad L_1{}^1 \equiv \left(-ae, \frac{-b^2}{a}\right)$$

ಎಂದಾಗುತ್ತವೆ. ಆದ್ದರಿಂದ ನಾಭಿಲಂಬದ ಉದ್ದ

$$LL' = L_1L_1' = \frac{2b^2}{a}$$

**ಸೂಚನೆ:**

1. $S$ ಮತ್ತು $S^1$ ನಿಂದ ದೀರ್ಘವೃತ್ತದ ಮೇಲಿರುವ ಯಾವುದೇ ಬಿಂದುವಿನ ದೂರವನ್ನು *ನಾಭಿದೂರವೆಂದು* ಕರೆಯುತ್ತೇವೆ. ಚಿತ್ರ 7.10 ರಲ್ಲಿ ಇರುವಂತೆ $SP$ ಮತ್ತು $S'P$ ಗಳನ್ನು ನಾಭಿ ದೂರಗಳೆಂದು ಕರೆಯುತ್ತೇವೆ.




ಚಿತ್ರ 7.10

2. ದೀರ್ಘವೃತ್ತದ ಮೇಲಿರುವ ಯಾವುದೇ ಬಿಂದುವಿನ ಮತ್ತು ನಾಭಿಗಳ ನಡುವಿನ ದೂರಗಳ ಸಂಕಲನವು ದೀರ್ಘಾಕ್ಷದ ಉದ್ದಕ್ಕೆ ಸಮನಾಗಿರುತ್ತದೆ. ಅಂದರೆ

$$SP + S'P = 2a$$

## 7.3.4 ದೀರ್ಘವೃತ್ತದ ಇನ್ನೊಂದು ರೂಪ

ಚಿತ್ರ 7.11 ರಲ್ಲಿ

$$\frac{x^2}{a^2} + \frac{y^2}{b^2} = 1$$

ಸಮೀಕರಣವು ದೀರ್ಘವೃತ್ತವನ್ನು ಪ್ರತಿನಿಧಿಸುತ್ತದೆ. ಇಲ್ಲಿ ಗಮನಿಸಬೇಕಾದ ಅಂಶ $a < b$ ಆಗಿರುತ್ತದೆ. ಈ ದೀರ್ಘವೃತ್ತದ ಲಕ್ಷಣಗಳು :




ಚಿತ್ರ 7.11

1. ನಾಭಿಗಳು $y$–ಅಕ್ಷದ ಮೇಲಿರುತ್ತವೆ.

2. ಚಾಲಕದ ಸಮೀಕರಣಗಳು $y = \frac{b}{e}$ ಮತ್ತು $y = \frac{-b}{e}$ ಎಂದಾಗುತ್ತದೆ.

3. ನಾಭಿಲಂಬದ ಉದ್ದ = $\frac{2a^2}{b}$ ಎಂದಾಗುತ್ತದೆ.

4. ದೀರ್ಘಾಕ್ಷದ ಉದ್ದ $2b$ ಆಗಿರುತ್ತದೆ ಮತ್ತು ಹ್ರಸ್ವಾಕ್ಷದ ಉದ್ದ $2a$ ಆಗಿರುತ್ತದೆ.

5. ದೀರ್ಘವೃತ್ತದ ಉತ್ಕೇಂದ್ರತೆ

$$e = \frac{\sqrt{b^2 - a^2}}{b}$$

### 7.3.5 (*h, k*) ಮಧ್ಯಬಿಂದುವನ್ನುಳ್ಳ ದೀರ್ಘವೃತ್ತದ ಸಮೀಕರಣ

($h$, $k$) ಬಿಂದುವನ್ನು ಮಧ್ಯಬಿಂದುವಾಗುಳ್ಳ ಮತ್ತು $x$– ಹಾಗೂ $x$– ಅಕ್ಷಗಳಿಗೆ ಸಮಾಂತರವಾಗಿ $2a$ ಮತ್ತು $2b$ ದೀರ್ಘಾಕ್ಷ ಮತ್ತು ಹ್ರಸ್ವಾಕ್ಷಗಳನ್ನಾಗಿ ಹೊಂದಿದ ದೀರ್ಘವೃತ್ತದ ಸಮೀಕರಣವನ್ನು

$$\frac{(x-h)^2}{a^2} + \frac{(y-k)^2}{b^2} = 1$$

ಎಂದು ಪರಿಗಣಿಸಬಹುದು.



ಚಿತ್ರ 7.12

**ಉದಾಹರಣೆಗಳು**

1. $9x^2 + 25y^2 = 225$ ದೀರ್ಘವೃತ್ತದ ದೀರ್ಘಾಕ್ಷ, ಹ್ರಸ್ವಾಕ್ಷ, ನಾಭಿಲಂಬದ ಉದ್ದ, ಉತ್ಕೇಂದ್ರತೆ, ನಾಭಿಗಳ ನಿರ್ದೇಶಕಗಳು ಮತ್ತು ಚಾಲಕಗಳ ಸಮೀಕರಣಗಳನ್ನು ಕಂಡುಹಿಡಿಯಿರಿ.

ಕೊಟ್ಟಿರುವ $9x^2 + 25y^2 = 225$ ಸಮೀಕರಣವನ್ನು

$$\frac{x^2}{25} + \frac{y^2}{9} = 1$$

ಎಂದು ಬರೆಯಬಹುದು.

ಈ ಸಮೀಕರಣದಲ್ಲಿ $a > b$ ಆಗಿರುವುದರಿಂದ

ದೀರ್ಘಾಕ್ಷದ ಉದ್ದ $= 2a = 2 \times 5 = 10$

ಹ್ರಸ್ವಾಕ್ಷದ ಉದ್ದ $= 2b = 2 \times 3 = 6$

ನಾಭಿಲಂಬದ ಉದ್ದ $= \frac{2b^2}{a} = \frac{2 \times 9}{5} = \frac{18}{5}$

ಉತ್ಕೇಂದ್ರತೆ $= \frac{4}{5}$

ನಾಭಿಯ ನಿರ್ದೇಶಕಗಳು $\equiv (\pm ae, 0), (\pm 4, 0)$

ಚಾಲಕಗಳ ಸಮೀಕರಣಗಳು, $x = \pm \frac{a}{e}$

ಅಂದರೆ, $x = \pm \frac{25}{4}$ ಎಂದಾಗುತ್ತದೆ.

2. $9x^2 + 25y^2 - 18x + 100y - 116 = 0$ ದೀರ್ಘವೃತ್ತದ ಮಧ್ಯಬಿಂದು, ನಾಭಿಗಳು ಮತ್ತು ಚಾಲಕಗಳ ಸಮೀಕರಣಗಳನ್ನು ಕಂಡುಹಿಡಿಯಿರಿ.

ದತ್ತ ಸಮೀಕರಣವನ್ನು

$$9x^2 - 18x + 9 - 9 + 25y^2 + 100y + 100 - 100 - 116 = 0$$

ಎಂದೂ ಬರೆಯಬಹುದು. ಈ ಸಮೀಕರಣವನ್ನು

$$9(x-1)^2 + 25(y+2)^2 = 225$$

ಅಥವಾ $$\frac{9(x-1)^2}{225} + \frac{25(y+2)^2}{225} = 1$$

ಅಥವಾ $\dfrac{(x-1)^2}{25} + \dfrac{(y+2)^2}{9} = 1$

ಎಂದು ಸರಳೀಕರಿಸಬಹುದು. ಈ ಸಮೀಕರಣವನ್ನು ಗಮನಿಸಿದಾಗ

(i) ಮಧ್ಯಬಿಂದುವಿನ ನಿರ್ದೇಶಕಗಳು $\equiv (1, -2)$

(ii) ನಾಭಿಗಳ ನಿರ್ದೇಶಕಗಳು $\equiv (h \pm ae, k) = (1 \pm 4, -2)$
ಅಂದರೆ, $(5, -2)$ ಮತ್ತು $(-3, -2)$ ಎಂದಾಗುತ್ತದೆ.

(iii) ಚಾಲಕದ ಸಮೀಕರಣಗಳು, $x = h \pm \dfrac{a}{e} = 1 \pm \dfrac{25}{4}$
ಅಂದರೆ, $4x - 29 = 0$
ಮತ್ತು $4x + 21 = 0$ ಎಂದಾಗುತ್ತದೆ.

3. $(2, 2)$ ಮತ್ತು $(3, 1)$ ಬಿಂದುಗಳ ಮೂಲಕ ಹಾದು ಹೋಗುವ ದೀರ್ಘವೃತ್ತದ ಸಮೀಕರಣವನ್ನು ಕಂಡುಹಿಡಿಯಿರಿ.

ದೀರ್ಘವೃತ್ತದ ಸಮೀಕರಣವು

$$\frac{x^2}{a^2} + \frac{y^2}{b^2} = 1$$

ಆಗಿರಲಿ. ಈ ದೀರ್ಘವೃತ್ತವು ದತ್ತ ಬಿಂದುಗಳ ಮೂಲಕ ಹಾದುಹೋಗುವುದರಿಂದ

$$\frac{4}{a^2} + \frac{4}{b^2} = 1 \text{ ಮತ್ತು } \frac{9}{a^2} + \frac{1}{b^2} = 1$$

ಎಂದಾಗುತ್ತದೆ. ಈ ಸಮೀಕರಣದಲ್ಲಿ

$$\frac{1}{a^2} = p \text{ ಮತ್ತು } \frac{1}{b^2} = q$$

ಎಂದು ಪರಿಗಣಿಸೋಣ. ಆಗ

$$4p + 4q = 1 \text{ ಮತ್ತು } 9p + q = 1$$

ಎಂದಾಗುತ್ತದೆ. ಈ ಸಮೀಕರಣಗಳನ್ನು ಬಿಡಿಸಿದಾಗ

$$p = \frac{3}{32} \text{ ಮತ್ತು } q = \frac{5}{32}$$

ಆ ಕಾರಣ ನಮಗೆ ಬೇಕಾಗಿರುವ ದೀರ್ಘವೃತ್ತದ ಸಮೀಕರಣವನ್ನು

$$\frac{3x^2}{32} + \frac{5y^2}{32} = 1$$

ಅಥವಾ $3x^2 + 5y^2 = 32$ ಎಂದು ಪರಿಗಣಿಸಬಹುದು.

## ಅಭ್ಯಾಸ – 7.2

1. ಕೆಳಗೆ ಸೂಚಿಸಿರುವ ದೀರ್ಘವೃತ್ತದ ನಾಭಿಗಳು, ಉತ್ಕೇಂದ್ರತೆ ಮತ್ತು ಚಾಲಕಗಳ ಸಮೀಕರಣಗಳನ್ನು ಕಂಡುಹಿಡಿಯಿರಿ.

   (i) $2x^2 + 3y^2 - 1 = 0$ (ii) $2x^2 + 5y^2 = 20$

   (iii) $9x^2 + 5y^2 - 30y = 0$ (iv) $4x^2 + 5y^2 + 10y - 75 = 0$

2. ಉತ್ಕೇಂದ್ರತೆ ½ ಮತ್ತು (3, 2) ಬಿಂದುವಿನಲ್ಲಿ ನಾಭಿಯನ್ನು, $x - y + 1 = 0$ ಚಾಲಕವಾಗಿವುಳ್ಳ ದೀರ್ಘವೃತ್ತದ ಸಮೀಕರಣವನ್ನು ಕಂಡುಹಿಡಿಯಿರಿ.

3. $P$ (2, 7) ಮತ್ತು $Q$ (4, 3) ಬಿಂದುಗಳ ಮೂಲಕ ಹಾದು ಹೋಗುವ ದೀರ್ಘವೃತ್ತದ ಸಮೀಕರಣವನ್ನು ಕಂಡುಹಿಡಿಯಿರಿ.

4. $3x^2 + 4y^2 + 6x - 8y = 5$ ದೀರ್ಘವೃತ್ತದ ಉತ್ಕೇಂದ್ರತೆ ಮತ್ತು ನಾಭಿಲಂಬದ ಉದ್ದವನ್ನು ಕಂಡುಹಿಡಿಯಿರಿ.

5. ಒಂದು ದೀರ್ಘವೃತ್ತದ ಕೇಂದ್ರ, ನಾಭಿ ಮತ್ತು ಉತ್ಕೇಂದ್ರತೆ ಕ್ರಮವಾಗಿ (2, –1), (1, –2), 1/4 ಆದರೆ ಆ ದೀರ್ಘವೃತ್ತದ ಸಮೀಕರಣವನ್ನು ಕಂಡು ಹಿಡಿಯಿರಿ.

6. ನಾಭಿಲಂಬದ ಉದ್ದ 5 ಮತ್ತು ಉತ್ಕೇಂದ್ರತೆ 2/3 ಇರುವ ದೀರ್ಘವೃತ್ತವನ್ನು ಕಂಡುಹಿಡಿಯಿರಿ

7. ನಾಭಿಬಿಂದುಗಳು (1, 0) ಮತ್ತು (–1, 0) ಹಾಗೂ ಉತ್ಕೇಂದ್ರತೆ 1/2 ಇರುವ ದೀರ್ಘವೃತ್ತದ ಸಮೀಕರಣವನ್ನು ಕಂಡುಹಿಡಿಯಿರಿ.

8. ನಾಭೀಬಿಂದುಗಳ ನಡುವಿನ ಅಂತರವು 4 ಮತ್ತು ಚಾಲಕಗಳ ನಡುವಿನ ಅಂತರವು 20 ಇರುವ ದೀರ್ಘವೃತ್ತದ ಸಮೀಕರಣವನ್ನು ಕಂಡುಹಿಡಿಯಿರಿ.

## 7.4.1 ಹೈಪರ್‌ಬೊಲಾದ ಪ್ರಮಾಣಪೂರ್ಣ ಸಮೀಕರಣ

ಐಕ್ಯಕ್ಕಿಂತ ಹೆಚ್ಚಿನ ಉತ್ಕೇಂದ್ರತೆಯನ್ನುಳ್ಳ ಶಂಕುಜವನ್ನು ಹೈಪರ್‌ಬೊಲಾ ಎಂದು ಕರೆಯುತ್ತೇವೆ.




ಚಿತ್ರ 7.13

*S* ಬಿಂದುವು ನಾಭಿಯಾಗಿಯೂ, $d_1$ ಚಾಲಕವಾಗಿಯೂ ಇರಲಿ.

ಚಾಲಕ $d_1$ ಗೆ *SZ* ಲಂಬವಾಗಿ ಎಳೆಯಲ್ಪಡಲಿ.

*A* ಮತ್ತು $A_1$ ಬಿಂದುಗಳಲ್ಲಿ *SZ* ರೇಖಾಖಂಡವನ್ನು ಅಂತರೀಯವಾಗಿಯೂ ಮತ್ತು ಬಾಹ್ಯವಾಗಿಯೂ *e*:1 ನಿಷ್ಪತ್ತಿಯಲ್ಲಿ ವಿಭಜಿಸಲಿ.

ಅಂದರೆ $\dfrac{SA}{AZ} = \dfrac{e}{1}$ ಅಥವಾ $SA=eAZ$ ... (1)

ಮತ್ತು $\dfrac{SA'}{A^1Z} = \dfrac{e}{1}$ ಅಥವಾ $SA' = eA^1Z$ ... (2)

*C* ಬಿಂದುವು *AA'*ನ ಮಧ್ಯಬಿಂದುವಾಗಿರಲಿ ಮತ್ತು $AA'=2a$ ಆಗಿರಲಿ. ನಂತರ *C* ಬಿಂದುವನ್ನು ಮೂಲಬಿಂದುವಾಗಿಟ್ಟುಕೊಂಡು, *CX* ಮತ್ತು *CY* ಗಳನ್ನು *x* ಮತ್ತು

$y$–ಅಕ್ಷಗಳಾಗಿ ಎಳೆಯಿರಿ. ಸಮೀಕರಣ (1) ಮತ್ತು (2) ಗಳನ್ನು ಸಂಕಲಿಸುವುದರಿಂದ

$$SA+SA'=e[AZ+A'Z]$$

ಅಥವಾ $(CS-CA)+(CA'+CS)=e(AA')$

($C$ ಯು $AA'$ ನ ಮಧ್ಯಬಿಂದುವಾದ್ದರಿಂದ $CA=CA'$ ಆಗುತ್ತದೆ)

$$2CS=2ae$$

ಅಥವಾ $CS=ae$

ಅದೇ ರೀತಿ ಸಮೀಕರಣ (1) ಮತ್ತು (2) ಗಳನ್ನು ವ್ಯವಕಲಿಸಿದಾಗ

$$SA'-SA=e(A'Z-AZ)$$

ಅಥವಾ $AA'= e[CA'+CZ-CA+CZ]$

ಅಥವಾ $2a = e(2CZ)$ ಅಥವಾ $CZ = \frac{a}{e}$

ಆಗುತ್ತದೆ. $P(x, y)$ ಹೈಪರ್‌ಬೋಲಾದ ಯಾವುದೇ ಬಿಂದುವಾಗಿರಲಿ. ಹೈಪರ್‌ಬೋಲಾದ ವಿವರಣೆಯಂತೆ

$\frac{SP}{PM} = e$ ಮತ್ತು $e>1$

ಅಂದರೆ, $SP = ePM$

ಅಥವಾ $SP^2=e^2PM^2$

ಅಂದರೆ, $(x-ae)^2+y^2=(ex-a)^2$

ಅಥವಾ $x^2-2aex+a^2e^2+y^2 = e^2x^2-2aex+a^2$

ಅಥವಾ $(e^2-1)x^2-y^2= a^2(e^2-1)$

ಪ್ರತಿಯೊಂದು ಪದವನ್ನು $a^2(e^2-1)$ ರಿಂದ ಭಾಗಿಸಿದಾಗ

$$\frac{x^2}{a^2} - \frac{y^2}{a^2(e^2-1)} = 1$$

ಅಥವಾ $\boxed{\frac{x^2}{a^2} - \frac{y^2}{b^2} = 1}$

ಇಲ್ಲಿ $b^2 = a^2(e^2-1)$ ಎಂದು ಪರಿಗಣಿಸಲಾಗುವುದು. $P(x, y)$ ಹೈಪೆರ್‌ಬೋಲಾದ ಮೇಲಿರುವ ಯಾವುದೇ ಬಿಂದುವಾದ್ದರಿಂದ, ಮೇಲಿನ ಸಮೀಕರಣವನ್ನು ಹೈಪೆರ್‌ಬೋಲಾದ ಪ್ರಮಾಣಪೂರ್ಣ ಸಮೀಕರಣವೆಂದು ಪರಿಗಣಿಸಲಾಗುವುದು.

## 7.4.2 $\frac{x^2}{a^2} - \frac{y^2}{b^2} = 1$ ಹೈಪರ್‌ಬೋಲಾದ ಮುಖ್ಯ ಲಾಕ್ಷಣಿಕಗಳು

1. ಮೇಲಿನ ಸಮೀಕರಣದಿಂದ $y$ನ ಉತ್ಪನ್ನವು

$$y = \pm b\left[\frac{x^2}{a^2} -1\right]^{1/2}$$

ಎಂದಾಗುತ್ತದೆ. ಈ ಸಮೀಕರಣದಲ್ಲಿ $x<a$ ಆದಾಗ $y$ ಊಹ್ಯವಾಗಿರುತ್ತದೆ. ಆದರೆ $x$ನ ನೈಜ ಬೆಲೆಗಳಿಗೆ $y^2$ಗೆ ಒಂದೇ ಬೆಲೆಯುಳ್ಳ ಆದರೆ ವಿರುದ್ಧ ಚಿಹ್ನೆಗಳುಳ್ಳ ಎರಡು ಬೆಲೆಗಳು ದೊರೆಯುತ್ತವೆ.

ಅದೇ ರೀತಿ $y$ನ ನೈಜಬೆಲೆಗಳಿಗೆ $x^2$ಗೆ ಒಂದೇ ಬೆಲೆಯುಳ್ಳ ಆದರೆ ವಿರುದ್ಧ ಚಿಹ್ನೆಯುಳ್ಳ ಎರಡು ಬೆಲೆಗಳು ದೊರೆಯುತ್ತವೆ.

ಆದ್ದರಿಂದ ಈ ವಕ್ರರೇಖೆಯು $x$–ಅಕ್ಷದೊಂದಿಗೆ ಸಮಾಂಗವಾಗಿದೆ.

$$x = \frac{a}{b}\sqrt{y^2+b^2}$$

ಆಗಿರುವುದರಿಂದ ಈ ವೃತ್ತವು $y$-ಅಕ್ಷವನ್ನು ಎಲ್ಲಿಯೂ ಛೇದಿಸುವುದಿಲ್ಲವಾದ್ದರಿಂದ ಇದನ್ನು ಅನಂತವಾಗಿ ರಚಿಸಬಹುದು.

2. $C$ಅನ್ನು ಹೈಪರ್‌ಬೋಲಾದ ಮಧ್ಯಬಿಂದುವೆಂದು ಕರೆಯುತ್ತೇವೆ. ಅದರ ನಿರ್ದೇಶಕಗಳು (0, 0) ಆಗಿರುತ್ತದೆ.

3. $AA'$ ಅನ್ನು ಹೈಪರ್‌ಬೋಲಾದ ಶೃಂಗಗಳೆಂದು ಕರೆಯುತ್ತೇವೆ. ಇವುಗಳ ನಿರ್ದೇಶಕಗಳು $A(a, 0)$ ಮತ್ತು $A'(-a, 0)$ ಆಗಿರುತ್ತವೆ.

$AA'$ ಅನ್ನು ***ಛೇದಕ ಅಕ್ಷ***ವೆಂದು ಕರೆಯುತ್ತೇವೆ. $AA' = 2a$ ಎಂದು ಪರಿಗಣಿಸಲಾಗುವುದು. $x= 0$ ಆದಾಗ $y^2 = b^2$ ಆಗುವುದು. ಇದರಿಂದ $y$ ನ ರೇಖೆಯ ಬೆಲೆಗಳು ಊಹ್ಯವಾಗಿರುವುದರಿಂದ ಈ ವಕ್ರರೇಖೆಯು $y$–ಅಕ್ಷವನ್ನು ಛೇದಿಸುವುದಿಲ್ಲ. ಆದರೂ $y$-ಅಕ್ಷದ ಮೇಲೆ $B(0, b)$ ಮತ್ತು $B^1 (0, -b)$ ಎಂದು ಎರಡು ಬಿಂದುಗಳನ್ನು ಪರಿಗಣಿಸುತ್ತೇವೆ. $BB^1$ ಅನ್ನು ***ಅನುವರ್ತಿ*** ಅಕ್ಷವೆಂದು ಕರೆಯುತ್ತೇವೆ. $BB^1=2b$ ಎಂದು ಪರಿಗಣಿಸಲಾಗುವುದು.

4. $$e = \left[\frac{a^2+b^2}{a^2}\right]^{1/2}$$

ಸಮೀಕರಣದಿಂದ ಹೈಪೆರ್‌ಬೋಲಾದ ಉತ್ಕೇಂದ್ರತೆಯನ್ನು ಪಡೆಯಬಹುದು.

5. $S, S'$ ಗಳನ್ನು ಹೈಪೆರ್‌ಬೋಲಾದ *ನಾಭಿಬಿಂದುಗಳೆಂದು* ಕರೆಯುತ್ತೇವೆ. ಅವುಗಳ ನಿರ್ದೇಶಕಗಳು $(ae, 0)$ ಮತ್ತು $(-ae, 0)$ ಆಗಿರುತ್ತವೆ.

6. $d_1$, $d_2$ ಗಳನ್ನು *ಚಾಲಕಗಳೆಂದು* ಕರೆಯುತ್ತೇವೆ. ಅವುಗಳ ಸಮೀಕರಣಗಳು

$$x = \frac{a}{e} \text{ ಮತ್ತು } x = \frac{-a}{e}$$

ಎಂದು ಪರಿಗಣಿಸುತ್ತೇವೆ.

### 7.4.3 ನಾಭಿಲಂಬದ ಉದ್ದ

$S$ ನಾಭಿಯ ಮೂಲಕ $x$–ಅಕ್ಷಕ್ಕೆ ಲಂಬವಾಗಿರುವ $LSL'$ ಜ್ಯಾವನ್ನು ನಾಭಿಲಂಬವೆಂದು ಕರೆಯುತ್ತೇವೆ. $L$ ಬಿಂದುವು ಹೈಪೆರ್‌ಬೋಲಾದ ಮೇಲಿರುವುದರಿಂದ ಅದರ ನಿರ್ದೇಶಕಗಳು $(ae, SL)$ ಎಂದಾಗುತ್ತದೆ (ಚಿತ್ರ 7.14).




ಚಿತ್ರ 7.14

$$\frac{x^2}{a^2} - \frac{y^2}{b^2} = 1 \text{ ಸಮೀಕರಣದಲ್ಲಿ}$$

$x$ ಮತ್ತು $y$ನ ಬೆಲೆಗಳನ್ನು ಪರಿಗಣಿಸಿದಾಗ

$$SL^2 = \left[\frac{a^2 e^2}{a^2} \quad -1\right] b^2$$

ಅಥವಾ $SL^2 = b^2(e^2-1)$

ಆಗುತ್ತದೆ. ಆದರೆ $e^2-1 = \frac{b^2}{a^2}$ ಆಗಿರುವುದರಿಂದ

$$SL^2 = \frac{b^4}{a^2}$$

ಅಂದರೆ $SL = \pm \frac{b^2}{a}$

ಆದ್ದರಿಂದ $L$, $L'$ ಗಳ ನಿರ್ದೇಶಕಗಳು ಕ್ರಮವಾಗಿ

$$\left[ae, \frac{b^2}{a}\right] \text{ ಮತ್ತು } \left[ae, \frac{-b^2}{a}\right]$$

ಮತ್ತು $L_1$, $L_1'$ ಗಳ ನಿರ್ದೇಶಕಗಳು ಕ್ರಮವಾಗಿ

$$\left[-ae, \frac{b^2}{a}\right] \text{ ಮತ್ತು } \left[-ae, \frac{-b^2}{a}\right]$$

ಹಾಗೂ ನಾಭಿಲಂಬದ ಉದ್ದ $= \frac{2b^2}{a}$ ಆಗುತ್ತದೆ.

**ಸೂಚನೆ :** $P$ ಹೈಪೆರ್‌ಬೋಲಾದ ಮೇಲಿರುವ ಯಾವುದೇ ಬಿಂದುವಾದರೆ, ಈ ಬಿಂದು ಮತ್ತು ನಾಬಿಗಳ ನಡುವಿನ ಅಂತರಗಳನ್ನು *ನಾಭಿದೂರಗಳೆಂದು* ಕರೆಯುತ್ತೇವೆ.

ಹೈಪೆರ್‌ಬೋಲಾದ ಮೇಲಿರುವ ಬಿಂದುವೊಂದರ ನಾಭಿದೂರಗಳ ವ್ಯವಕಲನವು ಸ್ಥಿರವೂ ಮತ್ತು ಅದು $2a$ ಗೆ ಸಮನಾಗಿರುತ್ತವೆ (ಚಿತ್ರ 7.15) ಅಂದರೆ,

$S^1P - SP = 2a$




ಚಿತ್ರ 7.15

### 7.4.4 ಹೈಪೆರ್‌ಬೊಲಾದ ಇನ್ನೊಂದು ರೂಪ

ಛೇದಕ ಅಕ್ಷವನ್ನು *y*–ಅಕ್ಷದ ಮೇಲೆ ಹೊಂದಿರುವ ಹೈಪೆರ್‌ಬೊಲಾವನ್ನು ಪ್ರಮಾಣಪೂರ್ಣ ಹೈಪರ್‌ಬೊಲಾದ ಅನುವರ್ತಿ (ಕಾಂಜುಗೇಟ್) ಹೈಪೆರ್‌ಬೊಲಾವೆಂದು ಕರೆಯುತ್ತೇವೆ (ಚಿತ್ರ 7.16) .




ಚಿತ್ರ 7.16

ಇದರ ಸಮೀಕರಣವು

$$\frac{x^2}{a^2} - \frac{y^2}{b^2} = -1$$

ಆಗಿರುತ್ತದೆ. ಇದರ ಉತ್ಕೇಂದ್ರತೆ

$$e = \frac{\sqrt{a^2+b^2}}{b}$$

ನಾಭಿಬಿಂದುಗಳು, $(0, \pm be)$

ಚಾಲಕಗಳು $y = \pm \frac{b}{e}$

$B, B^1$ ಗಳನ್ನು ಶೃಂಗಗಳೆಂದು ಕರೆಯುತ್ತೇವೆ.

ಅವುಗಳು ನಿರ್ದೇಶಕಗಳು $(0, b)$ ಮತ್ತು $(0, -b)$ ಆಗಿರುತ್ತವೆ.

ಛೇದಕ-ಅಕ್ಷದ ಉದ್ದ $= 2b$

ಮತ್ತು ಅನುವರ್ತಿ ಅಕ್ಷದ ಉದ್ದ $=2a$

ನಾಭಿಲಂಬದ ಉದ್ದ $= \frac{2a^2}{b}$

**ಸೂಚನೆ :** 1. $a=b$ ಆದಾಗ ಹೈಪೆರ್‌ಬೋಲಾದ ಸಮೀಕರಣವು $x^2-y^2=a^2$ ಎಂದಾಗುತ್ತದೆ. ಅಂತಹ ಹೈಪೆರ್‌ಬೋಲಾವನ್ನು ***ಲಂಬ (ರೆಕ್ಟ್ಯಾಂಗುಲರ್) ಹೈಪೆರ್‌ಬೋಲಾ***ವೆಂದು ಕರೆಯುತ್ತೇವೆ.

2. ಹೈಪೆರ್‌ಬೋಲಾದ ಮಧ್ಯಬಿಂದುವನ್ನು $(0, 0)$ ದಿಂದ $(h, k)$ ಬಿಂದುವಿಗೆ ಸ್ಥಳಾಂತರಿಸಿದಾಗ ಅದರ ಸಮೀಕರಣವನ್ನು

$$\frac{(x-h)^2}{a^2} - \frac{(y-k)^2}{b^2} = 1$$

ಎಂದು ಪರಿಗಣಿಸಲಾಗುವುದು.

## ಉದಾಹರಣೆಗಳು

ಕೆಳಗೆ ಸೂಚಿಸಿರುವ ಹೈಪೆರ್‌ಬೋಲಾಗಳ ಅಕ್ಷಗಳು, ಶೃಂಗಗಳು, ಉತ್ಕೇಂದ್ರತೆ, ನಾಭಿಗಳು, ಚಾಲಕಗಳು ಮತ್ತು ನಾಭಿಲಂಬದ ಉದ್ದವನ್ನು ಕಂಡುಹಿಡಿಯಿರಿ.

(i) $9x^2-16y^2 = 144$ (ii) $x^2-3y^2 = -12$

(i) $9x^2-16y^2=144$

ಇದನ್ನು $\frac{x^2}{16}-\frac{y^2}{9}=1$ ಎಂದೂ ಬರೆಯಬಹುದು. ಇಲ್ಲಿ $a=4$, $b=3$ ಆಗಿರುವುದು.

ಛೇದಕ ಅಕ್ಷ $= 2a = 8$

ಅನುವರ್ತಿ ಅಕ್ಷ $= 2b = 6$

ಶೃಂಗಗಳು $= (\pm a, 0) = (\pm 4, 0)$

ಉತ್ಕೇಂದ್ರತೆ $= e = \frac{\sqrt{a^2+b^2}}{a} = \frac{\sqrt{16+9}}{4} = \frac{5}{4}$

ನಾಭಿ ಬಿಂದುಗಳು $\equiv (\pm ae, 0) \equiv (\pm 5, 0)$

ಚಾಲಕಗಳು, $x=\pm\frac{a}{e}$, ಅಂದರೆ $x=\pm\frac{16}{5}$

ನಾಭಿಲಂಬದ ಉದ್ದ $=\frac{2b^2}{a}=\frac{9}{2}$

(ii) $x^2-3y^2=-12$

ಅಥವಾ $\frac{x^2}{12}-\frac{y^2}{4}=-1$

ಇದರಲ್ಲಿ $a=\sqrt{12}=2\sqrt{3}$, $b=2$

ಛೇದಕ ಅಕ್ಷ $= 2b = 4$

ಅನುವರ್ತಿ ಅಕ್ಷ $= 2a = 4\sqrt{3}$

ಶೃಂಗಗಳು $\equiv (0, \pm b) \equiv (0, \pm 2)$

$e=\frac{\sqrt{a^2+b^2}}{b}=\frac{\sqrt{12+4}}{2}=2$

ನಾಭಿಗಳು $= (0, \pm 4)$

ಚಾಲಕಗಳು, $y=\pm\frac{b}{e}=\pm 1$. ನಾಭಿಲಂಬದ ಉದ್ದ $=\frac{2a^2}{b}=\frac{2(12)}{2}=12$

## ಅಭ್ಯಾಸ – 7.3

1. $2x+y=1$ ಅನ್ನು ಚಾಲಕವಾಗಿಯೂ, (1, 2) ನಾಭಿಯಾಗಿಯೂ, 3 ಅನ್ನು ಉತ್ಕೇಂದ್ರತೆಯಾಗಿವುಳ್ಳ ಹೈಪೆರ್‌ಬೋಲಾದ ಸಮೀಕರಣವನ್ನು ಕಂಡುಹಿಡಿಯಿರಿ.

2. $x-y=0$ ವನ್ನು ಚಾಲಕವಾಗಿಯೂ, (4, 0) ನಾಭಿಯಾಗಿಯೂ ಮತ್ತು ಉತ್ಕೇಂದ್ರತೆ 2 ಇರುವ ಹೈಪೆರ್‌ಬೋಲಾದ ಸಮೀಕರಣವನ್ನು ಕಂಡುಹಿಡಿಯಿರಿ.

3. ಕೆಳಗೆ ಸೂಚಿಸಿರುವ ಹೈಪೆರ್‌ಬೋಲಾಗಳ ಅಕ್ಷಗಳು, ನಾಭಿಬಿಂದುಗಳು, ಉತ್ಕೇಂದ್ರತೆ ಮತ್ತು ನಾಭಿಲಂಬಗಳ ಉದ್ದಗಳನ್ನು ಕಂಡುಹಿಡಿಯಿರಿ.

   (i) $16x^2-9y^2=144$ (ii) $\frac{x^2}{9}-\frac{y^2}{4}=1$

   (iii) $25y^2-24x^2=600$ (iv) $x^2-3y^2-4x-6y-11=0$

   (v) $9x^2-16y^2+72x-32y-16=0$

4. ನಾಭಿಗಳ ಅಂತರವು 8 ಮತ್ತು ಚಾಲಕಗಳ ನಡುವಿನ ದೂರ 9/2 ಇರುವ ಹೈಪೆರ್‌ಬೋಲಾದ ಸಮೀಕರಣವನ್ನು ಕಂಡುಹಿಡಿಯಿರಿ.

5. ಲಂಬ ಹೈಪರ್‌ಬೋಲಾದ ಉತ್ಕೇಂದ್ರತೆ $\sqrt{2}$ ಎಂದು ಸಾಧಿಸಿ.

6. ನಾಭಿಗಳ ಅಂತರವು 20 ಮತ್ತು ಚಾಲಕಗಳ ನಡುವಿನ ದೂರ 64/5 ಇರುವ ಹೈಪೆರ್‌ಬೋಲಾದ ಸಮೀಕರಣವನ್ನು ಕಂಡುಹಿಡಿಯಿರಿ.

7. ನಾಭಿಗಲು (2, 0) ಮತ್ತು (–2, 0) ಇರುವ ಮತ್ತು ಉತ್ಕೇಂದ್ರತೆ 3/2 ಇರುವ ಹೈಪೆರ್‌ಬೋಲಾದ ಸಮೀಕರಣವನ್ನು ಕಂಡುಹಿಡಿಯಿರಿ.

## 7.5 ಶಂಕುಜಗಳ ಸ್ಪರ್ಶಕ ಮತ್ತು ಲಂಬಗಳ ಸಮೀಕರಣಗಳು

### 7.5.1 $y = mx+c$ ಸರಳರೇಖೆಯು $y^2 = 4ax$ ಪೆರಾಬೊಲಾಕ್ಕೆ ಸ್ಪರ್ಶಕವೆನಿಸುವ ನಿಬಂಧನೆ

$y=mx+c$ ಸರಳರೇಖೆಯು $y^2=4ax$ ಪೆರಾಬೊಲಾಕ್ಕೆ ಸ್ಪರ್ಶಕವೆಂದು ಭಾವಿಸೋಣ. ಈ ಸರಳರೇಖೆ ಮತ್ತು ಪೆರಾಬೊಲಾದ ಛೇದನ ಬಿಂದುಗಳನ್ನು

$$(mx+c)^2 = 4ax \text{ ಅಥವಾ } m^2x^2+2x(mc-2a)+c^2 = 0$$

ಸಮೀಕರಣದಿಂದ ಪಡೆಯಬಹುದು. ಇದು $x$ ನಲ್ಲಿರುವ ವರ್ಗಸಮೀಕರಣ ಮತ್ತು $x$ ನ ಎರಡೂ ಮೂಲಗಳು ಐಕ್ಯವಾಗಿರುವುದರಿಂದ, ಅದರ ಶೋಧಕವು ಶೂನ್ಯವಾಗಿರುತ್ತದೆ. ಅಂದರೆ

$$4(mc-2a)^2-4m^2c^2=0$$

ಇದನ್ನು ಸರಳೀಕರಿಸಿದಾಗ, $c=a/m$ ಎಂದಾಗುತ್ತದೆ. ಆದ್ದರಿಂದ $c=a/m$ ಆದಾಗ $y = mx+c$ ಸರಳರೇಖೆಯು ಪೆರಾಬೊಲಾದ ಸ್ಪರ್ಶಕವೆನಿಸುವುದು; ಮತ್ತು ಸ್ಪರ್ಶಬಿಂದುವಿನ ನಿರ್ದೇಶಕಗಳು

$$\left[\frac{a}{m^2}, 2am\right]$$

### 7.5.2 ಪೆರಾಬೊಲಾದ ಸ್ಪರ್ಶಕದ ಮತ್ತು ಲಂಬದ ಸಮೀಕರಣಗಳು

$y^2=4ax$ ದತ್ತ ಪೆರಾಬೊಲಾವಾಗಿರಲಿ ಮತ್ತು $P(x_1, y_1)$ ಪೆರಾಬೊಲಾದ ಮೇಲಿನ ಬಿಂದುವಾಗಿರಲಿ.

$y^2=4ax$ ಸಮೀಕರಣವನ್ನು ಅವಕಲಿಸಿದಾಗ

$$2y \cdot \frac{dy}{dx} = 4a \text{ ಅಥವಾ } \frac{dy}{dx} = \frac{2a}{y}$$

$$\therefore \quad \left.\frac{dy}{dx}\right|_{(x1, y1)} = \frac{2a}{y_1}$$

ಆದ್ದರಿಂದ $(x_1, y_1)$ ನಲ್ಲಿ ಪೆರಾಬೊಲಾಕ್ಕೆ ಎಳೆದ ಸ್ಪರ್ಶಕದ ಸಮೀಕರಣವು

$$y-y_1 = \frac{2a}{y_1}(x-x_1)$$

ಅಥವಾ $\boxed{yy_1 = 2a(x+x_1)}$

ಎಂದಾಗುತ್ತದೆ. ಅದೇರೀತಿ ಪೆರಾಬೊಲಾದ ಲಂಬದ ಸಮೀಕರಣವು

$$y-y_1 = -\frac{y_1}{2a}(x-x_1)$$

### 7.5.3 $y= mx+c$ ಸರಳರೇಖೆಯು $\frac{x^2}{a^2}+\frac{y^2}{b^2}=1$ ದೀರ್ಘವೃತ್ತಕ್ಕೆ ಸ್ಪರ್ಶವೆನಿಸುವ ನಿಬಂಧನೆ

$y = mx+c$ ಮತ್ತು ದೀರ್ಘವೃತ್ತದ ಛೇದನ ಬಿಂದುಗಳನ್ನು

$$\frac{x^2}{a^2}+\frac{(mx+c)^2}{b^2}=1$$

ಸಮೀಕರಣದಿಂದ ಪಡೆಯಬಹುದು. ಇದನ್ನು ಸರಳೀಕರಿಸಿದಾಗ

$$(a^2m^2+b^2)x^2+2a^2mcx+a^2(c^2-b^2)=0$$

ಇದು $x$ನಲ್ಲಿರುವ ವರ್ಗಸಮೀಕರಣ. ಇದರ ಎರಡು ಮೂಲಕಗಳೂ ಐಕ್ಯವಾಗಿರುವುಗರಿಂದ, ಶೋಧಕವು ಶೂನ್ಯವಾಗಿರುತ್ತದೆ.ಆದ್ದರಿಂದ

$$4a^4m^2c^2-4(a^2m^2+b^2)a^2(c^2-b^2)=0$$

ಇದನ್ನು ಸರಳೀಕರಿಸಿದಾಗ

$$\boxed{c^2=a^2m^2+b^2}$$

ಅಂದರೆ, $c=\pm\sqrt{a^2m^2+b^2}$ ಆದಾಗ, $y=mx+c$

ದೀರ್ಘವೃತ್ತದ ಸ್ಪರ್ಶಕವೆನಿಸುವುದು.

### 7.5.4 ದೀರ್ಘವೃತ್ತದ ಸ್ಪರ್ಶಕ ಮತ್ತು ಲಂಬದ ಸಮೀಕರಣಗಳು

$P(x_1, y_1)$ ದೀರ್ಘವೃತ್ತದ ಮೇಲಿನ ಬಿಂದುವಾಗಿರಲಿ.

ಈಗ $\frac{x^2}{a^2}+\frac{y^2}{b^2}=1$ ಸಮೀಕರಣವನ್ನು ಅವಕಲಿಸಿದಾಗ

$$\frac{2x}{a^2}+\frac{2y}{b^2}\frac{dy}{dx}=0 \text{ ಅಥವಾ } \frac{dy}{dx}=\frac{-b^2x}{a^2y}$$

$$\left(\frac{dy}{dx}\right)_{(x_1,y_1)}=\frac{-b^2x_1}{a^2y_1}$$

ದೀರ್ಘವೃತ್ತಕ್ಕೆ ಎಳೆಯಲ್ಪಟ್ಟ ಸ್ಪರ್ಶಕದ ಸಮೀಕರಣವು

$$y-y_1=\frac{-b^2x_1}{a^2y_1}(x-x_1)$$

ಅಥವಾ $a^2yy_1-a^2y_1^2=-b^2xx_1+b^2x_1^2$

ಅಥವಾ $\frac{xx_1}{a^2}+\frac{yy_1}{b^2}=\frac{x_1^2}{a^2}+\frac{y_1^2}{b^2}$

ಅಥವಾ $\frac{xx_1}{a^2}+\frac{yy_1}{b^2}=1$

ಆಗುವುದು. ಏಕೆಂದರೆ, $(x_1, y_1)$ ದೀರ್ಘವೃತ್ತದ ಮೇಲಿರುವ ಬಿಂದುವಾದ್ದರಿಂದ.

ಅದೇ ರೀತಿ ಲಂಬದ ಸಮೀಕರಣವು

$y-y_1 = \frac{a^2y_1}{b^2x_1}$ $(x-x_1)$ ಎಂದಾಗುತ್ತದೆ.

### 7.5.5 $y = mx+c$ ಸರಳರೇಖೆಯು $\frac{x^2}{a^2}-\frac{y^2}{b^2}=1$ ಹೈಪರ್‌ಬೊಲಾಕ್ಕೆ ಸ್ಪರ್ಶಕವೆನಿಸುವ ನಿಬಂಧನೆ

$y = mx+c$ ಹೈಪರ್‌ಬೊಲಾದ ಸ್ಪರ್ಶಕವಾಗಿರಲಿ. ಆಗ ಸರಳರೇಖೆ ಮತ್ತು ಹೈಪರ್‌ಬೊಲಾದ ಛೇದನ ಬಿಂದುಗಳನ್ನು

$$\frac{x^2}{a^2}-\frac{(mx+c)^2}{b^2}=1$$

ಸಮೀಕರಣದಿಂದ ಪಡೆಯಬಹುದು. ಇದನ್ನು ಸರಳೀಕರಿಸಿದಾಗ

$$x^2(b^2-m^2a^2)-2mcxa^2-a^2(c^2+b^2)=0$$

ಎಂಬ $x$ ನಲ್ಲಿರುವ ವರ್ಗ ಸಮೀಕರಣವು ಉಂಟಾಗುವುದು. ಇದರ ಎರಡೂ ಮೂಲಗಳು ಐಕ್ಯವಾಗಿರುವುದರಿಂದ ಇದರ ಶೋಧಕವು ಶೂನ್ಯವಾಗಿರುತ್ತದೆ. ಆದ್ದರಿಂದ

$$4m^2c^2a^4+4a^2(b^2-a^2m^2)(c^2+b^2)=0$$

ಇದನ್ನು ಸರಳೀಕರಿಸಿದಾಗ

$c^2 = a^2m^2-b^2$ ಅಥವಾ $c = \pm\sqrt{a^2m^2-b^2}$

ಎಂದಾಗುತ್ತದೆ. ಆದ್ದರಿಂದ, $c = \pm \sqrt{a^2m^2-b^2}$ ಆದಾಗ $y= mx+c$ ಸರಳ ರೇಖೆಯು ಹೈಪರ್‌ಬೋಲಾದ ಸ್ಪರ್ಶಕವೆನಿಸುತ್ತದೆ.

### 7.5.6 ಹೈಪರ್‌ಬೋಲಾದ ಸ್ಪರ್ಶಕ ಮತ್ತು ಲಂಬದ ಸಮೀಕರಣಗಳು

$P(x_1, y_1)$ ಹೈಪರ್‌ಬೋಲಾದ ಮೇಲಿರುವ ಬಿಂದುವಾಗಿರಲಿ.

$\frac{x^2}{a^2} - \frac{y^2}{b^2} = 1$ ಸಮೀಕರಣವನ್ನು ಅವಕಲಿಸಿದಾಗ

$$\frac{2x}{a^2} - \frac{2y}{b^2}\frac{dy}{dx} = 0 \text{ ಅಥವಾ } \qquad \frac{dy}{dx} = \frac{b^2}{a^2}\frac{x}{y}$$

ಅಥವಾ $\left[\frac{dy}{dx}\right]_{(x_1, y_1)} = \frac{b^2x_1}{a^2y_1}$

$(x_1, y_1)$ ಬಿಂದುವಿನಲ್ಲಿ ಹೈಪರ್‌ಬೋಲಾಕ್ಕೆ ಎಳೆಯಲ್ಪಟ್ಟ ಸ್ಪರ್ಶಕದ ಸಮೀಕರಣವು

$$y-y_1 = \frac{b^2}{a^2}\frac{x_1}{y_1}(x-x_1)$$

ಅಥವಾ $a^2yy_1-a^2y_1^{\ 2}=b^2xx_1-b^2x_1^{\ 2}$

ಅಥವಾ $\frac{xx_1}{a^2} - \frac{yy_1}{b^2} = \frac{x_1^{\ 2}}{a^2} - \frac{y_1^{\ 2}}{b^2}$

$$\frac{xx_1}{a^2} - \frac{yy_1}{b^2} = 1$$

[$(x_1, y_1)$ ಹೈಪರ್‌ಬೋಲಾದ ಮೇಲಿರುವ ಬಿಂದುವಾದ್ದರಿಂದ]

ಅದೇ ರೀತಿ ಹೈಪರ್‌ಬೋಲಾಕ್ಕೆ $(x_1, y_1)$ ಬಿಂದುವಿನಲ್ಲಿ ಎಳೆಯಲ್ಪಟ್ಟ ಲಂಬದ ಸಮೀಕರಣವು

$$y-y_1 = \frac{-a^2y_1}{b^2x_1}(x-x_1)$$

ಉದಾಹರಣೆಗಳು

1. $2y=5x+k$ ಸರಳರೇಖೆಯು $y^2=6x$ ಪೆರಾಬೊಲಾವನ್ನು ಸ್ಪರ್ಶಿಸಿದರೆ $k$ ಯ ಬೆಲೆಯನ್ನು ಕಂಡುಹಿಡಿಯಿರಿ.

ಈಗ, ಇದಕ್ಕೆ ನಿಬಂಧನೆಯು $c=a/m$ ಎಂದು ತಿಳಿದಿದೆ. ದತ್ತ ಸರಳರೇಖೆಯನ್ನು $y=mx+c$ ರೂಪದಲ್ಲಿ

$$y=\frac{5}{2}x+\frac{k}{2} \qquad k=\frac{2(3/2)}{5/2} \quad \text{ಅಥವಾ } k=\frac{6}{5}$$

ಎಂದಾಗುತ್ತದೆ.

2. (6, 0) ಬಿಂದುವಿನಲ್ಲಿ $\frac{x^2}{36}+\frac{y^2}{9}=1$ ದೀರ್ಘವೃತ್ತಕ್ಕೆ ಎಳೆಯಲ್ಪಟ್ಟ ಸ್ಪರ್ಶಕ ಮತ್ತು ಲಂಬದ ಸಮೀಕರಣಗಳನ್ನು ಕಂಡುಹಿಡಿಯಿರಿ.

$$\frac{x^2}{36}+\frac{y^2}{9}=1$$

ಸಮೀಕರಣವನ್ನು ಅವಕಲಿಸಿದಾಗ, (6, 0) ಬಿಂದುವಿನಲ್ಲಿ

$$\left[\frac{dy}{dx}\right]_{(6,\,0)}=\left.\frac{-x}{4y}\right]_{(6,\,0)} \rightarrow \infty$$

ಎಂದಾಗುತ್ತದೆ. ಆದ್ದರಿಂದ (6, 0) ಬಿಂದುವಿನಲ್ಲಿ ಸ್ಪರ್ಶಕದ ಸಮೀಕರಣವು, $x=6$ ಮತ್ತು ಲಂಬದ ಸಮೀಕರಣವು $y=0$ ಎಂದಾಗುತ್ತದೆ.

## ಅಭ್ಯಾಸ – 7.4

1. $y^2+4x=0$ ಪೆರಾಬೊಲಾಕ್ಕೆ (–1, –2) ಬಿಂದುವಿನಲ್ಲಿ ಸ್ಪರ್ಶಕದ ಮತ್ತು ಲಂಬದ ಸಮೀಕರಣಗಳನ್ನು ಕಂಡುಹಿಡಿಯಿರಿ.

2. $2x+3y+5=0$ ಸರಳರೇಖೆಗೆ ಸಮಾನಾಂತರವಾಗಿರುವ ಮತ್ತು $y^2=8x$ ಪೆರಾಬೊಲಾಕ್ಕೆ ಸ್ಪರ್ಶಕವಾಗಿರುವ ಸರಳರೇಖೆಯ ಸಮೀಕರಣವನ್ನು ಕಂಡುಹಿಡಿಯಿರಿ.

3. $y^2=6x$ ಗೆ ಸ್ಪರ್ಶಕವಾಗಿರುವ ಮತ್ತು $3x-2y+5=0$ ಸರಳರೇಖೆಗೆ ಲಂಬವಾಗಿರುವ ಸರಳರೇಖೆಯ ಸಮೀಕರಣವನ್ನು ಕಂಡುಹಿಡಿಯಿರಿ.

4. (2, 5) ಬಿಂದುವಿನಲ್ಲಿ $y^2=8x$ ಪೆರಾಬೋಲಾಕ್ಕೆ ಎಳೆಯಲ್ಪಟ್ಟ ಸ್ಪರ್ಶಕದ ಮತ್ತು ಲಂಬದ ಸಮೀಕರಣಗಳನ್ನು ಕಂಡುಹಿಡಿಯಿರಿ.

5. $\frac{x^2}{27}+\frac{y^2}{24}=1$ ದೀರ್ಘವೃತ್ತಕ್ಕೆ (3, –4) ಬಿಂದುವಿನಲ್ಲಿ ಎಳೆಯಲ್ಪಟ್ಟ ಸ್ಪರ್ಶಕ ಮತ್ತು ಲಂಬದ ಸಮೀಕರಣಗಳನ್ನು ಕಂಡುಹಿಡಿಯಿರಿ.

6. $2x+y+5=0$ ಸರಳರೇಖೆಯು $x^2+2y^2-4x+12y+14=0$ ದೀರ್ಘವೃತ್ತವನ್ನು ಸ್ಪರ್ಶಿಸುವುದೆಂದು ಸಾಧಿಸಿ.

7. $3x+y+5=0$ ಸರಳರೇಖೆಗೆ ಸಮಾನಾಂತರವಾಗಿರುವ ಮತ್ತು $\frac{x^2}{16}+\frac{y^2}{4}=1$ ದೀರ್ಘವೃತ್ತದ ಸ್ಪರ್ಶಕದ ಸಮೀಕರಣವನ್ನು ಕಂಡುಹಿಡಿಯಿರಿ.

8. $\frac{(x-1)^2}{20}-\frac{(y-2)^2}{4}=1$ ಹೈಪರ್‌ಬೋಲಾಕ್ಕೆ (6, 3) ಬಿಂದುವಿನಲ್ಲಿ ಎಳೆಯಲ್ಪಟ್ಟ ಸ್ಪರ್ಶಕದ ಸಮೀಕರಣವನ್ನು ಕಂಡುಹಿಡಿಯಿರಿ.

## 7.6. ಮಹಾವೀರಾಚಾರ್ಯನ ಕೊಡುಗೆ

ಭಾರತೀಯ ಗಣಿತ ಶಾಸ್ತ್ರದ ಇತಿಹಾಸದಲ್ಲಿ ದೀರ್ಘವೃತ್ತವನ್ನು (ಎಲಿಪ್ಸ್) ಚರ್ಚಿಸಿದ ಏಕೈಕ ಗಣಿತಜ್ಞನೆಂದರೆ ನಮ್ಮ ಕರ್ನಾಟಕದವನೇ ಆದ ಪ್ರಖ್ಯಾತ ಜೈನ ಗಣಿತಜ್ಞ *ಮಹಾವೀರಾಚಾರ್ಯ* (ಕ್ರಿ.ಶ.9ನೇ ಶತಮಾನ) ಎಂಬುದು ನಮಗೆಲ್ಲಾ ಬಹಳ ಹೆಮ್ಮೆಯ ವಿಷಯ.

ಆತನ ***ಗಣಿತಸಾರಸಂಗ್ರಹ***ದಲ್ಲಿ ಮಹಾವೀರನು ಒಂದು ದೀರ್ಘವೃತ್ತದ ("ಆಯವೃತ್ತ" ಎಂದು ಹೆಸರಿಸಿದ್ದಾನೆ) ಪರಿಧಿಯನ್ನು $\sqrt{24b^2+16a^2}$ ಎಂಬುದಾಗಿ ಕೊಟ್ಟಿದ್ದಾನೆ. ಈ ಸೂತ್ರವು ಪರಿಧಿಯ ಸ್ಥೂಲವಾದ ಬೆಲೆಯನ್ನು ಕೊಡುತ್ತದೆ. ನಿಖರವಾದ ಬೆಲೆಯನ್ನು ಕೊಡುವ ಸುಲಭವಾದ ಸೂತ್ರವು ಆಧುನಿಕ ಗಣಿತದಲ್ಲಿಯೂ ಇಲ್ಲವೆಂಬುದು ಗಮನಾರ್ಹ.

9. $4x^2-9y^2 = 36$ ಹೈಪರ್‌ಬೊಲಾಕ್ಕೆ ನಾಭಿಲಂಬದ ತುದಿಗಳಲ್ಲಿ ಎಳೆಯಲ್ಪಟ್ಟ ಸ್ಪರ್ಶಕಗಳ ಸಮೀಕರಣಗಳನ್ನು ಕಂಡುಹಿಡಿಯಿರಿ.

10. $2x+y-3=0$ ಸರಳರೇಖೆಗೆ ಲಂಬವಾಗಿರುವ ಮತ್ತು $\frac{x^2}{36} - \frac{y^2}{5} = 1$ ಹೈಪರ್‌ಬೊಲಾಕ್ಕೆ ಸ್ಪರ್ಶಕವಾಗಿರುವ ಸರಳರೇಖೆಯ ಸಮೀಕರಣವನ್ನು ಕಂಡುಹಿಡಿಯಿರಿ.

# ಅಧ್ಯಾಯ - 8

# ಪ್ರತಿಲೋಮ ತ್ರಿಕೋನಮಿತೀಯ ಉತ್ಪನ್ನಗಳು

$x = f(y)$ ಎಂಬ ಉತ್ಪನ್ನವನ್ನು ಪರಿಶೀಲಿಸಿ. ಈ ಉತ್ಪನ್ನವು ಏಕಮೌಲ್ಯ ಉತ್ಪನ್ನವಾಗಿದ್ದರೆ, ನಾವು $y = f^{-1}(x)$ ಎಂದು ಸೂಚಿಸುತ್ತೇವೆ ಮತ್ತು ಅದನ್ನು ಪ್ರತಿಲೋಮ ಉತ್ಪನ್ನವೆಂದು ಕರೆಯುತ್ತೇವೆ.

## 8.1 ಪ್ರತಿಲೋಮ sine ಉತ್ಪನ್ನ ($\sin^{-1}x$)

$x = \sin y$ ಉತ್ಪನ್ನವು $\frac{-\pi}{2} \le y \le \frac{\pi}{2}$ ಎಂಬ ಕ್ಷೇತ್ರದಲ್ಲಿ ಮತ್ತು $-1 \le x \le 1$ ಎಂಬ ಬಿಂಬಗಣದಲ್ಲಿ ಏಕಮೌಲ್ಯ ಉತ್ಪನ್ನವಾಗುತ್ತದೆ. ಆಗ $y$ಯನ್ನು $x$ನ ಉತ್ಪನ್ನವಾಗಿ ಬರೆಯಬಹುದು ಇದನ್ನು $\sin^{-1}x$ ಎಂದು ಸೂಚಿಸುತ್ತೇವೆ.

ಅಂದರೆ, $x = \sin y \Rightarrow y = \sin^{-1} x$

$x$ ನ ಬೆಲೆಯನ್ನು ಕೊಟ್ಟಾಗ $y$ಯ ಬೆಲೆಯು $\frac{-\pi}{2}$ ಮತ್ತು $\frac{\pi}{2}$ ಬೆಲೆಗಳ ಅಂತರದಲ್ಲಿದ್ದಾಗ ಅದನ್ನು $\sin^{-1} x$ ನ *ಪ್ರಧಾನ ಬೆಲೆ* ಎಂದು ಕರೆಯುತ್ತೇವೆ.

ಉದಾಹರಣೆಗೆ

(i) $\sin^{-1}\left(\frac{\sqrt{3}}{2}\right)$ ನ ಪ್ರಧಾನ ಬೆಲೆ $\frac{\pi}{3}$

(ii) $\sin^{-1}\left(-\frac{\sqrt{3}}{2}\right)$ ನ ಪ್ರಧಾನ ಬೆಲೆ $-\frac{\pi}{3}$

(iii) $\sin^{-1}\left(-\frac{1}{2}\right)$ ನ ಪ್ರಧಾನ ಬೆಲೆ $-\frac{\pi}{6}$

ಒಂದು ಸಂಖ್ಯೆ $x$ ಧನಾತ್ಮಕವಾದಾಗ $\sin^{-1} x$ ಬೆಲೆಯು 0 ಮತ್ತು $\frac{\pi}{2}$ ಗಳ ಅಂತರದಲ್ಲಿರುತ್ತದೆ. ಹಾಗೆಯೇ $x$ ಋಣಾತ್ಮಕವಾದಾಗ $\sin^{-1}x$ ಬೆಲೆಯು $-\frac{\pi}{2}$ ಮತ್ತು

0 ಗಳ ಅಂತರದಲ್ಲಿರುತ್ತದೆ. ಆದುದರಿಂದ ಪ್ರತಿಲೋಮ sine ನ (ಅಂದರೆ $\sin^{-1}$ ನ) ಪ್ರಧಾನ ಬೆಲೆಯು ಅಂದರೆ $\sin^{-1} x$ ನ ಪ್ರಧಾನ ಬೆಲೆಯು $\left[-\frac{\pi}{2}, \frac{\pi}{2}\right]$ ಅಂತರದಲ್ಲಿದ್ದು ಸಾಂಖ್ಯಿಕವಾಗಿ ಕನಿಷ್ಠವಾದ ಬೆಲೆಯಾಗಿರುತ್ತದೆ.

## 8.2 ಪ್ರತಿಲೋಮ cosine ಉತ್ಪನ್ನ ($\cos^{-1}x$)

$x = \cos y$ ಉತ್ಪನ್ನದ ಕ್ಷೇತ್ರವು $0 \le y \le \pi$ ಮತ್ತು ಬಿಂಬ ಗಣವು $-1 \le x \le 1$ ಆದಾಗ ಇದು ಏಕಮೌಲ್ಯ ಉತ್ಪನ್ನವಾಗುತ್ತದೆ. ಆಗ $y$ನ್ನು ಪ್ರತಿಲೋಮ cosine ($\cos^{-1}$) ಉತ್ಪನ್ನವಾಗಿ ಬರೆಯಬಹುದು.

ಅಂದರೆ, $x = \cos y \Rightarrow y = \cos^{-1} x$

ಒಂದು ಸಂಖ್ಯೆ $x$ ಧನಾತ್ಮಕವಾದಾಗ, $\cos^{-1} x$ ವು ಎರಡು ಬೆಲೆಗಳನ್ನು ಹೊಂದಿರುತ್ತದೆ. ಒಂದು ಬೆಲೆಯು 0 ಮತ್ತು $\frac{\pi}{2}$ ಗಳ ಅಂತರದಲ್ಲಿರುತ್ತದೆ ಹಾಗೂ ಇನ್ನೊಂದು ಬೆಲೆ $-\frac{\pi}{2}$ ಮತ್ತು 0 ಗಳ ಅಂತರದಲ್ಲಿರುತ್ತದೆ.

ಉದಾಹರಣೆಗೆ, $\cos\frac{\pi}{3} = \frac{1}{2}$ ಹಾಗೂ $\cos\left(-\frac{\pi}{3}\right) = \frac{1}{2}$

ಆದ್ದರಿಂದ, $\cos^{-1}\left(\frac{1}{2}\right) = \frac{\pi}{3}$ ಅಥವಾ $-\frac{\pi}{3}$ ಆಗಲು ಸಾಧ್ಯ.

ಇಂಥಹ ಸಂದರ್ಭದಲ್ಲಿ ನಾವು ಕನಿಷ್ಠ ಧನಾತ್ಮಕ ಬೆಲೆಯನ್ನು ಪ್ರಧಾನ ಬೆಲೆಯೆಂದು ತೆಗೆದುಕೊಳ್ಳುತ್ತೇವೆ.

ಹಾಗೆಯೇ ಸಂಖ್ಯೆ $x$ ಋಣಾತ್ಮಕವಾದಾಗ $\cos^{-1} x$ ದ ಬೆಲೆಯು $\frac{\pi}{2}$ ಮತ್ತು $\pi$ ಗಳ ಅಂತರದಲ್ಲಿರುತ್ತದೆ. $x$ ಧನಾತ್ಮಕವಾದಾಗ $\cos^{-1} x$ ದ ಪ್ರಧಾನ ಬೆಲೆಯು 0 ಮತ್ತು $\frac{\pi}{2}$ ಗಳ ಅಂತರದಲ್ಲಿರುತ್ತದೆ.

ಆದುದರಿಂದ ಪ್ರತಿಲೋಮ cosine ನ ( ಅಂದರೆ $\cos^{-1}$) ನ *ಪ್ರಧಾನ ಬೆಲೆಯು* $[0,\pi]$ ಅಂತರದಲ್ಲಿರುವ ಕನಿಷ್ಠ ಧನಾತ್ಮಕ ಬೆಲೆಯಾಗುತ್ತದೆ.

## 8.3 ಪ್ರತಿಲೋಮ tangent ಉತ್ಪನ್ನ ($\tan^{-1}x$)

$x = \tan y$ ಉತ್ಪನ್ನದ ಕ್ಷೇತ್ರವು $-\frac{\pi}{2} < y < \frac{\pi}{2}$ ಹಾಗೂ ಬಿಂಬಗಣವು $-\infty < x < \infty$ ಆದಾಗ ಇದು ಏಕಮೌಲ್ಯವಾಗುತ್ತದೆ. ಆಗ $y$ನ್ನು ಪ್ರತಿಲೋಮ tangent ಉತ್ಪನ್ನವಾಗಿ ಬರೆಯಬಹುದು. ಅಂದರೆ

$$x = \tan y \Rightarrow y = \tan^{-1} x$$

ಒಂದು ಸಂಖ್ಯೆ $x$ ಧನಾತ್ಮಕವಾದಾಗ $\tan^{-1} x$ದ ಬೆಲೆಯು 0 ಮತ್ತು $\frac{\pi}{2}$ ಗಳ ಅಂತರದಲ್ಲಿರುತ್ತದೆ. ಉದಾಹರಣೆಗೆ

$$\tan^{-1} \sqrt{3} = \frac{\pi}{3} \text{ ಮತ್ತು } \tan^{-1} (-1) = -\frac{\pi}{4}$$

ಅಂದರೆ, $\tan^{-1}$ ನ ಪ್ರಧಾನ ಬೆಲೆಯು $\left(-\frac{\pi}{2}, \frac{\pi}{2}\right)$ ಅಂತರದಲ್ಲಿರುತ್ತದೆ.

ಇದೇ ರೀತಿಯಾಗಿ $\text{cosec}^{-1}x$, $\sec^{-1} x$ ಮತ್ತು $\cot^{-1} x$ ಪ್ರತಿಲೋಮ ಉತ್ಪನ್ನಗಳನ್ನು ವಿವರಿಸಬಹುದು.

**ಉದಾಹರಣೆಗಳು**

**ಈ ಕೆಳಗಿನವುಗಳ ಬೆಲೆಗಳನ್ನು ಕಂಡುಹಿಡಿಯಿರಿ.**

1. (i) $\sec^{-1}(-2)$ (ii) $\text{cosec}^{-1}(-\sqrt{2})$ (iii) $\tan^{-1}[\tan(260°)]$

   (iv) $\sin^{-1}(\sin\frac{\pi}{4})$ (v) $\cot^{-1}[\cot(-740°)]$

(i) $\sec^{-1}(-2) = \sec^{-1}(2) = \frac{\pi}{3}$

(ii) $\text{cosec}^{-1}(-\sqrt{2}) = -\text{cosec}^{-1}(\sqrt{2}) = -\frac{\pi}{4}$

(iii) $\tan^{-1}[(\tan(260°)]$

$= \tan^{-1}[\tan(180°+80°)] = \tan^{-1}[\tan 80°] = 80°$

(iv) $\sin^{-1}\left(\sin \frac{\pi}{4}\right) = \frac{\pi}{4}$

(v) $\cot^{-1} [\cot (-740°)]$

$= \cot^{-1} [-\cot 740°]$

$= -\cot^{-1} [\cot (720° + 20°)]$

$= -\cot^{-1} [\cot 20°] = -20°$

2. $\sin^{-1} x = \cos^{-1} \sqrt{1-x^2} = \tan^{-1} \left(\frac{x}{\sqrt{1-x^2}}\right)$ ಎಂದು ತೋರಿಸಿ.

$\sin^{-1} x = \theta$ ಆಗಿರಲಿ.

$\therefore x = \sin \theta$

ಈಗ, $\cos\theta = \sqrt{1-\sin^2 \theta}$ ಎಂದು ತಿಳಿದಿದೆ.

$\therefore \cos\theta = 1-x^2$

ಅಥವಾ $\theta = \cos^{-1} \sqrt{1-x^2}$

$\therefore \sin^{-1} x = \cos^{-1} \sqrt{1-x^2}$

ಈಗ, $x = \sin\theta$ ಆಗಿರುವುದರಿಂದ

$$\tan\theta = \frac{\sin\theta}{\cos\theta} = \frac{\sin\theta}{\sqrt{1-\sin^2\theta}}$$

ಅಂದರೆ, $\tan\theta = \frac{x}{\sqrt{1-x^2}}$

$$\therefore \theta = \tan^{-1}\left(\frac{x}{\sqrt{1-x^2}}\right)$$

ಅಥವಾ $\sin^{-1} x = \tan^{-1}\left(\frac{x}{\sqrt{1-x^2}}\right)$

$$\therefore \boxed{\sin^{-1} x = \cos^{-1}\sqrt{1-x^2} = \tan^{-1}\frac{x}{\sqrt{1-x^2}}}$$

3. $\sin^{-1} x + \cos^{-1} x = \frac{\pi}{2}$ ಎಂದು ತೋರಿಸಿ.

$\sin^{-1} x = \theta$ ಎಂದಿರಲಿ.

$\therefore x = \sin\theta$

ಅಥವಾ $x = \cos\left(\frac{\pi}{2} - \theta\right)$

ಅಥವಾ $\theta + \cos^{-1} x = \frac{\pi}{2}$

ಅಂದರೆ, $\boxed{\sin^{-1} x + \cos^{-1} x = \frac{\pi}{2}}$

ಇದೇ ರೀತಿಯಾಗಿ

$\tan^{-1} x + \cot^{-1} x = \pi/2$

ಮತ್ತು $\sec^{-1} x + \operatorname{cosec}^{-1} x = \frac{\pi}{2}$

ಎಂದು ಸಾಧಿಸಬಹುದು.

4. $\sec^{-1} x = \cos^{-1}\frac{1}{x}$ ಎಂದು ತೋರಿಸಿ.

$\sec^{-1} x = \theta$ ಎಂದಿರಲಿ

$\therefore x = \sec\theta$

ಅಥವಾ $\frac{1}{x} = \cos\theta$

$\therefore \cos^{-1} \dfrac{1}{x} = \theta$

ಅಂದರೆ, $\boxed{\sec^{-1} x = \cos^{-1} \dfrac{1}{x}}$

ಇದೇ ರೀತಿಯಲ್ಲಿ, $\boxed{\tan^{-1} x = \cot^{-1} \dfrac{1}{x}}$

ಮತ್ತು $\boxed{\text{cosec}^{-1} x = \sin^{-1} \dfrac{1}{x}}$

5. $\cos^{-1}(-x) = \pi - \cos^{-1} x$ ಎಂದು ತೋರಿಸಿ.

$\cos^{-1}(-x) = \alpha$ ಆಗಿರಲಿ

$\therefore -x = \cos \alpha$

ಅಥವಾ $x = -\cos \alpha$

ಅಥವಾ $x = \cos(\pi - \alpha)$

$\therefore \cos^{-1} x = \pi - \alpha$

ಅಥವಾ $\alpha = \pi - \cos^{-1} x$

$\therefore \boxed{\cos^{-1}(-x) = \pi - \cos^{-1} x}$

ಇದೇ ರೀತಿಯಾಗಿ, $\boxed{\sin^{-1}(-x) = -\sin^{-1} x}$

ಮತ್ತು $\tan^{-1}(-x) = -\tan^{-1} x$

6. $x \geq 0, y \geq 0$ ಮತ್ತು $xy < 1$ ಆದಾಗ $\tan^{-1} x + \tan^{-1} y = \tan^{-1} \dfrac{x+y}{1-xy}$ ಎಂದು ತೋರಿಸಿ. ಇದನ್ನು ಉಪಯೋಗಿಸಿ $2\tan^{-1} x$ನ ಬೆಲೆಯನ್ನು ಕಂಡುಹಿಡಿಯಿರಿ.

(i) $\tan^{-1} x = \alpha$ ಮತ್ತು $\tan^{-1} y = \beta$ ಎಂದಿರಲಿ.

$\therefore x = \tan\alpha$ ಮತ್ತು $y = \tan\beta$

ಈಗ, $\tan(\alpha + \beta) = \dfrac{\tan\alpha + \tan\beta}{1 - \tan\alpha \tan\beta}$ ಎಂದು ತಿಳಿದಿದೆ.

ಅಂದರೆ, $\tan(\alpha + \beta) = \dfrac{x + y}{1 - xy}$

ಅಥವಾ $\alpha + \beta = \tan^{-1} \dfrac{x + y}{1 - xy}$

ಅಂದರೆ , $$\boxed{\tan^{-1} x + \tan^{-1} y = \tan^{-1} \frac{x + y}{1 - xy}}$$

(ಇಲ್ಲಿ $x \geq 0$, $y \geq 0$ ಮತ್ತು $xy < 1$)

(ii) ಮೇಲಿನ ಸೂತ್ರದಲ್ಲಿ $x = y$ ಎಂದು ಆದೇಶಿಸಿದಾಗ

$$\tan^{-1} x + \tan^{-1} x = \tan^{-1} \frac{(x + x)}{1 - xx}$$

ಅಥವಾ $$\boxed{2\tan^{-1} x = \tan^{-1} \frac{2x}{1 - x^2}}$$
ಎಂದಾಗುತ್ತದೆ.

7. $x \geq 0$ ಮತ್ತು $y \geq 0$ ಆದಾಗ $\tan^{-1} x - \tan^{-1} y = \tan^{-1} \dfrac{(x - y)}{1 + xy}$ ಎಂದು ತೋರಿಸಿ.

$\tan^{-1} x = \alpha$ ಮತ್ತು $\tan^{-1} y = \beta$ ಆಗಿರಲಿ.

$\therefore x = \tan\alpha$ ಮತ್ತು $y = \tan\beta$

ಈಗ, $\tan(\alpha + \beta) = \dfrac{\tan\alpha - \tan\beta}{1 + \tan\alpha \tan\beta}$ ಎಂದು ತಿಳಿದಿದೆ.

ಅಂದರೆ, $\tan(\alpha - \beta) = \dfrac{x - y}{1 + xy}$

ಅಥವಾ $\alpha - \beta = \tan^{-1} \dfrac{(x-y)}{1+xy}$

ಅಥವಾ $\boxed{\tan^{-1} x - \tan^{-1} y = \tan^{-1} \dfrac{x-y}{1+xy}}$

8. $\sin^{-1} x + \sin^{-1} y = \sin^{-1} [x\sqrt{1-y^2} + y\sqrt{1-x^2}]$ ಎಂದು ತೋರಿಸಿ.

$\sin^{-1} x = \alpha$ ಮತ್ತು $\sin^{-1} y = \beta$ ಎಂದಿರಲಿ.

$\therefore x = \sin\alpha$ ಮತ್ತು $y = \sin\beta$

ಈಗ, $\sin(\alpha+\beta) = \sin\alpha \cos\beta + \cos\alpha \sin\beta$ ಎಂದು ತಿಳಿದಿದೆ.

ಅಂದರೆ, $\sin(\alpha+\beta) = x\sqrt{1-y^2} + \sqrt{1-x^2}\, y$

$\therefore \alpha + \beta = \sin^{-1} [x\sqrt{1-y^2} + y\sqrt{1-x^2}]$

ಅಥವಾ $\boxed{\sin^{-1} x + \sin^{-1} y = \sin^{-1} [x\sqrt{1-y^2} + y\sqrt{1-x^2}]}$

9. $\sin^{-1} \dfrac{5}{13} + \sin^{-1} \dfrac{1}{25} = \cos^{-1} \dfrac{253}{325}$ ಎಂದು ತೋರಿಸಿ.

$\sin^{-1} \dfrac{5}{13} = \theta$ ಮತ್ತು $\sin^{-1} \dfrac{1}{25} = \phi$ ಎಂದಿರಲಿ.

ಅಂದರೆ, $\dfrac{5}{13} = \sin\theta$ ಮತ್ತು $\dfrac{7}{25} = \sin\phi$

*ABC*. ತ್ರಿಕೋನದಲ್ಲಿ *AB* = 5 ಮತ್ತು *AC* = 13 ಆಗಿರಲಿ (ಚಿತ್ರ 8.1).




ಚಿತ್ರ 8.1

$LMN$ ತ್ರಿಕೋನದಲ್ಲಿ, $LM = 7$ ಮತ್ತು $LN = 25$ ಆಗಿರಲಿ (ಚಿತ್ರ 8.2).

ಆದ್ದರಿಂದ, $\cos\theta = \frac{12}{13}$ ಮತ್ತು $\cos\phi = \frac{24}{25}$




ಚಿತ್ರ 8.2

ಈಗ, $\cos(\theta + \phi) = \cos\theta \ \cos\phi - \sin\theta \ \sin\phi$

$$= \frac{12}{13} \cdot \frac{24}{25} - \frac{5}{13} \cdot \frac{7}{25}$$

$$= \frac{288 - 35}{325} = \frac{253}{325}$$

$$\therefore \theta + \phi = \cos^{-1} \frac{253}{325}$$

ಅಥವಾ $\sin^{-1} \frac{5}{13} + \sin^{-1} \frac{1}{25} = \cos^{-1} \frac{253}{325}$

10. $\tan^{-1} \frac{120}{119} = 2 \sin^{-1} \frac{5}{13}$ ಎಂದು ತೋರಿಸಿ.

$\sin^{-1} \frac{5}{13} = \alpha$ ಎಂದಿರಲಿ

ಅಂದರೆ, $\frac{5}{13} = \sin\alpha \ \therefore \tan\alpha = \frac{5}{12}$

(ಚಿತ್ರ 8.1 ರಲ್ಲಿ $\theta$ ಬದಲಿಗೆ $\alpha$ ತೆಗೆದುಕೊಂಡು ಪರಿಶೀಲಿಸಿ).

ಈಗ, $\tan 2\alpha = \frac{2\tan\alpha}{1-\tan^2\alpha}$ ಎಂದು ತಿಳಿದಿದೆ.

$$\therefore \tan 2\alpha = \frac{2\left(\frac{5}{12}\right)}{1-\frac{25}{144}} = \frac{5}{6} \cdot \frac{144}{119} = \frac{120}{119}$$

$$\therefore 2\alpha = \tan^{-1}\frac{120}{119}$$

ಅಂದರೆ, $2\sin^{-1}\frac{5}{13} = \tan^{-1}\frac{120}{119}$

11. $4\tan^{-1}\frac{1}{5} - \tan^{-1}\frac{1}{70} + \tan^{-1}\frac{1}{99} = \frac{\pi}{4}$ ಎಂದು ತೋರಿಸಿ.

$$\text{LHS} = 2\left(2\tan^{-1}\frac{1}{5}\right) - \left[\tan^{-1}\frac{1}{70} - \tan^{-1}\frac{1}{99}\right]$$

$$= 2\tan^{-1}\left(\frac{2 \cdot \frac{1}{5}}{1-\frac{1}{25}}\right) - \tan^{-1}\left(\frac{\frac{1}{70} - \frac{1}{99}}{1+\frac{1}{99}\cdot\frac{1}{70}}\right)$$

$$= 2\tan^{-1}\frac{5}{12} - \tan^{-1}\frac{29}{6931}$$

$$= \tan^{-1}\left(\frac{2 \cdot \frac{5}{12}}{1-\frac{25}{144}}\right) - \tan^{-1}\frac{29}{6931}$$

$$= \tan^{-1}\frac{120}{119} - \tan^{-1}\frac{29}{6931}$$

$$= \tan^{-1}\left(\frac{\frac{120}{119} - \frac{29}{6931}}{1+\frac{120}{119}\cdot\frac{29}{6931}}\right)$$

$$= \tan^{-1} \frac{828269}{828269} = \tan^{-1} 1 = \frac{\pi}{4}$$

12. $$2 \tan^{-1} \left[ \left[ \frac{a-b}{a+b} \right]^{½} \tan \frac{x}{2} \right] = \cos^{-1} \left[ \frac{b + a \cos x}{a + b \cos x} \right]$$

ಎಂದು ತೋರಿಸಿ.

$$\tan^{-1} \left[ \left[ \frac{a-b}{a+b} \right]^{½} \tan \frac{x}{2} \right] = \theta$$ ಎಂದಿರಲಿ.

$$\therefore \left[ \frac{a-b}{a+b} \right]^{½} \tan \frac{x}{2} = \tan\theta$$

ಈಗ, $\cos 2\theta = \dfrac{1 - \tan^2 \theta}{1 + \tan^2 \theta}$ ಎಂದು ತಿಳಿದಿದೆ.

$$\therefore \cos 2\theta = \frac{1 - \dfrac{a-b}{a+b} \tan^2 \dfrac{x}{2}}{1 + \dfrac{a-b}{a+b} \tan^2 \dfrac{x}{2}}$$

$$= \frac{(a+b) - (a-b) \tan^2 \dfrac{x}{2}}{(a+b) + (a-b) \tan^2 \dfrac{x}{2}}$$

$$= \frac{a+b - (a-b) \dfrac{\sin^2 \dfrac{x}{2}}{\cos^2 \dfrac{x}{2}}}{a+b - (a-b) \dfrac{\sin^2 \dfrac{x}{2}}{\cos^2 \dfrac{x}{2}}}$$

$$= \frac{(a+b)\ \cos^2 \frac{x}{2} - (a-b)\sin^2 \frac{x}{2}}{(a+b)\ \cos^2 \frac{x}{2} + (a-b)\sin^2 \frac{x}{2}}$$

$$= \frac{a\left(\cos^2 \frac{x}{2} - \sin^2 \frac{x}{2}\right) + b\left(\cos^2 \frac{x}{2} + \sin^2 \frac{x}{2}\right)}{a\left(\cos^2 \frac{x}{2} + \sin^2 \frac{x}{2}\right) + b\left(\cos^2 \frac{x}{2} - \sin^2 \frac{x}{2}\right)}$$

ಅಂದರೆ, $\cos 2\theta = \dfrac{a \cos x + b}{a + b \cos x}$

$\therefore 2\theta = \cos^{-1}\left[\dfrac{b + a\cos x}{a + b\cos x}\right]$

ಅಥವಾ $2\tan^{-1}\left[\left[\dfrac{a-b}{a+b}\right]^{½} \tan\dfrac{x}{2}\right] = \cos^{-1}\left[\dfrac{b + a\cos x}{a + b\cos x}\right]$

13. $\cos[\tan^{-1}\{\sin(\cot^{-1} x)\}] = \left[\dfrac{x^2+1}{x^2+2}\right]^{½}$. ಎಂದು ಸಾಧಿಸಿ.

$\cot^{-1} x = \alpha$ ಎಂದಿರಲಿ.

ಅಂದರೆ $x = \cot\alpha$

$\Delta^{le}$ $ABC$ ಯಲ್ಲಿ $BC = x$, $AB = 1$ ಆಗಿರಲಿ (ಚಿತ್ರ 8.3).

$\therefore \sin\alpha = \dfrac{1}{\sqrt{1+x^2}}$

$\alpha = \sin^{-1} \dfrac{1}{\sqrt{1+x^2}}$




ಚಿತ್ರ 8.3

ಆದ್ದರಿಂದ ಸಾಧಿಸಬೇಕಾಗಿರುವ ಸಮೀಕರಣದಲ್ಲಿ

$$\text{LHS} = \cos\left[\tan^{-1} \sin \sin^{-1} \left(\frac{1}{\sqrt{1+x^2}}\right)\right]$$

$$= \cos\left(\tan^{-1} \frac{1}{\sqrt{1+x^2}}\right)$$

$$= \cos \cos^{-1}\left[\frac{1+x^2}{2+x^2}\right]^{½} \qquad \text{(ಚಿತ್ರ 8.4)}$$

$$= \left[\frac{1+x^2}{2+x^2}\right]^{½} \equiv \text{RHS}$$




ಚಿತ್ರ 8.4

14. $\cos\left[2\tan^{-1}\frac{1}{7}\right] = \sin\left[4\tan^{-1}\frac{1}{3}\right]$ ಎಂದು ತೋರಿಸಿ.

$\tan^{-1}\frac{1}{7} = \alpha$ ಎಂದಿರಲಿ.

$$\therefore \text{LHS} = \cos\left[\tan^{-1}\frac{2.\frac{1}{7}}{1-\left(\frac{1}{7}\right)^2}\right]$$

$$\left[\text{ಏಕೆಂದರೆ } 2\tan^{-1}x = \tan^{-1}\frac{2x}{1-x^2}\right]$$

$$= \cos\left[\tan^{-1}\frac{7}{24}\right]$$

$$= \cos\left[\cos^{-1}\frac{24}{25}\right] = \frac{24}{25} \qquad \text{.... (1)}$$

$$RHS = \sin\left[2\left(2\tan^{-1}\frac{1}{3}\right)\right]$$

$$= \sin\left[2\tan^{-1}\frac{2.\frac{1}{3}}{1-\frac{1}{9}}\right]$$

$$= \sin\left[2\tan^{-1}\frac{3}{4}\right]$$

$$= \sin\left[\tan^{-1}\frac{2.\frac{3}{4}}{1-\frac{9}{16}}\right]$$

$$= \sin\left[\tan^{-1}\frac{24}{7}\right]$$

$$= \sin\left[\sin^{-1}\frac{24}{25}\right] = \frac{24}{25} \quad .... (2)$$

(1) ಮತ್ತು (2) ರಿಂದ ಫಲಿತಾಂಶವನ್ನು ಸಾಧಿಸಿದಂತಾಯಿತು.

15. $\cos^{-1}\frac{x}{a} + \cos^{-1}\frac{y}{b} = \alpha$ ಎಂದಿದ್ದರೆ

$\frac{x^2}{a^2} - \frac{2xy}{ab}\cos\alpha + \frac{y^2}{b^2} = \sin^2\alpha$ ಎಂದು ಸಾಧಿಸಿ.

$\cos^{-1}\frac{x}{a} = \theta$ ಮತ್ತು $\cos^{-1}\frac{y}{b} = \phi$ ಎಂದಿರಲಿ.

ಅಂದರೆ, $\frac{x}{a} = \cos\theta$ ಮತ್ತು $\frac{y}{b} = \cos\phi$

$\therefore \theta + \phi = \alpha$ (ಕೊಟ್ಟಿರುವ ಸಮೀಕರಣದಿಂದ)

ಅಥವಾ $\cos(\theta + \phi) = \cos\alpha$

ಅಂದರೆ $\cos\theta\cos\phi - \sin\theta\ \sin\phi = \cos\alpha$

ಅಥವಾ $$\frac{x}{a} \cdot \frac{y}{b} - \left[1 - \frac{x^2}{a^2}\right]^{½}\left[1 - \frac{y^2}{b^2}\right]^{½} = \cos\alpha$$

$$\therefore \left(\cos\alpha - \frac{xy}{ab}\right)^2 = \left[1 - \frac{x^2}{a^2}\right]\left[1 - \frac{y^2}{b^2}\right]$$

ಅಂದರೆ, $$\cos^2\alpha + \frac{x^2y^2}{a^2b^2} - \frac{2xy}{ab}\cos\alpha = 1 - \frac{y^2}{b^2} - \frac{x^2}{a^2} + \frac{x^2y^2}{a^2b^2}$$

ಅಥವಾ $$\frac{x^2}{a^2} + \frac{y^2}{b^2} - \frac{2xy}{ab}\cos\alpha = 1 - \cos^2\alpha$$

$$\therefore \frac{x^2}{a^2} + \frac{y^2}{b^2} - \frac{2\,xy\cos\alpha}{ab} = \sin^2\alpha$$

16. $\tan^{-1} x = 2\tan^{-1}[\text{cosec}(\tan^{-1} x) - \tan(\cot^{-1} x)]$ ಎಂದು ಸಾಧಿಸಿ.

$\tan^{-1} x = \theta$ ಎಂದಿರಲಿ

$\therefore x = \tan\theta$

ಅಥವಾ $x = \cot\left[\frac{\pi}{2} - \theta\right]$

ಅಥವಾ $\cot^{-1} x = \left(\frac{\pi}{2} - \theta\right)$

$$\text{RHS} = 2\tan^{-1}\left[\text{cosec}\,\theta - \tan\left(\frac{\pi}{2} - \theta\right)\right]$$

$$= 2\tan^{-1}[\text{cosec}\,\theta - \cot\theta]$$

$$= 2\tan^{-1}\left[\frac{1 - \cos\theta}{\sin\theta}\right]$$

$$= 2\tan^{-1}\left[\frac{2\sin^2\frac{\theta}{2}}{2\sin\frac{\theta}{2}\cos\frac{\theta}{2}}\right]$$

$$= 2\tan^{-1}\left(\tan\frac{\theta}{2}\right) = 2\,\frac{\theta}{2} = \theta = \tan^{-1} x$$

$$= \text{LHS}$$

## 8.4 ತ್ರಿಕೋನಮಿತೀಯ ಪ್ರತಿಲೋಮ ಉತ್ಪನ್ನಗಳ ಸಮೀಕರಣಗಳು

1. $\sin^{-1} x + \sin^{-1} 2x = \dfrac{\pi}{3}$ ಸಮೀಕರಣವನ್ನು ಬಿಡಿಸಿ.

$\sin^{-1} x = \alpha$ ಮತ್ತು $\sin^{-1} 2x = \beta$ ಎಂದಿರಲಿ.

ಅಂದರೆ, $x = \sin\alpha$ ಮತ್ತು $2x = \sin\beta$

ಆದ್ದರಿಂದ ದತ್ತ ಸಮೀಕರಣವು

$$\alpha + \beta = \frac{\pi}{3}$$

ಎಂದಾಗುತ್ತದೆ. ಆದ್ದರಿಂದ

$$\cos(\alpha + \beta) = \cos\frac{\pi}{3}$$

ಅಥವಾ $\cos\alpha \cos\beta - \sin\alpha \sin\beta = \dfrac{1}{2}$

ಅಥವಾ $\sqrt{1-x^2}\ \sqrt{1-4x^2} - x.2x = \dfrac{1}{2}$

ಅಥವಾ $\sqrt{(1-x^2)(1-4x^2)} = \dfrac{1}{2} + 2x^2$

ಅಥವಾ $(1-x^2)(1-4x^2) = \left[\dfrac{1}{2} + 2x^2\right]^2$

ಅಂದರೆ, $1-4x^2 - x^2 + 4x^4 = \dfrac{1}{4} + 4x^4 + 2x^2$

$\therefore 7x^2 = \frac{3}{4}$ ಅಥವಾ $x = \pm\frac{1}{2}\sqrt{3/7}$

2. $\tan^{-1}\frac{x+1}{x-1} + \tan^{-1}\frac{x-1}{x} = \tan^{-1}(-7)$ ಬಿಡಿಸಿ.

ಕೊಟ್ಟಿರುವ ಸಮೀಕರಣವನ್ನು

$$\tan^{-1}\left(\frac{\frac{x+1}{x-1} + \frac{x-1}{x}}{1 - \frac{x+1}{x-1}\frac{x-1}{x}}\right) = \tan^{-1}(-7)$$

ಎಂದು ಸರಳೀಕರಿಸಬಹುದು. ಇದರಿಂದ

$$\frac{2x^2 - x + 1}{1 - x} = -7$$

ಅಥವಾ $2x^2 - 8x + 8 = 0$ ಅಥವಾ $x^2 - 4x + 4 = 0$

ಅಂದರೆ, $(x-2)^2 = 0$

$\therefore x = 2$

3. $\tan^{-1}\frac{\sqrt{1+x^2} - \sqrt{1-x^2}}{\sqrt{1+x^2} + \sqrt{1-x^2}} = \alpha$ ಬಿಡಿಸಿ

ಕೊಟ್ಟಿರುವ ಸಮೀಕರಣದಿಂದಾಗಿ

$$\frac{\sqrt{1+x^2} - \sqrt{1-x^2}}{\sqrt{1+x^2} + \sqrt{1-x^2}} = \tan\alpha = \frac{\sin\alpha}{\cos\alpha}$$

ಮೇಲಿನ ಸಮೀಕರಣದಲ್ಲಿ ಪ್ರಮಾಣಗಳಿಗೆ "ಕಾಂಪೊನೆಂಡೊ–ಎಟ್–ಡಿವಿಡೆಂಡೊ" ನಿಯಮವನ್ನು ಪ್ರಯೋಗಿಸಿದಾಗ

$$\frac{2\sqrt{1+x^2}}{2\sqrt{1-x^2}} = \frac{\sin\alpha + \cos\alpha}{\cos\alpha - \sin\alpha}$$

ಅಥವಾ $\frac{1+x^2}{1-x^2} = \left(\frac{\sin\alpha + \cos\alpha}{\cos\alpha - \sin\alpha}\right)^2$

ಅಥವಾ $\frac{1+x^2}{1-x^2} = \frac{1+\sin 2\alpha}{1-\sin 2\alpha}$ ಎಂದಾಗುತ್ತದೆ.

$\therefore\ x^2 = \sin 2\alpha$

ಅಥವಾ $x = \pm\sqrt{\sin 2\alpha}$

4. $\sin[2\cos^{-1}\cot(2\tan^{-1}x)] = 0$ ಬಿಡಿಸಿ.

ಕೊಟ್ಟಿರುವ ಸಮೀಕರಣವನ್ನು

$$\sin\left[2\cos^{-1}\cot\left(\cot^{-1}\frac{1-x^2}{2x}\right)\right] = 0$$

ಎಂದು ಬರೆಯಬಹುದು.

ಅಂದರೆ, $\sin\left[2\cos^{-1}\frac{1-x^2}{2x}\right] = 0$ .... (1)

ಈಗ $\cos^{-1}\frac{1-x^2}{2x} = \alpha$ ಎಂದಿರಲಿ.

ಅಂದರೆ, $\frac{1-x^2}{2x} = \cos\alpha$ .... (2)

$\therefore\ 2\cos^{-1}\frac{1-x^2}{2x} = 2\alpha$

ಈಗ, $\cos 2\alpha = 2\cos^2\alpha - 1$ ಎಂದು ತಿಳಿದಿದೆ.

$\therefore\ \cos 2\alpha = 2\left(\frac{1-x^2}{2x}\right)^2 - 1$ [(2) ರಿಂದ]

ಅಥವಾ $\cos 2\alpha = \frac{1+x^4-4x^2}{2x^2}$

$\therefore\ 2\alpha = \cos^{-1}\left(\frac{1+x^4-4x^2}{2x^2}\right)$

ಅಥವಾ $2\cos^{-1}\dfrac{1-x^2}{2x} = \cos^{-1}\dfrac{1+x^4-4x^2.}{2x^2}$

(3) ನ್ನು (1)ರಲ್ಲಿ ಆದೇಶಿಸಿದಾಗ

$$\sin\left[\cos^{-1}\frac{x^4-4x^2+1}{2x^2}\right] = 0$$

ಅಥವಾ $\sin\left[\sin^{-1}\sqrt{1-\left(\dfrac{x^4-4x^2+1}{2x^2}\right)^2}\right] = 0$

ಅಥವಾ $4x^4-(x^4-4x^2+1)^2 = 0$

ಅಥವಾ $(x^4-6x^2+1)(x^4-2x^2+1) = 0$

ಅಂದರೆ, $x^4-6x^2+1 = 0$ ಅಥವಾ $x^4-2x^2+1 = 0$

ಅಂದರೆ, $x^2 = 3 \pm 2\sqrt{2}$ ಅಥವಾ $(x^2-1)^2 = 0$

ಅಂದರೆ, $x^2 = (1 \pm \sqrt{2})^2$ ಅಥವಾ $x = \pm 1$

ಅಂದರೆ, $x = \pm(1 \pm \sqrt{2})$

ಆದ್ದರಿಂದ $x = \pm 1, \pm(1 \pm \sqrt{2})$

## ಅಭ್ಯಾಸ – 8

I ಈ ಕೆಳಗಿನವುಗಳ ಬೆಲೆಗಳನ್ನು ಕಂಡುಹಿಡಿಯಿರಿ.

1. $\sin^{-1}(-1)$
2. $\cos^{-1}[\cos 600^\circ]$
3. $\cos^{-1}(\sin 225^\circ)$
4. $\cot\left(\sin^{-1}\dfrac{3}{5}\right)$
5. $\sin\left[2\sin^{-1}\dfrac{4}{5}\right]$
6. $\sin^{-1}\dfrac{1}{x} + \cos^{-1}\dfrac{1}{x}$
7. $\cos^{-1}\dfrac{1}{5\sqrt{2}} - \sin^{-1}\dfrac{4}{\sqrt{17}}$
8. $\sin^{-1}\dfrac{3}{5} + \tan^{-1}\dfrac{1}{7}$
9. $\cos^{-1}(\sin 220^\circ)$
10. $\sin^{-1}[\cos(-105^\circ)]$

11. $\sin\left(\frac{1}{2}\cos^{-1}\frac{4}{5}\right)$

12. $\sin(\tan^{-1} 2)$

13. $\cot^{-1}(\tan 100°)$

14. $\cos\left[\cos^{-1}\frac{15}{17} - \cos^{-1}\frac{7}{25}\right]$

II ಈ ಕೆಳಗಿನವುಗಳನ್ನು ಸಾಧಿಸಿ.

1. $\sin^{-1}\frac{3}{5} + \sin^{-1}\frac{8}{17} = \sin^{-1}\frac{77}{85}$

2. $\sin^{-1}\frac{4}{5} + \sin^{-1}\frac{5}{13} + \sin^{-1}\frac{16}{65} = \frac{\pi}{2}$

3. $\cos^{-1}\frac{9}{\sqrt{82}} + \operatorname{cosec}^{-1}\frac{\sqrt{41}}{4} = \frac{\pi}{4}$

4. $2\tan^{-1} x = \sin^{-1}\frac{2x}{1+x^2} = \cos^{-1}\frac{1-x^2}{1+x^2}$

5. $2\cos^{-1} x = \cos^{-1}(2x^2-1)$

6. $\tan\alpha = \frac{1}{7}$, $\sin\beta = \frac{1}{\sqrt{10}}\left(\alpha > 0, \beta < \frac{\pi}{2}\right)$ ಆದಾಗ $2\beta = \frac{\pi}{4} - \alpha$ ಎಂದು ತೋರಿಸಿ.

7. $\tan^{-1}\frac{1}{2} + \tan^{-1}\frac{1}{3} = \frac{\pi}{4}$

8. $\tan^{-1}\frac{1}{3} - \tan^{-1}\frac{1}{7} + \tan^{-1}\frac{1}{8} = \frac{\pi}{4}$

9. $\tan^{-1}\left(\frac{2a-b}{b\sqrt{3}}\right) + \tan^{-1}\left(\frac{2b-a}{a\sqrt{3}}\right) = \frac{\pi}{4}$

10. $\tan^{-1}\frac{2}{3} = \frac{1}{2}\tan^{-1}\frac{12}{5}$

11. $\tan^{-1}\frac{1}{4} + \tan^{-1}\frac{2}{9} = \frac{1}{2}\cos^{-1}\frac{3}{5}$

12. $4\tan^{-1}\frac{1}{5} - \tan^{-1}\frac{1}{70} + \tan^{-1}\frac{1}{99} = \frac{\pi}{4}$

13. $\tan(2\tan^{-1}x) = 2\tan(\tan^{-1}x + \tan^{-1}x^3)$

14. $\cot^{-1}\left(\frac{xy+1}{x-y}\right) + \cot^{-1}\left(\frac{yz+1}{y-z}\right) + \cot^{-1}\left(\frac{zx+1}{z-x}\right) = 0$

15. $\tan^{-1}x + \tan^{-1}y + \tan^{-1}z = \pi$ ಆದಾಗ $x+y+z = xyz$ ಎಂದು ತೋರಿಸಿ.

16. $\sec^{-1}\sqrt{1+x^2} + \mathrm{cosec}^{-1}\frac{\sqrt{1+y^2}}{y} + \cot^{-1}\frac{1}{z} = 3\pi$

ಆದರೆ $x+y+z = xyz$ ಎಂದು ತೋರಿಸಿ.

III ಈ ಕೆಳಗಿನ ಸಮೀಕರಣಗಳನ್ನು ಬಿಡಿಸಿರಿ.

1. $\sin^{-1}\frac{5}{x} + \sin^{-1}\frac{12}{x} = \frac{\pi}{2}$

2. $\tan^{-1}2x + \tan^{-1}3x = \frac{\pi}{4}$

3. $2\tan^{-1}(\cos x) = \tan^{-1}(2\,\mathrm{cosec}\,x)$

4. $\tan^{-1}x + 2\cot^{-1}x = \frac{2\pi}{3}$

5. $\sin^{-1}2x - \sin^{-1}x\sqrt{3} = \sin^{-1}x$

6. $2\cot^{-1}5 + 2\cot^{-1}8 + \cos^{-1}x = \frac{\pi}{4}$

7. $\cot^{-1}x + \sin^{-1}\frac{1}{\sqrt{5}} = \frac{\pi}{4}$

8. $\cos^{-1}\frac{1-a^2}{1+a^2} - \cos^{-1}\frac{1-b^2}{1+b^2} = 2\tan^{-1}x$

9. $2 \tan^{-1} (\cos x) = \tan^{-1} (2 \operatorname{cosec} x)$

10. $\tan^{-1} x + \cot^{-1} (x-1) = \sin^{-1} \frac{4}{5} + \cos^{-1} \frac{3}{5}$

11. $\cos^{-1} (2x^2-1) = 2 \cos^{-1} \frac{1}{2}$

12. $\sin^{-1} 2x = \frac{\pi}{4} - \sin^{-1} x$

# ಅಧ್ಯಾಯ – 9

# ತ್ರಿಕೋನಮಿತೀಯ ಸಮೀಕರಣಗಳ ಸಾಮಾನ್ಯ ಪರಿಹಾರಗಳು

## 9.1 ಪೀಠಿಕೆ

ತ್ರಿಕೋನಮಿತಿಯಲ್ಲಿ ಪ್ರಶ್ನೆಗಳನ್ನು ಬಿಡಿಸುವಾಗ ಅನೇಕ ಬಾರಿ ತ್ರಿಕೋನಮಿತೀಯ ಉತ್ಪನ್ನಗಳನ್ನು ಒಳಗೊಂಡಿರುವ ಸಮೀಕರಣಗಳು ಎದುರಾಗುವುವು.

ಉದಾಹರಣೆಗೆ, $4 \sin x + 3 \cos x = 5$

$\tan^2 x + \sec x = 2$

ಎಂಬುವು ತ್ರಿಕೋನಮಿತೀಯ ಸಮೀಕರಣಗಳು.

ಈಗ, $\cos x = \frac{1}{2}$ ಎಂಬ ಸಮೀಕರಣವನ್ನು ತೆಗೆದುಕೊಳ್ಳೋಣ.

ಇಲ್ಲಿ, $x = \frac{\pi}{4}$ ಎಂದು ಸುಲಭವಾಗಿ ಹೇಳಬಹುದು.

ಆದರೆ, $x = \frac{7\pi}{4}, \frac{9\pi}{4}, \frac{17\pi}{4}$ ಬೆಲೆಗಳೂ ಈ ಸಮೀಕರಣದ ಉತ್ತರವಾಗುತ್ತವೆ.

ಈ ಎಲ್ಲಾ ಬೆಲೆಗಳನ್ನು ಒಳಗೊಂಡ ಒಂದು ಸಾಮಾನ್ಯ ಬೆಲೆಯನ್ನು ಕಂಡುಹಿಡಿಯುವ ವಿಧಾನವನ್ನು ನಾವು ಈಗ ಪರಿಶೀಲಿಸುತ್ತೇವೆ.

## 9.2 $\sin x = k, -1 \leq k \leq 1$, ಎಂಬ ಸಮೀಕರಣದ ಸಾಮಾನ್ಯ ಪರಿಹಾರ

$\sin x = k$ .... (1)

ಸಮೀಕರಣದ ಅತಿ ಕನಿಷ್ಠ ಧನಾತ್ಮಕ ಪರಿಹಾರವು $\alpha$ ಆಗಿರಲಿ.

$\therefore \sin x = \sin \alpha$

ಅಥವಾ $\sin x - \sin \alpha = 0$

ಅಥವಾ $2\cos\frac{x+\alpha}{2}\sin\frac{x-\alpha}{2}=0$

$\therefore \cos\frac{x+\alpha}{2}=0$ ಅಥವಾ $\sin\frac{x-\alpha}{2}=0$

$\therefore \frac{x+\alpha}{2}=(2n+1)\frac{\pi}{2}$ ಅಥವಾ $\frac{x-\alpha}{2}=2n\frac{\pi}{2}$

ಅಂದರೆ, $x=(2n+1)\pi-\alpha$ .... (2)

ಅಥವಾ $x=2n\pi+\alpha$ .... (3)

ಈಗ, (2) ಮತ್ತು (3)ನ್ನು ಒಟ್ಟುಗೂಡಿಸಿ ನಾವು ಸಮೀಕರಣ (1)ರ ಸಾಮಾನ್ಯ ಪರಿಹಾರವನ್ನು ಈ ರೀತಿ ಬರೆಯಬಹುದು:

$\boxed{x=n\pi+(-1)^n\alpha}$ **(ಇಲ್ಲಿ $n\in I$, ಧನ ಪೂರ್ಣಾಂಕಗಳ ಗಣ)**

## 9.3 $\cos x=k, -1\le k\le 1$, ಎಂಬ ಸಮೀಕರಣದ ಸಾಮಾನ್ಯ ಪರಿಹಾರ

$\cos x=k$ ... (1)

ಸಮೀಕರಣದ ಕನಿಷ್ಠ ಧನಾತ್ಮಕ ಪರಿಹಾರವು $\alpha$ ಆಗಿರಲಿ.

$\therefore \cos x=\cos\alpha$

ಅಥವಾ $\cos x-\cos\alpha=0$

ಅಥವಾ $-2\sin\frac{x+\alpha}{2}\,.\,\sin\frac{x-\alpha}{2}=0$

$\therefore \sin\frac{x+\alpha}{2}=0$ ಅಥವಾ $\sin\frac{x-\alpha}{2}=0$

$\therefore \frac{x+\alpha}{2}=2n\left(\frac{\pi}{2}\right)$ ಅಥವಾ $\frac{x-\alpha}{2}=2n\left(\frac{\pi}{2}\right)$

ಅಂದರೆ, $x=2n\pi-\alpha$ ... (2)

ಅಥವಾ $x=2n\pi+\alpha$ ... (3)

ಈಗ, (2) ಮತ್ತು (3)ನ್ನು ಒಟ್ಟುಗೂಡಿಸಿ ನಾವು ಸಮೀಕರಣ (1)ರ ಸಾಮಾನ್ಯ ಪರಿಹಾರವನ್ನು ಈ ರೀತಿ ಬರೆಯಬಹುದು:

$$\boxed{x = 2n\pi \pm \alpha}, \ (n \in I)$$

## 9.4 tan *x* = *k*, $-\infty < k < \infty$, ಎಂಬ ಸಮೀಕರಣದ ಸಾಮಾನ್ಯ ಪರಿಹಾರ

$\tan x = k$ .... (1)

ಸಮೀಕರಣ (1) ರ ಕನಿಷ್ಠ ಧನಾತ್ಮಕ ಪರಿಹಾರವು $\alpha$ ಆಗಿರಲಿ.

$\therefore \tan x = \tan \alpha$

ಅಥವಾ $\dfrac{\sin x}{\cos x} - \dfrac{\sin \alpha}{\cos \alpha} = 0$

ಅಥವಾ $\sin x \cos \alpha - \cos x \sin \alpha = 0$

ಅಂದರೆ, $\sin (x-\alpha) = 0$

$\therefore x-\alpha = n\pi$

ಅಥವಾ $\boxed{x = n\pi+\alpha}$, $(n\in I)$

ಎಂಬುದು (1)ರ ಸಾಮಾನ್ಯ ಪರಿಹಾರ.

**ಸೂಚನೆ:** sin *x* ಮತ್ತು cosec *x*
cos *x* ಮತ್ತು sec *x*
tan *x* ಮತ್ತು cot *x*

ಈ ಜೊತೆ ಪ್ರಮಾಣಗಳ ಸಾಮಾನ್ಯ ಪರಿಹಾರಗಳು ಒಂದೇ ಆಗಿರುತ್ತವೆ.

## 9.5 *a* cos *x* + *b* sin *x* = *c* ಎಂಬ ಸಮೀಕರಣದ ಸಾಮಾನ್ಯ ಪರಿಹಾರ

$a \cos x + b \sin x = c$ .... (1)

ಸಮೀಕರಣ (1) ನ್ನು $\sqrt{a^2+b^2}$ ನಿಂದ ಭಾಗಿಸಿದಾಗ

$$\frac{a}{\sqrt{a^2+b^2}} \cos x + \frac{b}{\sqrt{a^2+b^2}} \sin x = \frac{c}{\sqrt{a^2+b^2}} \quad .... (2)$$

ಎಂದಾಗುತ್ತದೆ. ಇದರಲ್ಲಿ

$$\frac{a}{\sqrt{a^2+b^2}} = \cos\beta$$ ಎಂದು ಬರೆದಾಗ

$$\frac{b}{\sqrt{a^2+b^2}} = \sin\beta$$ ಆಗುತ್ತದೆ.

ಸಮೀಕರಣ (2)ನ್ನು ಈ ರೀತಿಯಾಗಿ ಬರೆಯಬಹುದು :

$$\cos\beta\cos x + \sin\beta\sin x = \frac{c}{\sqrt{a^2+b^2}}$$

ಅಥವಾ $\cos(x-\beta) = k$ $\left[\text{ಇಲ್ಲಿ } k = \frac{c}{\sqrt{a^2+b^2}}\right]$

ಈಗ, $\alpha$ ವು ಈ ಸಮೀಕರಣದ ಕನಿಷ್ಠ ಧನಾತ್ಮಕ ಪರಿಹಾರವಾಗಿದ್ದರೆ, ಇದರ ಸಾಮಾನ್ಯ ಪರಿಹಾರವನ್ನು ನಾವು ಈ ರೀತಿಯಾಗಿ ಬರೆಯಬಹುದು:

$$x - \beta = 2n\pi \pm \alpha$$

ಅಥವಾ $x = 2n\pi \pm \alpha + \beta,\ (n \in I)$

**ಸೂಚನೆ:** ಸಮೀಕರಣ (1)ನ್ನು ಇನ್ನೊಂದು ರೀತಿಯಲ್ಲಿ ಬಿಡಿಸಬಹುದು. ಸಮೀಕರಣ (2) ರಲ್ಲಿ $\frac{a}{\sqrt{a^2+b^2}} = \sin\beta$ ಎಂದು ಬರೆದಾಗ $\frac{b}{\sqrt{a^2+b^2}} = \cos\beta$ ಆಗುತ್ತದೆ.

ಆಗ ಸಮೀಕರಣ (2)ನ್ನು

$$\sin\beta\cos x + \cos\beta\sin x = k$$

ಅಥವಾ $\sin(x+\beta) = k$

ಎಂದು ಬರೆಯಬಹುದು. ಈ ಸಮೀಕರಣದ ಕನಿಷ್ಠ ಧನಾತ್ಮಕ ಪರಿಹಾರವು $\alpha$ ಆಗಿರಲಿ. ಆಗ ಸಮೀಕರಣದ ಸಾಮಾನ್ಯ ಪರಿಹಾರವು

$$x+\beta = n\pi + (-1)^n\alpha$$

ಅಥವಾ $\mathbf{x = n\pi + (-1)^n\alpha - \beta,\ n \in I}$

## ಉದಾಹರಣೆಗಳು

ಈ ಕೆಳಗಿನ ತ್ರಿಕೋನಮಿತೀಯ ಸಮೀಕರಣಗಳ ಸಾಮಾನ್ಯ ಪರಿಹಾರಗಳನ್ನು ಕಂಡುಹಿಡಿಯಿರಿ.

1. $\sin x = \frac{\sqrt{3}}{2}$

ಇಲ್ಲಿ $\alpha = \frac{\pi}{3}$

$\therefore x = n\pi + (-1)^n \frac{\pi}{3}$ , $(n \in I)$

2. $\cos^2 x = \frac{1}{4}$

ವರ್ಗಮೂಲಗಳನ್ನು ತೆಗೆದುಕೊಂಡಾಗ

$\cos x = \pm \frac{1}{2}$

ಅಂದರೆ (i) $\cos x = \frac{1}{2}$ ಅಥವಾ (ii) $\cos x = -\frac{1}{2}$

ಇಲ್ಲಿ, $\alpha = \frac{\pi}{3}$ ಇಲ್ಲಿ, $\alpha = \pi - \frac{\pi}{3} = 2\frac{\pi}{3}$

$\therefore x = 2n\pi \pm \frac{\pi}{3}$ $\therefore x = 2n\pi \pm \frac{2\pi}{3}$

ಆದ್ದರಿಂದ ಸಾಮಾನ್ಯ ಪರಿಹಾರ $x = 2n\pi \pm \frac{\pi}{3}, 2n\pi \pm \frac{2\pi}{3}$, $(n \in I)$.

3. $\tan 3\theta = \cot 7\theta$

ಇದನ್ನು $\tan 3\theta = \tan\left(\frac{\pi}{2} - 7\theta\right)$ ಎಂದು ಬರೆಯಬಹುದು.

ಇಲ್ಲಿ $\alpha = \frac{\pi}{2} - 7\theta$ ಆಗಿರಲಿ.

$\therefore 3\theta = \left(n\pi + \frac{\pi}{2}\right) - 7\theta$

ಅಥವಾ $\theta = \frac{1}{10}\left[n\pi + \frac{\pi}{2}\right]$, $n \in I$.

ಎಂಬುದು ಸಾಮಾನ್ಯ ಪರಿಹಾರ.

4. $\cot^2\theta + \left[\sqrt{3} + \frac{1}{\sqrt{3}}\right]\cot\theta + 1 = 0.$

ಸಮೀಕರಣವನ್ನು $(\cot\theta + \sqrt{3})\left[\cot\theta + \frac{1}{\sqrt{3}}\right] = 0$

ಎಂದು ಅಪವರ್ತಿಸಿ ಬರೆಯಬಹುದು.

ಅಂದರೆ, $\cot\theta + \sqrt{3} = 0$ ಅಥವಾ $\cot\theta + \frac{1}{\sqrt{3}} = 0$

$\therefore \cot\theta = -\sqrt{3}$ ಅಥವಾ $\cot\theta = -\frac{1}{\sqrt{3}}$

ಇಲ್ಲಿ $\alpha = -\frac{\pi}{6}$ ಇಲ್ಲಿ $\alpha = -\frac{\pi}{3}$

$\therefore \theta = n\pi - \frac{\pi}{6}$ $\therefore \theta = n\pi - \frac{\pi}{3}$

ಆದ್ದರಿಂದ ಸಾಮಾನ್ಯ ಪರಿಹಾರ: $\theta = n\pi - \frac{\pi}{6}, n\pi - \frac{\pi}{3}$ $(n \in I)$.

5. $\sin^2\theta - 2\cos\theta + \frac{1}{4} = 0$

ಕೊಟ್ಟಿರುವ ಸಮೀಕರಣವನ್ನು ಈ ಕೆಳಕಂಡಂತೆ ಬರೆಯಬಹುದು:

$$(1 - \cos^2\theta) - 2\cos\theta + \frac{1}{4} = 0$$

ಅಥವಾ $(-\cos^2\theta) - 2\cos\theta + \frac{5}{4} = 0$

ಅಥವಾ $4\cos^2\theta + 8\cos\theta - 5 = 0$

ಅಥವಾ $2\cos\theta\ (2\cos\theta + 5) - 1\ (2\cos\theta + 5) = 0$

ಅಥವಾ $(2\cos\theta + 5)(2\cos\theta - 1) = 0$

$\therefore 2\cos\theta + 5 = 0$ ಅಥವಾ $2\cos\theta - 1 = 0$

π

ಅಂದರೆ, $\cos\theta = -\frac{5}{2}$ ಅಥವಾ $\cos\theta = \frac{1}{2} \therefore \alpha = \frac{\phantom{\pi}}{3}$

$\cos\theta$ ದ ಬೆಲೆಯು $-1$ ಮತ್ತು 1ರ ಅಂತರದಲ್ಲಿರುವ ಕಾರಣ $\frac{-5}{2}$ ಎಂಬ ಬೆಲೆಯನ್ನು ಹೊಂದಲು ಸಾಧ್ಯವಿಲ್ಲ.

ಆದ್ದರಿಂದ, ಸಾಮಾನ್ಯ ಪರಿಹಾರವು $\theta = 2n\pi \pm \frac{\pi}{3}$

6. $\cot\theta + \tan\theta = 2\operatorname{cosec}\theta$

ಕೊಟ್ಟಿರುವ ಸಮೀಕರಣವನ್ನು

$$\frac{\cos\theta}{\sin\theta} + \frac{\sin\theta}{\cos\theta} = \frac{2}{\sin\theta}$$

ಎಂದು ಬರೆಯಬಹುದು. ಅಂದರೆ

$\cos^2\theta + \sin^2\theta = 2\cos\theta$

ಅಥವಾ $1 = 2\cos\theta \therefore \cos\theta = \frac{1}{2}$

ಆದ್ದರಿಂದ, ಸಾಮಾನ್ಯ ಪರಿಹಾರ $\theta = 2n\pi \pm \frac{\pi}{3}, n \in I.$

7. $\sin x - \cos x = \cos 3x - \sin 3x$

ಕೊಟ್ಟಿರುವ ಸಮೀಕರಣವನ್ನು ಹೀಗೆ ಬರೆಯಬಹುದು:

$\sin x + \sin 3x = \cos 3x + \cos x$

ಅಂದರೆ, $2\sin 2x \cos x = 2\cos 2x \cos x$

ಅಥವಾ $2\cos x\,[\sin 2x - \cos 2x] = 0$

$\therefore \cos x = 0$ ಅಥವಾ $\sin 2x = \cos 2x$ ಅಂದರೆ, $\tan 2x = 1$

ಇಲ್ಲಿ, $\alpha = \frac{\pi}{2}$ ; ಇಲ್ಲಿ, $\alpha = \frac{\pi}{4}$

$x = 3$ ಎಂದು ತೆಗೆದುಕೊಳ್ಳುವ ಬದಲು 3 ರ ಸಮೀಪದ ಬೆಲೆಗಳನ್ನು 3 ಕ್ಕೆ ಹತ್ತಿರ ಹತ್ತಿರವಾಗುವಂತೆ ತೆಗೆದುಕೊಳ್ಳೋಣ. ಉದಾಹರಣೆಗೆ

$x = 2.90$ ಆದರೆ, $y = \dfrac{(2.9)^2 - 9}{2.9 - 3} = (2.9) + 3 = 5.9$

$x = 2.99$ ಆದರೆ, $y = \dfrac{(2.99)^2 - 9}{2.99 - 3} = (2.99) + 3 = 5.99$

ಇದೇ ರೀತಿ ಮತ್ತೊಂದು ಕಡೆಯಿಂದ $x$ ನ ಬೆಲೆ 3 ನ್ನು ಸಮೀಪಿಸಿದಾಗ,

$x = 3.1$ ಆದರೆ, $y = \dfrac{(3.1)^2 - 9}{3.1 - 3}$

$= 3.1 + 3$

$= 6.1$

$x = 3.01$ ಆದರೆ $y = \dfrac{(3.01)^2 - 9}{3.01 - 3}$

$= \dfrac{(3.01) + 3}{1}$

$= 6.01$

$x = 3.001$ ಆದರೆ $y = \dfrac{(3.001)^2 - 9}{(3.001 - 3)} = 3.001 + 3$

$= 6.001$

ಇತ್ಯಾದಿ.

$x$ ನ ಬೆಲೆಯು ಎರಡು ಕಡೆಯಿಂದ 3 ಅನ್ನು ಸಮೀಪಿಸಿದಂತೆಲ್ಲಾ $y$ ನ ಬೆಲೆಯು 6 ಅನ್ನು ಸಮೀಪಿಸುತ್ತದೆ; $y$ ಮತ್ತು 6 ರ ವ್ಯತ್ಯಾಸವನ್ನು, $x$ ಅನ್ನು 3 ರ ಸಾಕಷ್ಟು ಸಮೀಪ ತೆಗೆದುಕೊಳ್ಳುವುದರ ಮೂಲಕ, ಸಾಕಷ್ಟು ಕಡಿಮೆ ಮಾಡಬಹುದು.

$\therefore \lim_{x \to 3} \dfrac{x^2 - 9}{x - 3} = 6$ ಆಗುವುದು.

ಅಂಶ, ಛೇದಗಳೆರಡೂ ಸೊನ್ನೆ ಆದಾಗ್ಯೂ ಭಿನ್ನರಾಶಿಯು ಒಂದು ನಿರ್ದಿಷ್ಟ ಮಿತಿಯನ್ನು ಪಡೆದಿದೆ ಎಂದು ತೋರಿಸಲು ಮೇಲಿನ ಉದಾಹರಣೆ ಸಮಂಜಸವಾಗಿದೆ.

ಸೂಚನೆ: ಮೇಲಿನ ಉದಾಹರಣೆಯಲ್ಲಿ, ಮಿತಿಯ ಬೆಲೆಯನ್ನು, ಅಂಶ, ಛೇದಗಳಲ್ಲಿನ ಸಾಮಾನ್ಯ ಅಪವರ್ತನವನ್ನು ತೆಗೆದು ಹಾಕುವುದರ ಮೂಲಕ ಸುಲಭವಾಗಿ ಕಂಡುಹಿಡಿಯಬಹುದು. ಆದರೆ ಅನೇಕ ಸಂದರ್ಭಗಳಲ್ಲಿ ಈ ರೀತಿಯ ಸಾಮಾನ್ಯ ಅಪವರ್ತನ ಇಲ್ಲದೆಯೂ ಇರಬಹುದು.

3. $\lim_{h\to 0} \frac{1}{h} \log \left[1+ \frac{h}{x}\right]$ ಅನ್ನು ಕಂಡುಹಿಡಿಯಿರಿ.

ಈಗ, $\lim_{h\to 0} \frac{1}{h} \log \left(1+\frac{h}{x}\right) = \lim_{h\to 0} \frac{1}{x} \log \left(1+\frac{h}{x}\right)^{x/h}$

$$= \frac{1}{x} \lim_{h\to 0} \log \left(1+\frac{h}{x}\right)^{x/h}$$

$\frac{h}{x} = k$ ಇರಲಿ; $k\to 0$ ಆದಾಗ $h\to 0$ ಆಗುವುದು.

ಆಗ $\lim_{h\to 0} \frac{1}{x} \log \left(1+ \frac{h}{x}\right)^{x/h} = \frac{1}{x} \lim_{k\to 0} \log_e \ (1+k)^{1/K}$

$$= \frac{1}{x} \log_e e \quad \left[\text{ಏಕೆಂದರೆ, } \lim_{n\to\infty} \left(1+\frac{1}{n}\right)^n = e\right]$$

$$= \frac{1}{x}$$

$$\therefore \lim_{h\to 0} \frac{1}{h} \log \left(1+\frac{h}{x}\right) = \frac{1}{x}$$

4. $\lim_{x\to 7} \frac{\sqrt{(8-x)} - \sqrt{(x-6)}}{(7-x)}$ ಅನ್ನು ಕಂಡುಹಿಡಿಯಿರಿ.

ಈಗ, $x=7$ ಎಂದು ಆದೇಶಿಸಿದರೆ ಅಂಶ ಮತ್ತು ಛೇದಗಳೆರಡೂ ಸೊನ್ನೆ ಆಗುವುದು ಮತ್ತು ಉತ್ಪನ್ನದ ಬೆಲೆಯು $\frac{0}{0}$ ಎಂಬ ಅನಿರ್ದಿಷ್ಟ ರೂಪವನ್ನು ಹೊಂದುವುದು. ಅಂಶ ಮತ್ತು ಛೇದಗಳೆರಡನ್ನೂ $\sqrt{(8-x)} + \sqrt{(x-6)}$ ರಿಂದ ಗುಣಿಸಿ ಅಂಶವನ್ನು ವಿಕರಣಗೊಳಿಸಿದಾಗ

$$\frac{(8-x) - (x-6)}{(7-x)\ \{\sqrt{(8-x)} + \sqrt{(x-6)}\}}$$

ಎಂದಾಗುವುದು. ಇದನ್ನು

$$\frac{2(7-x)}{(7-x)\ \{\sqrt{(8-x)} + \sqrt{(x-6)}\}}$$

ಎಂದು ಬರೆಯಬಹುದು. ಇದರ ಬೆಲೆ

$$\frac{2}{\{\sqrt{(8-x)} + \sqrt{(x-6)}\}}$$

ಈಗ, $x$ ನ ಬೆಲೆ 7 ಎನ್ನುವುದನ್ನು ಬಿಟ್ಟು, $x$ ಚರವು 7 ಅನ್ನು ಸಮೀಪಿಸಿದಂತೆಲ್ಲಾ ಈ ಭಿನ್ನರಾಶಿಯು 1 ಅನ್ನು ಸಮೀಪಿಸುವುದು. ಅಂದರೆ ಉತ್ಪನ್ನದ ಮಿತಿ 1 ಎಂದಾಯಿತು. ಅಂದರೆ

$$\lim_{x \to 7} \frac{\sqrt{8-x} - \sqrt{x-6}}{7-x} = 1$$

ಇಲ್ಲಿ $x = 7$ ಆದಾಗ ದತ್ತ ಬೀಜ ವಾಕ್ಯವು ಬೆಲೆಯನ್ನು ಹೊಂದಿಲ್ಲ ಅಥವಾ ಅದು ನಿರೂಪಿಸಲಾಗಿಲ್ಲ ಎಂಬುದನ್ನು ಗಮನಿಸಿ.

5. $y = \frac{8x+5}{4x+3}$ ಆದರೆ

(i) $x \to 0$ ಆದಾಗ, (ii) $x \to \infty$ ಆದಾಗ

$y$ ನ ಮಿತಿಯನ್ನು ಕಂಡುಹಿಡಿಯಿರಿ.

(i) $x \to 0$ ಆದಾಗ ಭಿನ್ನರಾಶಿಯ ಅಂಶವನ್ನು 5 ಕ್ಕೆ ಸಮೀಪವಾಗಿಯೂ, ಛೇದವನ್ನು 3 ಕ್ಕೆ ಸಮೀಪವಾಗಿಯೂ ಮಾಡಬಹುದು. ಅಂದರೆ $x$ ಅನ್ನು ಅತಿ ಸಣ್ಣ ಬೆಲೆಯಾಗಿ ಮಾಡಿದಾಗ $y$ ನ ಮಿತಿ 5/3 ನ್ನು ಸಮೀಪಿಸುತ್ತದೆ. ಅಂದರೆ

$$\lim_{x \to 0} \frac{8x+5}{4x+3} = \frac{5}{3}$$

ಈ ಸಂದರ್ಭದಲ್ಲಿ ಮಿತಿಯು ಉತ್ಪನ್ನದ ಒಂದು ಬೆಲೆ ಆಗಿದೆ. ಏಕೆಂದರೆ, $x = 0$ ಆದಾಗ $y = \frac{5}{3}$ ಆಗುವುದು.

(ii) $x$ ಅನ್ನು ಅಂಶ, ಛೇದಗಳೆರಡರಲ್ಲೂ ಸಾಮಾನ್ಯ ಅಪವರ್ತನವಾಗಿ ಪರಿಗಣಿಸಿ

$$y = \frac{x\left(8+\frac{5}{x}\right)}{x\left(4+\frac{3}{x}\right)}$$

$$\text{ಅಥವಾ } y = \frac{\left(8+\frac{5}{x}\right)}{\left(4+\frac{3}{x}\right)}$$

ಎಂದು ಬರೆಯಬಹುದು. $x$ ಅನ್ನು ಸಾಕಷ್ಟು ದೊಡ್ಡ ಬೆಲೆಯಾಗಿ ತೆಗೆದುಕೊಂಡಾಗ $\frac{5}{x}, \frac{3}{x}$ ಗಳು ಅತಿ ಸಣ್ಣ ಬೆಲೆ ಆಗುವುವು. ಅಂದರೆ $x \to \infty$ ಆದಾಗ

$$\frac{5}{x} \to 0, \quad \frac{3}{x} \to 0$$

$$\therefore \lim_{x\to\infty} \frac{8+\frac{5}{x}}{4+\frac{3}{x}} = \frac{8}{4} = 2$$

ಈ ಸಂದರ್ಭದಲ್ಲಿ $x$ಗೆ ಎಷ್ಟು ದೊಡ್ಡ ಬೆಲೆ ತೆಗೆದುಕೊಂಡಾಗ್ಯೂ ಉತ್ಪನ್ನದ ಬೆಲೆಯು 2 ಆಗುವುದಿಲ್ಲ. ಅಂದರೆ, ಈ ಉದಾಹರಣೆಯಲ್ಲಿ ಮಿತಿಯು ಉತ್ಪನ್ನದ ಬೆಲೆ ಅಲ್ಲ.

## 11.4 ಮಿತಿಗೆ ಸಂಬಂಧಿಸಿದ ಪ್ರಮೇಯಗಳು

$\lim_{x\to a} f(x) = l$ ಮತ್ತು $\lim_{x\to a} g(x) = m$ ಆದರೆ

ಈ ಕೆಳಗಿನ ನಾಲ್ಕು ಪ್ರಮೇಯಗಳು ಅನ್ವಯಿಸುತ್ತವೆ :

(1) $\lim_{x\to a} [f(x) + g(x)] = l + m = \lim_{x\to a} f(x) + \lim_{x\to a} g(x)$

ಅಂದರೆ ಎರಡು ಉತ್ಪನ್ನಗಳ ಮೊತ್ತದ ಮಿತಿಯು ಎರಡು ಉತ್ಪನ್ನಗಳ ಮಿತಿಗಳ ಮೊತ್ತಕ್ಕೆ ಸಮ.

(2) $\lim\limits_{x\to a} [f(x) - g(x)] = l - m = \lim\limits_{x\to a} f(x) - \lim\limits_{x\to a} g(x)$

ಎರಡು ಉತ್ಪನ್ನಗಳ ವ್ಯತ್ಯಾಸದ ಮಿತಿಯು ಎರಡು ಉತ್ಪನ್ನಗಳ ಮಿತಿಯ ವ್ಯತ್ಯಾಸಕ್ಕೆ ಸಮ.

(3) $\lim\limits_{x\to a} [f(x) \,.\, g(x)] = l \,.\, m = \lim\limits_{x\to a} f(x) \,.\, \lim\limits_{x\to a} g(x)$

ಎರಡು ಉತ್ಪನ್ನಗಳ ಗುಣಲಬ್ಧದ ಮಿತಿಯು ಎರಡು ಉತ್ಪನ್ನಗಳ ಮಿತಿಗಳ ಗುಣ ಲಬ್ಧಕ್ಕೆ ಸಮ.

(4) $\lim\limits_{x\to a} \dfrac{f(x)}{g(x)} = \dfrac{l}{m} = \dfrac{\lim\limits_{x\to a} f(x)}{\lim\limits_{x\to a} g(x)}$ ($m \neq 0$ ಆದಾಗ ಮಾತ್ರ)

ಎರಡು ಉತ್ಪನ್ನಗಳ ಭಾಗಲಬ್ಧದ ಮಿತಿಯು ಆ ಉತ್ಪನ್ನಗಳ ಮಿತಿಗಳ ಭಾಗಲಬ್ಧಕ್ಕೆ ಸಮ. ಆದರೆ ಛೇದದ ಮಿತಿ 0 ಗೆ ಸಮವಿಲ್ಲದಾಗ ಮಾತ್ರ ಈ ಪ್ರಮೇಯವು ಅನ್ವಯಿಸುತ್ತದೆ.

(5) $\lim\limits_{x\to a} \dfrac{1}{f(x)} = \dfrac{1}{l} = \dfrac{1}{\lim\limits_{x\to a} f(x)}$ [$l \neq 0$ ಆದಾಗ ಮಾತ್ರ]

## ಕೆಲವು ಮುಖ್ಯವಾದ ಮಿತಿಗಳು

ಪದವಿ ಪೂರ್ವ ಮೊದಲನೇ ವರ್ಷದ ಪಠ್ಯ ಪುಸ್ತಕಗಳಲ್ಲಿ ಈಗಾಗಲೇ ಪರಿಶೀಲಿಸಲಾಗಿರುವ ಕೆಲವು ಮುಖ್ಯವಾದ ಮಿತಿಗಳು ಈ ಕೆಳಕಂಡಂತಿವೆ:

(1) $\lim\limits_{\theta\to 0} \dfrac{\sin\theta}{\theta} = 1$ ($\theta$ ರೇಡಿಯನ್‌ಗಳಲ್ಲಿ)

(2) $\lim\limits_{\theta\to 0} \dfrac{\tan\theta}{\theta} = 1$ ($\theta$ ರೇಡಿಯನ್‌ಗಳಲ್ಲಿ)

(3) $\lim\limits_{x\to a} \dfrac{x^n - a^n}{x-a} = na^{n-1}$

(ಇಲ್ಲಿ $n$ ಧನ ಅಥವಾ ಋಣ ಪೂರ್ಣಾಂಕ ಅಥವಾ ಭಿನ್ನರಾಶಿ ಆಗಿರಬಹುದು)

(4) $\lim_{x\to\infty}\left(1+\frac{1}{x}\right)^x = e$ ($e$ ಎನ್ನುವುದು ನೇಪೀರಿಯನ್ ಲಾಗರಿತಮ್‌ನ ಆಧಾರ)

(5) $\lim_{x\to 0} (1+x)^{1/x} = e$

(6) $\lim_{x\to 0} \frac{(e^x - 1)}{x} = 1$

(7) $\lim_{x\to 0} \frac{a^x-1}{x} = \log_e a$

## 11.5 ಎಡದಿಂದ ಮಿತಿ ಮತ್ತು ಬಲದಿಂದ ಮಿತಿ

**(i) ಎಡದಿಂದ ಮಿತಿ:**

$x<a$ ಆದಾಗ $f$ ಎನ್ನುವ ಒಂದು ಉತ್ಪನ್ನವು ನಿರೂಪಿತವಾಗಿದೆ ಎಂದು ಭಾವಿಸೋಣ. $a$ ಗಿಂತ ಕಡಿಮೆ ಬೆಲೆಗಳನ್ನು ತೆಗೆದುಕೊಂಡು $x$ ಚರವು $a$ಯನ್ನು ಸಮೀಪಿಸಿದಾಗ ಬರುವ ಉತ್ಪನ್ನದ ಮಿತಿಯನ್ನು ಉತ್ಪನ್ನದ *ಎಡದಿಂದ ಮಿತಿ* (ಅಥವಾ ಎಡಮಿತಿ) ಎನ್ನುತ್ತೇವೆ.

ಅದನ್ನು ಈ ರೀತಿ ನಿರೂಪಿಸಬಹುದು:

$\varepsilon>0$ ಎಂಬ ಎಷ್ಟೇ ಸಣ್ಣದಾದರೂ ಸಂಖ್ಯೆಯನ್ನು ಕೊಟ್ಟಾಗ

$0 < |a-x| < \delta$ ಆದಾಗಲ್ಲಾ

$|f(x) - L|<\varepsilon$ ಆಗುವಂತೆ

$\delta$ ಎಂಬ ಧನ ಸಂಖ್ಯೆಯು ಇರುವುದಾದರೆ $L$ ಸಂಖ್ಯೆಯನ್ನು $f(x)$ ಉತ್ಪನ್ನದ ಎಡಮಿತಿ ಎನ್ನುತ್ತೇವೆ. ಇದನ್ನು

$$\lim_{x\to a-} f(x) = L \quad \text{ಅಥವಾ} \quad \lim_{x\to a-0} f(x) = L$$

ಎಂದು ಬರೆಯಬಹುದು.

**ಸೂಚನೆ:**

ಒಂದು ಉತ್ಪನ್ನದ ಎಡಮಿತಿಯನ್ನು ಕಂಡುಹಿಡಿಯುವಾಗ, $x$ ಅನ್ನು $a-h$ ಗೆ ಬದಲಿಸಿ ($h > 0$) $h$ ಅನ್ನು 0 ಗೆ ಸಮೀಪಿಸಿದಂತೆ ಮಿತಿಯನ್ನು ಕಂಡುಹಿಡಿಯಬಹುದು. ಅಂದರೆ

$$\lim_{x\to a-} f(x) = \lim_{h\to 0} f(a-h),\ h > 0$$

(ii) ಬಲದಿಂದ ಮಿತಿ

$f$ ಎನ್ನುವ ಒಂದು ಉತ್ಪನ್ನವು $x > a$ ಆದಾಗ ನಿರೂಪಿತವಾಗಿದೆ ಎಂದು ಭಾವಿಸೋಣ. $a$ಗಿಂತ ಹೆಚ್ಚಿನ ಬೆಲೆಗಳನ್ನು ತೆಗೆದುಕೊಂಡು $x$ ಚರವು $a$ ಯನ್ನು ಸಮೀಪಿಸಿದಾಗ ಬರುವ ಉತ್ಪನ್ನದ ಮಿತಿಯನ್ನು ಉತ್ಪನ್ನದ ಬಲಮಿತಿ (ಅಥವಾ *ಬಲದಿಂದ ಮಿತಿ*) ಎನ್ನಬಹುದು. ಅದನ್ನು ಈ ರೀತಿ ನಿರೂಪಿಸಬಹುದು:

ಎಷ್ಟೇ ಸಣ್ಣದಾದರೂ $\varepsilon > 0$ ಎಂಬ ಸಂಖ್ಯೆಯನ್ನು ಕೊಟ್ಟಾಗ,

$0 < |x - a| < \delta$ ಆದಾಗಲೆಲ್ಲಾ

$|f(x) - L| < \varepsilon$ ಆಗುವಂತೆ

$\delta$ ಎಂಬ ಸಾಕಷ್ಟು ಸಣ್ಣ ಧನ ಸಂಖ್ಯೆಯು ಇರುವುದಾದರೆ $L$ ಸಂಖ್ಯೆಯನ್ನು $f(x)$ ಉತ್ಪನ್ನದ ಬಲಮಿತಿ ಎನ್ನುತ್ತೇವೆ. ಇದನ್ನು ಈ ರೀತಿ ಬರೆಯಬಹುದು :

$$\lim_{x \to a+} f(x) = L \quad \text{ಅಥವಾ} \quad \lim_{x \to a+0} f(x) = L$$

**ಸೂಚನೆ:**

ಬಲಮಿತಿ ಕಂಡುಹಿಡಿಯಲು, $x$ ಗೆ $a+h$ ಅನ್ನು ($h>0$) ಆದೇಶಿಸಿ, $h$ ಅನ್ನು 0 ಗೆ ಸಮೀಪಿಸುವಂತೆಮಾಡಿ, ಮಿತಿಯನ್ನು ಕಂಡುಹಿಡಿಯಬಹುದು. ಅಂದರೆ

$$\lim_{x \to a+} f(x) = \lim_{h \to 0} f(a+h),\ h > 0$$

## ಮಿತಿಗೆ ಸಂಬಂಧಿಸಿದ ಪ್ರಮೇಯ

$x$ ಚರವು $a$ ಯನ್ನು ಸಮೀಪಿಸಿದಂತೆಲ್ಲಾ $f(x)$ ಎಂಬ ಉತ್ಪನ್ನದ ಮಿತಿಯು ಅಸ್ತಿತ್ವದಲ್ಲಿ ಇದ್ದರೆ ಮತ್ತು ಇರಬೇಕಾದರೆ $f(x)$ ಉತ್ಪನ್ನದ ಎಡಮಿತಿ ಮತ್ತು ಬಲಮಿತಿಗಳೆರಡೂ ಅಸ್ತಿತ್ವದಲ್ಲಿದ್ದು, ಎರಡೂ ಸಮವಾಗಿರಬೇಕು. ಇದನ್ನು ಈ ರೀತಿ ಬರೆಯಬಹುದು.

$$\lim_{x \to a+} f(x) = \lim_{x \to a-} f(x) = L$$

ಆದರೆ ಮತ್ತು ಆಗಬೇಕಾದರೆ

$$\lim_{x \to a} f(x) = L$$

**ಉದಾಹರಣೆ 1:** $f$ ಎನ್ನುವ ಉತ್ಪನ್ನವು ಈ ರೀತಿ ನಿರೂಪಿತವಾಗಿದೆ :

$f(x) = x^2,\ x < 2$ ಆದಾಗ

$f(x) = 10-3x,\ x > 2$ ಆದಾಗ

ಈ ಕೆಳಕಂಡ ಮೂರು ಮಿತಿಗಳನ್ನು (ಅಸ್ತಿತ್ವದಲ್ಲಿದ್ದರೆ) ಕಂಡುಹಿಡಿಯಿರಿ :

(i) $\lim_{x \to 2-} f(x)$

(ii) $\lim_{x \to 2+} f(x)$

(iii) $\lim_{x \to 2} f(x)$

(i) $\lim_{x \to 2-} f(x) = \lim_{h \to 0} (2+h)^2, h > 0$

$$= \lim_{h \to 0} (4+2h + h^2) = 4$$

(ii) $\lim_{x \to 2+} f(x) = \lim_{h \to 0} [(10-3(h+2)], h > 0$

$$= \lim_{h \to 0} (10-6-3h) = 4$$

(iii) ಉತ್ಪನ್ನದ ಎಡಮಿತಿ ಮತ್ತು ಬಲಮಿತಿ ಸಮನಾಗಿರುವುದರಿಂದ, ಅಂದರೆ

$$\lim_{x \to 2-} f(x) = \lim_{x \to 2+} f(x) = 4$$

$$\therefore \lim_{x \to 2} f(x) = 4$$

ಇಲ್ಲಿ $x=2$ ಆದಾಗ $f(x)$ ನಿರೂಪಿತವಾಗಿಲ್ಲ ಎಂಬುದನ್ನು ಗಮನಿಸಿ.

**ಉದಾಹರಣೆ 2:**

$f(x) = \frac{|x|}{x}$ ಆದರೆ

(i) $\lim_{x \to 0+} f(x)$

(ii) $\lim_{x \to 0-} f(x)$

(iii) $\lim_{x \to 0} f(x)$ (ಅಸ್ತಿತ್ವದಲ್ಲಿದ್ದರೆ)

ಈ ಮೇಲಿನ ಮಿತಿಗಳನ್ನು ಕಂಡುಹಿಡಿಯಿರಿ.

(i) $\lim_{x\to 0+} f(x) = \lim_{h\to 0+} \frac{|0+h|}{0+h} = \lim_{h\to 0} \frac{h}{h} = 1 \quad (h > 0)$

(ii) $\lim_{x\to 0-} f(x) = \lim_{x\to 0-} \frac{|x|}{x} = \lim_{h\to 0} \frac{|(0-h)|}{0-h} \quad (h > 0)$

$= \lim_{h\to 0} \frac{h}{-h} = -1$

(iii) $f$ ನ ಎಡಮಿತಿ ಮತ್ತು ಬಲಮಿತಿ ಬೇರೆ ಬೇರೆಯಾಗಿವೆ. ಅಂದರೆ

$\lim_{x\to 0+} f(x) \neq \lim_{x\to 0-} f(x)$. ಆದ್ದರಿಂದ

$\lim_{x\to 0} f(x)$ ಅಸ್ತಿತ್ವದಲ್ಲಿಲ್ಲ.

## 11.6 ಉತ್ಪನ್ನಗಳ ಅವಿಚ್ಛಿನ್ನತೆ

ಮಿತಿಯ ಪರಿಕಲ್ಪನೆಯು ಅವಿಚ್ಛಿನ್ನ ಉತ್ಪನ್ನಗಳ ವಿಶೇಷ ಗುಣಗಳನ್ನು ಗಣಿತದ ರೀತಿಯಲ್ಲಿ ಬರೆಯಲು ಸಹಾಯಕವಾಗಿದೆ.

**ವ್ಯಾಖ್ಯೆ:**

$y = f(x)$ ಎನ್ನುವುದು $x$ ಎಂಬ ನೈಜ ಚರದ ಉತ್ಪನ್ನವಾಗಿರಲಿ. $f(x)$ ಎನ್ನುವುದು $x = a$ ಯನ್ನು ಒಳಗೊಂಡ ಒಂದು ತೆರೆದ ಅಂತರದಲ್ಲಿ ನಿರೂಪಿತವಾಗಿದೆ ಎಂದು ಭಾವಿಸೋಣ.

ಈ ಕೆಳಗಿನ ಮೂರು ಷರತ್ತುಗಳು ಅಗತ್ಯವಾಗಿ ಪೂರೈಕೆಯಾದಾಗ $f(x)$ ಉತ್ಪನ್ನವು $a$ ನಲ್ಲಿ ಅವಿಚ್ಛಿನ್ನವಾಗಿದೆ ಎಂದು ಹೇಳುತ್ತೇವೆ. ಅವು ಯಾವುವೆಂದರೆ

(i) $x$ ಚರವು $a$ ಯನ್ನು ಸಮೀಪಿಸಿದಂತೆಲ್ಲಾ $f(x)$ ಉತ್ಪನ್ನದ ಮಿತಿಯು ಅಸ್ತಿತ್ವದಲ್ಲಿರಬೇಕು.

(ii) $x = a$ ನಲ್ಲಿ ಉತ್ಪನ್ನವು ನಿರೂಪಿತವಾಗಿರಬೇಕು. ಅಂದರೆ, $f(a)$ ಅಸ್ತಿತ್ವದಲ್ಲಿರಬೇಕು ಮತ್ತು

(iii) $x$ ಚರವು $a$ ಯನ್ನು ಸಮೀಪಿಸಿದಂತೆ, ಉತ್ಪನ್ನದ ಮಿತಿಯು $x = a$ ನಲ್ಲಿನ ಉತ್ಪನ್ನದ ಬೆಲೆಗೆ ಸಮವಾಗಿರಬೇಕು. ಅಂದರೆ

$$\lim_{x \to a} f(x) = f(a)$$

ಆಗಿರಬೇಕು. ಈ ಮೇಲಿನ ಷರತ್ತುಗಳಲ್ಲಿ ಯಾವುದಾದರೂ ಒಂದು ಷರತ್ತು ಪೂರೈಕೆ ಆಗದಿದ್ದರೂ ಆ ಉತ್ಪನ್ನವು $a$ ಬಿಂದುವಿನಲ್ಲಿ *ವಿಚ್ಛಿನ್ನ* ವಾಗಿದೆ ಎಂದು ಹೇಳಬಹುದು.

ಮಿತಿಯ ವ್ಯಾಖ್ಯೆಯನ್ನು ಉಪಯೋಗಿಸಿ ಒಂದು ಉತ್ಪನ್ನದ ಅವಿಚ್ಛಿನ್ನತೆಯನ್ನು ($x = a$ ನಲ್ಲಿ) ಈ ರೀತಿ ನಿರೂಪಿಸಬಹುದು:

ಎಷ್ಟೇ ಸಣ್ಣದಾದ $\varepsilon > 0$ ಕೊಟ್ಟಾಗಲೂ

$0 < |x-a| < \delta$ ಆದಾಗಲೆಲ್ಲಾ

$|f(x) - f(a)| < \varepsilon$ ಆಗುವಂತೆ

$\delta>0$ ಎಂಬ ಸಣ್ಣಸಂಖ್ಯೆ ಅಸ್ತಿತ್ವದಲ್ಲಿರುತ್ತದೆ ಅಂದರೆ

$$\lim_{x \to a} f(x) = f(a)$$

**ಸೂಚನೆ:** $x$ ಚರವು $a$ ಯನ್ನು ಸಮೀಪಿಸಿದಂತೆಲ್ಲಾ ಒಂದು ಉತ್ಪನ್ನದ ಮಿತಿಯು ಅಸ್ತಿತ್ವದಲ್ಲಿದ್ದರೆ, ಆಗ

$$\lim_{x \to a-} f(x) \text{ ಮತ್ತು } \lim_{x \to a+} f(x)$$

ಅಸ್ತಿತ್ವದಲ್ಲಿರುತ್ತವೆ ಮತ್ತು ಈ ಎರಡು ಮಿತಿಗಳೂ ಪರಸ್ಪರ ಸಮವಾಗಿರುತ್ತವೆ. (ಅಂದರೆ $x$ ಚರವು $a$ ಯನ್ನು ಸಮೀಪಿಸಿದಂತೆಲ್ಲಾ ಉತ್ಪನ್ನದ ಎಡಮಿತಿ ಮತ್ತು ಬಲಮಿತಿಗಳು ಅಸ್ತಿತ್ವದಲ್ಲಿರುತ್ತವೆ ಮತ್ತು ಪರಸ್ಪರ ಸಮವಾಗಿರುತ್ತವೆ).

### ಒಂದು ಮುಚ್ಚಿದ ಅಂತರ $[a,b]$ ಯಲ್ಲಿ ಅವಿಚ್ಛಿನ್ನತೆ :

$f(x)$ ಎಂಬ ಉತ್ಪನ್ನವು ಮುಚ್ಚಿದ ಅಂತರ (ಕ್ಲೋಸ್ಡ್ ಇಂಟರ್‌ವಲ್) $[a,b]$ ಯಲ್ಲಿ ನಿರೂಪಿತವಾಗಿದ್ದು, ಅವಿಚ್ಛಿನ್ನವಾಗಿರಬೇಕಾದರೆ, ಆ ಅಂತರದ ಪ್ರತಿ ಬಿಂದುವಿನಲ್ಲಿ ಉತ್ಪನ್ನವು ಅವಿಚ್ಛಿನ್ನವಾಗಿರಬೇಕು.

ಸೂಚನೆ: ಈ ರೀತಿ ಮುಚ್ಚಿದ ಅಂತರ [a,b] ಯಲ್ಲಿ ನಿರೂಪಿತವಾದ ಉತ್ಪನ್ನವು $x < a$ ಆದಾಗ ಮತ್ತು $x > b$ ಆದಾಗ ನಿರೂಪಿತವಾಗಿಲ್ಲ. ಅಂದರೆ

$$\lim_{x \to a-} f(x) \text{ ಮತ್ತು } \lim_{x \to b+} f(x)$$

ಅಸ್ತಿತ್ವದಲ್ಲಿಲ್ಲ. ಆದ್ದರಿಂದ [a,b] ಯಲ್ಲಿ ಉತ್ಪನ್ನವು ಅವಿಚ್ಛಿನ್ನವಾಗಿದ್ದರೆ, $x=a$ ನಲ್ಲಿ $a$ ಯ ಬಲಭಾಗದಲ್ಲಿಯೂ, $x = b$ ನಲ್ಲಿ $b$ ಯ ಎಡಭಾಗದಲ್ಲಿಯೂ ಮತ್ತು ಅಂತರದ ಇತರ ಪ್ರತಿಯೊಂದು ಬಿಂದುವಿನಲ್ಲಿಯೂ ಉತ್ಪನ್ನವವು ಅವಿಚ್ಛಿನ್ನವಾಗಿರುತ್ತದೆ.

**ಉದಾಹರಣೆಗಳು**

1. $f(x) = \dfrac{\sin 5x}{x}$, $x \neq 0$ ಆದಾಗ

ಮತ್ತು $f(x) = 1$, $x = 0$ ಆದಾಗ.

$f(x)$ ಉತ್ಪನ್ನವು $x=0$ ನಲ್ಲಿ ಅವಿಚ್ಛಿನ್ನವಾಗಿದೆಯೇ ಎಂದು ಪರೀಕ್ಷಿಸಿ.

(i) $\lim_{x \to 0} f(x) = \lim_{x \to 0} \dfrac{\sin 5x}{x}$

$= \lim_{x \to 0} (5) \dfrac{\sin 5x}{5x} = (5)(1) = 5$

ಈಗ, 11.6 ವಿಭಾಗದಲ್ಲಿ ತಿಳಿಸಿರುವ ಮೊದಲನೆಯ ಷರತ್ತು ಪೂರೈಕೆ ಆಗಿದೆ.

(ii) $f(0) = 1$ ಆದ್ದರಿಂದ ಎರಡನೆಯ ಷರತ್ತು ಪೂರೈಕೆ ಆಗಿದೆ.

(iii) $\lim_{x \to 0} f(x) = 5 \neq f(0) = 1$

ಅಂದರೆ, ಮೂರನೆಯ ಷರತ್ತು ಪೂರೈಕೆ ಆಗಿಲ್ಲ. ಆದ್ದರಿಂದ $f(x)$ ಉತ್ಪನ್ನವು $x = 0$ ನಲ್ಲಿ ಅವಿಚ್ಛಿನ್ನವಾಗಿಲ್ಲ.

2. $f(x) = 5+x$, $x \leq 1$ ಆದಾಗ ಮತ್ತು

$f(x) = 5-x$, $x > 1$ ಆದಾಗ

$f(x)$ ಅವಿಚ್ಛಿನ್ನವಾಗಿದೆಯೇ ಎಂದು ಪರೀಕ್ಷಿಸಿ.

$$\lim_{x\to 1-} f(x) = \lim_{x\to 1} (5+x) = 6$$

$$\lim_{x\to 1+} f(x) = \lim_{x\to 1} (5-x) = 4$$

$\therefore$ ಎಡಮಿತಿ $\neq$ ಬಲಮಿತಿ.

ಅಂದರೆ 1 ನೆಯ ಷರತ್ತು ಪೂರೈಕೆ ಆಗಿಲ್ಲ.

ಆದ್ದರಿಂದ, $f(x)$ ಉತ್ಪನ್ನವು $x = 1$ರಲ್ಲಿ ಅವಿಚ್ಛಿನ್ನವಾಗಿಲ್ಲ.

3. $f(x) = \sin x$ ಉತ್ಪನ್ನವು $x$ನ ಎಲ್ಲಾ ಬೆಲೆಗೂ ಅವಿಚ್ಛಿನ್ನವಾಗಿದೆ ಎಂದು ತೋರಿಸಿ.

$x = a$ ಎನ್ನುವುದು ಯಾವುದೆ ಒಂದು ಬಿಂದು ಇರಲಿ.

$\therefore\ f(a) = \sin a$

$\varepsilon > 0$ ದತ್ತ ಸಂಖ್ಯೆ ಇರಲಿ.

ಈಗ, $|f(x) - f(a)| = |\sin x - \sin a|$

$$= 2\left|\cos\frac{x+a}{2}\ \sin\frac{x-a}{2}\right|$$

$$= 2\left|\cos\frac{x+a}{2}\right|\left|\sin\frac{x-a}{2}\right|$$

$$< 2\left|\sin\frac{x-a}{2}\right| \text{ ಏಕೆಂದರೆ } \left|\cos\frac{x+a}{2}\right|$$

$$\leq 2\left|\frac{x-a}{2}\right| \text{ ಏಕೆಂದರೆ } |\sin\theta| \leq \theta$$

ಅಂದರೆ $|f(x) - f(a)| \leq |x-a|$

ಈಗ, $\varepsilon = \delta$ ಎಂದು ತೆಗೆದುಕೊಂಡರೆ, $0 < |x-a| < \delta = \varepsilon$ ಆದಾಗಲೆಲ್ಲ

$|f(x) - f(a)| < \varepsilon$ ಆಗುವುದು.

ಆದ್ದರಿಂದ $x = a$ ನಲ್ಲಿ $\sin x$ ಅವಿಚ್ಛಿನ್ನವಾಗಿದೆ.

4. $f$ ಉತ್ಪನ್ನವು ಕೆಳಗಿನಂತೆ ನಿರೂಪಿತವಾಗಿದೆ:

$$f(x) = x^2+3, \; x > 1 \text{ ಆದಾಗ}$$

$$f(x) = 3x + 1, \; x = 1 \text{ ಆದಾಗ}$$

$$f(x) = 4, \; x < 1 \text{ ಆದಾಗ}$$

$x = 1$ ನಲ್ಲಿ $f$ ಉತ್ಪನ್ನವು ಅವಿಚ್ಛಿನ್ನವಾಗಿದೆಯೆ ಎಂದು ಪರೀಕ್ಷಿಸಿ.

$$\lim_{x\to1+} f(x) = \lim_{x\to1+} (x^2+3) = \lim_{h\to0} (1+h)^2 + 3 = 4$$

$$\lim_{x\to1-} f(x) = \lim_{x\to1-} (4) = \lim_{h\to0} 4 = 4$$

ಮತ್ತು $f(1) = 3.1 + 1 = 4$

$$\therefore \lim_{x\to1+} f(x) = \lim_{x\to1-} f(x) = \lim_{x\to1} f(x) = f(1)$$

ಆದ್ದರಿಂದ, ಉತ್ಪನ್ನವು $x = 1$ ನಲ್ಲಿ ಅವಿಚ್ಛಿನ್ನವಾಗಿದೆ.

5. $f(x) = x^2$ ಎನ್ನುವ ಉತ್ಪನ್ನವು $x = 2$ ರಲ್ಲಿ ಅವಿಚ್ಛಿನ್ನವಾಗಿದೆ ಎಂದು ತೋರಿಸಿ.

ಈಗ, $\lim_{x\to2+} f(x) = \lim_{x\to2-} f(x) = f(2) = 4$

ಆದ್ದರಿಂದ $f(x)$ ಅವಿಚ್ಛಿನ್ನವಾಗಿದೆ.

6. $y = x \sin \frac{1}{x}$ ಉತ್ಪನ್ನದ ಮಿತಿಯನ್ನು $x \to 0$ ಆದಾಗ ಕಂಡುಹಿಡಿದು ಅವಿಚ್ಛಿನ್ನವಾಗಿದೆಯೇ ಪರೀಕ್ಷಿಸಿ.

ಈಗ, $\varepsilon > 0$ ಕೊಟ್ಟಾಗ $|x-0| < \delta$ ಆದಾಗ $|f(x) - 0| < \varepsilon$ ಆಗುವಂತೆ $\delta$ (ಧನಸಂಖ್ಯೆ) ಇದೆ ಎಂದು ತೋರಿಸಬೇಕು.

$$\left| x \sin \frac{1}{x} - 0 \right| = |x| \left| \sin \frac{1}{x} \right|$$

ಈಗ, $\left| \sin \frac{1}{x} \right| \leq 1$ ಆಗಿರುವುದರಿಂದ

$$\left| x \sin \frac{1}{x} - 0 \right| \leq |x|$$

$$\therefore \left| x \sin \frac{1}{x} - 0 \right| \leq |x| < \varepsilon \Longrightarrow |x-0| < \varepsilon$$

ಆದ್ದರಿಂದ, $\delta = \varepsilon$ ತೆಗೆದುಕೊಂಡರೆ, ಅಪೇಕ್ಷಿತ ಸಂಖ್ಯೆ $\delta$ ಅಸ್ತಿತ್ವದಲ್ಲಿದೆ ಎಂದಾಯಿತು.

$$\therefore \lim_{x \to 0} x \sin \frac{1}{x} = 0$$

ಮೂಲಬಿಂದು *(origin)*ವನ್ನು ಬಿಟ್ಟು, ಉಳಿದ ಎಲ್ಲಾ ಬಿಂದುಗಳಲ್ಲಿ ಉತ್ಪನ್ನವು ಅವಿಚ್ಛಿನ್ನವಾಗಿದೆ. ಮೂಲಬಿಂದುವಿನಲ್ಲಿ ಉತ್ಪನ್ನವು ನಿರೂಪಿತವಾಗಿಲ್ಲ. ಜ್ಯಾಮಿತೀಯವಾಗಿ $y = x \sin \frac{1}{x}$ ನ ನಕ್ಷೆಯು $y = x$ ಮತ್ತು $y = -x$ ಗಳ ನಡುವೆ ತೂಗಾಡುತ್ತದೆ *(oscillates).*

7. $y = x \sin \frac{1}{x}$ , $x \neq 0$ ಆದಾಗ ಮತ್ತು

$y = 0$, $x = 0$ ಆದಾಗ

ಈ ಉತ್ಪನ್ನವು ಮೂಲಬಿಂದುವಿನಲ್ಲಿ ಅವಿಚ್ಛಿನ್ನವಾಗಿದೆಯೇ ಪರೀಕ್ಷಿಸಿ.

$\lim_{x \to 0} x \sin \frac{1}{x} = 0$ ಎಂದುತೋರಿಸಿದೆ.

$x = 0$ ಆದಾಗ ಉತ್ಪನ್ನದ ಬೆಲೆ $y = 0$ ಎಂದು ಕೊಟ್ಟಿದೆ. ಉತ್ಪನ್ನದ ಎಡಮಿತಿ = ಉತ್ಪನ್ನದ ಬಲಮಿತಿ $= 0$ ಆಗುವುದು. ಆದ್ದರಿಂದ ಉತ್ಪನ್ನವು ಮೂಲಬಿಂದುವಿನಲ್ಲಿ ಅವಿಚ್ಛಿನ್ನವಾಗಿದೆ.

8. $f(x) = c$, $x \in R$, ಸ್ಥಿರ ಉತ್ಪನ್ನವು ಅವಿಚ್ಛಿನ್ನ ಎಂದು ತೋರಿಸಿ.

(ಇಲ್ಲಿ $R$ = ನೈಜ ಸಂಖ್ಯೆಗಳ ಗಣ).

$a \in R$ ಮತ್ತು $h \in R$ ಇರಲಿ.

$h > 0$ ಆದಾಗ $\lim_{x\to a+} f(x) = \lim_{h\to 0} f(a+h) = c$

ಮತ್ತು $\lim_{x\to a-} f(x) = \lim_{h\to 0} f(a-h) = c$

ಅಲ್ಲದೆ $a \in R$ ಆದಾಗ $f(a) = c$

$\therefore \lim_{x\to a} f(x) = f(a) = c$

ಅಂದರೆ, $f(x) = c$ ಉತ್ಪನ್ನವು $R$ ನಲ್ಲಿ ಅವಿಚ್ಛಿನ್ನವಾಗಿದೆ.

9. $f$ ಎನ್ನುವುದು ಕೆಳಗಿನಂತೆ ನಿರೂಪವಾಗಿದೆ :

$f(x) = \dfrac{x^2-a^2}{x-a}$, $x \neq a$ ಆದಾಗ ಮತ್ತು

$f(x) = 3a$, $x = a$ ಆದಾಗ.

$x=a$ ನಲ್ಲಿ $f(x)$ನ ಅವಿಚ್ಛಿನ್ನತೆಯನ್ನು ಪರೀಕ್ಷಿಸಿ.

ಈಗ, $\lim_{x\to a} f(x) = 2a$ $(x \neq a)$ ಮತ್ತು $f(a) = 3a$

$\therefore \lim_{x\to a} f(x) \neq f(a)$

ಆದ್ದರಿಂದ $f(x)$ ಉತ್ಪನ್ನವು ಅವಿಚ್ಛಿನ್ನವಾಗಿಲ್ಲ.

**ಸೂಚನೆ:** ಮೇಲಿನ ಉದಾಹರಣೆಯಲ್ಲಿ $f(x) = 2a$ ಆದರೆ, $x=a$ ನಲ್ಲಿ ಉತ್ಪನ್ನವು ಅವಿಚ್ಛಿನ್ನವಾಗಿದೆ.

10. $f(x) = x$, $x \in R$

ಈ ಉತ್ಪನ್ನವು $R$ ನಲ್ಲಿ ಅವಿಚ್ಛಿನ್ನವಾಗಿದೆಯೇ?

$a$ ಎನ್ನುವುದು $R$ ನಲ್ಲಿ ಒಂದು ಸಂಖ್ಯೆ ಇರಲಿ. $h$ ಒಂದು ಧನಸಂಖ್ಯೆ ಇರಲಿ.

$$\lim_{x\to a+} f(x) = \lim_{h\to 0} f(a+h) = \lim_{h\to 0} (a+h) = a$$

$$\lim_{x\to a-} f(x) = \lim_{h\to 0} f(a-h) = \lim_{h\to 0} (a-h) = a$$

ಅಲ್ಲದೆ $f(a) = a$

$$\therefore \lim_{x\to a+} f(x) = f(a) = \lim_{x\to a-} f(x)$$

ಇದು $R$ ನ ಎಲ್ಲಾ $a \in R$ ಗೂ ಅನ್ವಯಿಸುವುದು.

ಆದ್ದರಿಂದ, $R$ ನಲ್ಲಿ $f(x)$ ಅವಿಚ್ಛಿನ್ನವಾಗಿದೆ.

## 11.7 ಅವಿಚ್ಛಿನ್ನ ಉತ್ಪನ್ನಗಳ ಬೀಜಗಣಿತ

ಪ್ರಮೇಯ : $f$ ಮತ್ತು $g$ ಎಂಬ ಎರಡು ಉತ್ಪನ್ನಗಳು $x=a$ ನಲ್ಲಿ ಅವಿಚ್ಛಿನ್ನವಾಗಿದ್ದರೆ

(i) $f+g$ ಉತ್ಪನ್ನವು $a$ ನಲ್ಲಿ ಅವಿಚ್ಛಿನ್ನವಾಗಿದೆ

(ii) $f-g$ ಉತ್ಪನ್ನವು $a$ ನಲ್ಲಿ ಅವಿಚ್ಛಿನ್ನವಾಗಿದೆ

(iii) $f.g$ ಉತ್ಪನ್ನವು $a$ ನಲ್ಲಿ ಅವಿಚ್ಛಿನ್ನವಾಗಿದೆ

(iv) $\frac{f}{g}$ ಉತ್ಪನ್ನವು, $g(a) \neq 0$ ಆದರೆ, $a$ ನಲ್ಲಿ ಅವಿಚ್ಛಿನ್ನವಾಗಿದೆ.

(ಈ ಪ್ರಮೇಯದ ಸಾಧನೆಯನ್ನು ಈ ಹಂತದಲ್ಲಿ ಕೈ ಬಿಡಲಾಗಿದೆ).

### ಬಹುಘಾತಪದೀಯ ಉತ್ಪನ್ನದ ಅವಿಚ್ಛಿನ್ನತೆ

$$f(x) = a_0 x^n + a_1 x^{n-1} + a_2 x^{n-2} .... + a_n$$

ಈ ಬಹುಘಾತ ಪದಿಯು $x$ ನ ಎಲ್ಲಾ ನೈಜ ಬೆಲೆಗಳಿಗೂ ಅವಿಚ್ಛಿನ್ನವಾಗಿರುವುದು.

ಈಗ, $x=a$ ಯಾವುದೆ ಒಂದು ಬಿಂದುವಾಗಿರಲಿ.

$$\lim_{x\to a} x^n = a^n, \quad \lim_{x\to a} a_0 x^n = a_0 a^n$$

ಇತ್ಯಾದಿ $n$ ನ ಎಲ್ಲಾ ಧನ ಪೂರ್ಣಾಂಕ ಬೆಲೆಗಳಿಗೂ ಅನ್ವಯಿಸುವುದು.

$$\therefore \lim_{x\to a} f(x) = a_0 a^n + a_1 a^{n-1} + a_2 a^{n-2} + .... + a_n = f(a)$$

ಆದ್ದರಿಂದ, ಬಹುಘಾತಪದಿಯು (ಪಾಲಿನಾಮಿಯಲ್) ಅವಿಚ್ಛಿನ್ನವಾಗಿದೆ.

ಭಾಗಲಬ್ಧ ಉತ್ಪನ್ನವು $\frac{P(x)}{Q(x)}$ ರೀತಿಯಲ್ಲಿರುತ್ತದೆ ಮತ್ತು $P(x)$, $Q(x)$ಗಳು ಇದರಲ್ಲಿ ಬಹುಘಾತಪದಿಗಳು. ಇಂತಹ ಭಾಗಲಬ್ಧ ಉತ್ಪನ್ನವು $Q(x)= 0$ ಆಗುವ ಬಿಂದುಗಳನ್ನು ಬಿಟ್ಟು, ಉಳಿದ $x$ ನ ಎಲ್ಲಾ ಬೆಲೆಗಳಿಗೂ ಅವಿಚ್ಛಿನ್ನವಾಗಿರುತ್ತದೆ.

**ಸುಲಭ ಉತ್ಪನ್ನಗಳ ಅವಿಚ್ಛಿನ್ನತೆ :**

(i) $x^n$ ಉತ್ಪನ್ನವು $n$ ಧನಸಂಖ್ಯೆಯಾದಾಗ ಅವಿಚ್ಛಿನ್ನವಾಗಿದೆ.

(ii) $x^n$ ಉತ್ಪನ್ನವು $n$ ಋಣಸಂಖ್ಯೆಯಾದಾಗ $x = 0$ ಬೆಲೆಯನ್ನುಳಿದು ಇತರ ಬೆಲೆಗೆ ಅವಿಚ್ಛಿನ್ನವಾಗಿದೆ.

(iii) $\sin x$ ಮತ್ತು $\cos x$ ಗಳು $x$ ನ ಎಲ್ಲಾ ಬೆಲೆಗಳಿಗೂ ಅವಿಚ್ಛಿನ್ನವಾಗಿವೆ.

(iv) $\pm \frac{1}{2}\pi,\ \pm \frac{3}{2}\pi, \pm 5\frac{\pi}{2}$ ಇತ್ಯಾದಿ ಬೆಲೆಗಳನ್ನುಳಿದು $x$ ನ ಎಲ್ಲಾ ಬೆಲೆಗಳಿಗೂ $\tan x$ ಅವಿಚ್ಛಿನ್ನವಾಗಿದೆ. ಅಂದರೆ ಬಲದಿಂದ $x \rightarrow \frac{\pi}{2}$ ಆದಾಗ $\tan x \rightarrow -\infty$ ಮತ್ತು ಎಡದಿಂದ $x \rightarrow \frac{\pi}{2}$ ಆದಾಗ $\tan x \rightarrow +\infty$

$\therefore \lim_{x \to \pi/2} \tan x$ ಅಸ್ತಿತ್ವದಲ್ಲಿಲ್ಲ.

(v) ಇದೇ ರೀತಿ $\cot x$ ಉತ್ಪನ್ನವು $0 < x < \pi$ ಆದಾಗ ಅವಿಚ್ಛಿನ್ನವಾಗಿದೆ.

(vi) $-\frac{\pi}{2} < x < \frac{\pi}{2}$ ಅಂದರೆ $|x| < \frac{\pi}{2}$ ಆದಾಗ $\sec x$ ಉತ್ಪನ್ನವು ಅವಿಚ್ಛಿನ್ನವಾಗಿದೆ.

(vii) $0 < x < \pi$ ಆದಾಗ $\operatorname{cosec} x$ ಅನಿಚ್ಛಿನ್ನವಾಗಿದೆ.

ಈ ಮೇಲಿನ ಅಂಶಗಳನ್ನು ನಕ್ಷೆಯ ಮೂಲಕ ಇನ್ನೂ ಸ್ಫುಟವಾಗಿ ಅರ್ಥ ಮಾಡಿಕೊಳ್ಳಬಹುದು.

# ಅಭ್ಯಾಸ – 11.1

I ಕೆಳಗೆ ಕೊಟ್ಟಿರುವ ಉತ್ಪನ್ನಗಳು $x$ ನ ಯಾವ ಬೆಲೆಗೆ ಅವಿಚ್ಛಿನ್ನವಾಗುವುದೆಂದು ಕಂಡುಹಿಡಿಯಿರಿ.

(i) $x^4(x^4+2)^2$

(ii) $\dfrac{3x^2+2x-5}{(x-1)\,(x+3)}$

(iii) $2+x-x^2$

(iv) $\dfrac{1}{1+x^2}$

(v) $\sin^2 x$

II .ಕೆಳಗಿನ ಉತ್ಪನ್ನಗಳು ಅವಿಚ್ಛಿನ್ನ ಆಗಿಲ್ಲದೆ ಇರುವ $x$ನ ಬೆಲೆ ಯಾವುದು?

(i) $\dfrac{x^2}{3x-2}$ (ii) $\dfrac{x}{(x+1)^3}$ (iii) $\cot x$

(iv) $\dfrac{1}{x^2-17\,x^2+16}$ (v) $\tan\ 3x$

III $x = 0$ ನಲ್ಲಿ ಕೆಳಗಿನ ಉತ್ಪನ್ನಗಳು ಅವಿಚ್ಛಿನ್ನವಾಗಿವೆಯೇ ಇಲ್ಲವೇ ಎಂದು ಪರೀಕ್ಷಿಸಿ.

(i) $f(x) = \begin{cases} \dfrac{\sin x}{x}, & x \neq 0 \text{ ಆದಾಗ} \\ 1, & x = 0 \text{ ಆದಾಗ} \end{cases}$

(ii) $f(x) = \begin{cases} \dfrac{\sin 2x}{x}. & x \neq 0 \text{ ಆದಾಗ} \\ 1, & x = 0 \text{ ಆದಾಗ} \end{cases}$

(iii) $f(x) = \dfrac{x-|x|}{x}$

IV ಕೆಳಗಿನ ಉತ್ಪನ್ನಗಳು ಕೊಟ್ಟಿರುವ ಬಿಂದುವಿನಲ್ಲಿ ಅವಿಚ್ಛಿನ್ನವಾಗಿದೆ ಎಂದು ತೋರಿಸಿ.

(i) $f(x) = \begin{cases} \frac{x^2}{a} - a, & x < a \text{ ಆದಾಗ} \\ 0, & x = a \text{ ಆದಾಗ} \\ a - \frac{a^2}{x}, & x > a \text{ ಆದಾಗ} \end{cases}$

$x = a$ ಯಲ್ಲಿ

(ii) $f(x) = \begin{cases} \frac{2x+1}{2x^2-5x-3}, & x \neq -\frac{1}{2} \text{ ಆದಾಗ} \\ -\frac{2}{7}, & x = \frac{-1}{2} \text{ ಆದಾಗ} \end{cases}$

$x = -\frac{1}{2}$ ನಲ್ಲಿ

(iii) $f(x) = \frac{x^2-9}{x-3}$ , $x \neq 3$ ಆದಾಗ

$f(x) = 6$ , $x = 3$ ಆದಾಗ

$x = 3$ ಯಲ್ಲಿ

(iv) $f(x) = 1+x+|x|$, $x = -1, 0, 1$ ರಲ್ಲಿ

(v) $f(x) = \frac{x+3}{x-1}$ , $x = 2$ ರಲ್ಲಿ

V ಕೆಳಗಿನ ಉತ್ಪನ್ನಗಳು ತಮ್ಮ ಪ್ರಾಂತ್ಯದಲ್ಲಿ ಅವಿಚ್ಛಿನ್ನವಾಗಿವೆ ಎಂದು ತೋರಿಸಿ.

(i) $f(x) = \sin\frac{1}{x}$ , $x \in (0,1)$

(ii) $f(x) = \frac{1}{x}$ , $x \in (0,1)$

(iii) $f(x) = \frac{1}{1-x}$ , $x \in (0,1)$

VI $x = \frac{1}{2}$ ನಲ್ಲಿ ಕೆಳಗಿನ ಉತ್ಪನ್ನ ಅವಿಚ್ಛಿನ್ನವಾಗಿಲ್ಲ ಎಂದು ತೋರಿಸಿ.

$$f(x) = \begin{cases} x, & 0 \le x < ½ \text{ ಆದಾಗ} \\ 1, & x = ½ \text{ ಆದಾಗ} \\ 1-x, & ½ < x < 1 \text{ ಆದಾಗ} \end{cases}$$

VII $[x]$ ಎಂದರೆ $x$ ನ್ನು ಮೀರದ ಗರಿಷ್ಠ ಪೂರ್ಣಾಂಕ ಆದರೆ

(i) $f(x) = [x]$ ಮತ್ತು

(ii) $f(x) = x - [x]$

$x$ ನ ಪೂರ್ಣಾಂಕ ಬೆಲೆಗಳಿಗೆಲ್ಲಾ ಉತ್ಪನ್ನವು ಅವಿಚ್ಛಿನ್ನವಾಗಿಲ್ಲ ಎಂದು ತೋರಿಸಿ.

VIII $f(x) = \frac{x}{1+e^{1/x}}$ ($x \neq 0$ ಆದಾಗ) ಮತ್ತು $f(0) = 0$

ಈ ಉತ್ಪನ್ನವು $x = 0$ ನಲ್ಲಿ ಅವಿಚ್ಛಿನ್ನವಾಗಿದೆ ಎಂದು ತೋರಿಸಿ.

IX $\cos x$ ಉತ್ಪನ್ನವು $x$ ನ ಎಲ್ಲಾ ಬೆಲೆಗಳಿಗೂ ಅವಿಚ್ಛಿನ್ನವಾಗಿದೆ ಎಂದು ತೋರಿಸಿ.

## 11.8 ನಿಷ್ಪನ್ನ

ಎರಡು ಚರಗಳು ಯಾವುದಾದರೂ ರೀತಿಯಲ್ಲಿ ಸಂಬಂಧ ಹೊಂದಿದ್ದಾಗ, ಒಂದು ಚರಕ್ಕೆ ಸಂಬಂದಿಸಿದಂತೆ ಮತ್ತೊಂದು ಚರವು ಬದಲಾವಣೆಯಾಗುವ ದರವನ್ನು (ಅದು ಅಸ್ತಿತ್ವದಲ್ಲಿದ್ದರೆ) ಕಂಡುಹಿಡಿಯುವುದೇ ಕಲನ ಶಾಸ್ತ್ರದ ಮೂಲ ಸಮಸ್ಯೆ ಎಂದು ಈಗಾಗಲೇ ನಾವು ತಿಳಿದಿದ್ದೇವೆ.

**ಉತ್ಪನ್ನಗಳ ಬೆಲೆಗಳಲ್ಲಿ ಬದಲಾವಣೆಗಳು :**

$y = f(x)$ ಎಂದಿರಲಿ.

$x$ ನ ಬೆಲೆಯಲ್ಲಿ ಆಗುವ ಬದಲಾವಣೆಗಳು, $y$ ನ ಬೆಲೆಯ ಮೇಲೆ ಯಾವ ರೀತಿ ಪರಿಣಾಮ ಬೀರುವುದೆಂದು ತಿಳಿಯುವುದು ಮುಖ್ಯ. ಇಂತಹ ಸಮಸ್ಯೆಯನ್ನು ಚೆನ್ನಾಗಿ ತಿಳಿಯಲು ಒಂದು ಪ್ರಾಯೋಗಿಕ ಉದಾಹರಣೆಯನ್ನು ತೆಗೆದುಕೊಳ್ಳೋಣ.

ಒಂದು ಲೋಹದ ಚೌಕಾಕಾರದ ತಟ್ಟೆಯನ್ನು ಕಾಯಿಸಿದಾಗ, ಆ ತಟ್ಟೆಯ ಬಾಹುಗಳು ಗೊತ್ತಾದಷ್ಟು ಪರಿಮಾಣ ವಿಕಾಸ ಹೊಂದಿದಾಗ, ಆ ತಟ್ಟೆಯ ವಿಸ್ತೀರ್ಣದಲ್ಲಿ ಆಗುವ ಹೆಚ್ಚುವರಿಯನ್ನು ಕಂಡುಹಿಡಿಯಿರಿ.

ತಟ್ಟೆಯ ಬಾಹು $x$ ಇರಲಿ. $h$ ಎನ್ನುವುದು ರೇಖೀಯ ವಿಕಸನ (ವ್ಯಾಕೋಚನ) ಇರಲಿ; ಮತ್ತು ವಿಕಸನಕ್ಕೆ ಮೊದಲು ತಟ್ಟೆಯ ವಿಸ್ತೀರ್ಣ $y$ ಇರಲಿ. ವಿಕಸನದ ನಂತರ ತಟ್ಟೆಯ ವಿಸ್ತೀರ್ಣ ಹೆಚ್ಚಾಗಿರುವುದು. ಇದು $y^1$ ಇರಲಿ.

$$y^1 = (x+h)^2$$

$$(y^1 - y) = (x+h)^2 - x^2$$

$$= 2xh + h^2$$

ಆದ್ದರಿಂದ ವಿಸ್ತೀರ್ಣದಲ್ಲಿ ಆದ ಹೆಚ್ಚುವರಿ $= 2xh + h^2$

$x$ ನಲ್ಲಿ ಆದ ನಿರ್ದಿಷ್ಟ ಹೆಚ್ಚುವರಿಯನ್ನು $\Delta x$ (ಅಥವಾ $\delta x$) ಎಂದು ಬರೆಯುತ್ತೇವೆ. ಇದೇ ರೀತಿ $\Delta y$ನಲ್ಲಿ ಆದ ಹೆಚ್ಚುವರಿಯನ್ನು $\Delta y$ ಎಂದು ಸೂಚಿಸುತ್ತೇವೆ.

ಸಂಕೇತದಲ್ಲಿ ಬರೆದಾಗ

$$\Delta y = 2x \ \Delta x + (\Delta x)^2 \quad ....(1)$$

ಎಂದಾಗುವುದು. ಈ ಸಮೀಕರಣವು ನಮ್ಮ ಪ್ರಾಯೋಗಿಕ ಸಮಸ್ಯೆಗೆ ಉತ್ತರವನ್ನು ಒದಗಿಸಿದೆ. ಅಂದರೆ $x$ ಬಾಹುವಿರುವ ಲೋಹದ ತಟ್ಟೆಯು ಶಾಖದಿಂದ $\Delta x$ ನಷ್ಟು ರೇಖೀಯ ವಿಕಾಸ ಹೊಂದಿದಾಗ ತಟ್ಟೆಯ ವಿಸ್ತೀರ್ಣ $y$ ನಲ್ಲಿ ಆದ ಹೆಚ್ಚಳ (ವೃದ್ಧಿ) $\Delta y$ ಆಗಿರುವುದು.

ಈ ಸೂತ್ರವು $y = x^2$ ಎಂಬ ಉತ್ಪನ್ನದಲ್ಲಿ $x$ ಚರದ ಹೆಚ್ಚಳ. $\Delta x$ ಆದಾಗ $x^2$ (ಅಥವಾ $y$) ನಲ್ಲಿ ಆಗುವ ವೃದ್ಧಿಯನ್ನು ಸೂಚಿಸುತ್ತದೆ.

ಉದಾಹರಣೆ : $x = 9$, $\Delta x = 2$ ಆದಾಗ

$$\Delta y \doteq 2.9.2 + 2^2$$
$$= 36+4$$
$$= 40$$

ತಾಳೆನೋಡುವುದು: $x = 9$ ಆದಾಗ $x^2 = 81$

$x = 11$ ಆದಾಗ $x^2 = 121$

$\therefore$ ವ್ಯತ್ಯಾಸ $= 40$

ಅಂದರೆ, $x$ ನ ಬೆಲೆ 9 ರಿಂದ 11 ಆದಾಗ, $x^2$ ನಲ್ಲಿ ಆದ ಹೆಚ್ಚುವರಿ 40

## $y = x^2$ ಆದಾಗ $\frac{\Delta y}{\Delta x}$ ಪ್ರಮಾಣ :

ಲೋಹದ ತಟ್ಟೆಯನ್ನು $\Delta y = 2x\Delta x + (\Delta x)^2$ ಎಂದು (1) ರಿಂದ ತಿಳಿದಿದೆ. ತಟ್ಟೆಯನ್ನು 10°C ನಿಂದ ಮೊದಲಿನ 0°C ಗೆ ತಂಪುಮಾಡಿದೆ ಎಂದು ಭಾವಿಸಿ. ಈಗ ರೇಖಾ ವಿಕಸನವು ಕಡಿಮೆಯಾಗುತ್ತಾ ಹೋದಂತೆಲ್ಲಾ $\Delta x$ ಕಡಿಮೆ ಆಗುತ್ತಾ ಹೋಗುತ್ತದೆ.

ಉಷ್ಣತೆಯಲ್ಲಿ ಹೆಚ್ಚಳ 10°C ಇದ್ದಾಗ $\Delta x$ ಬೆಲೆ 0.00123
ಉಷ್ಣತೆಯಲ್ಲಿ ಹೆಚ್ಚಳ 1 °C ಇದ್ದಾಗ $\Delta x$ ಬೆಲೆ 0.000123
ಉಷ್ಣತೆಯಲ್ಲಿ ಹೆಚ್ಚುವರಿ $\frac{1}{1000}$ °C ಇದ್ದಾಗ $\Delta x$ ನ ಬೆಲೆ.000 000123

ಇತ್ಯಾದಿ

ಆದರೆ ಉಷ್ಣತೆಯಲ್ಲಿ ಸ್ವಲ್ಪವಾದರೂ ಹೆಚ್ಚಳ ಇರಲೇಬೇಕು, ಇಲ್ಲದಿದ್ದರೆ ಸಮಸ್ಯೆಯೇ ಇರುವುದಿಲ್ಲ. ಏಕೆಂದರೆ $\Delta x$ ಶೂನ್ಯ ಬೆಲೆ ಆಗಲು ಸಾಧ್ಯವಿಲ್ಲ. ಆದ್ದರಿಂದ $\Delta x$ ನ್ನು ನಮಗೆಷ್ಟು ಬೇಕೋ ಅಷ್ಟು ಸಣ್ಣ ಬೆಲೆಯಾಗಿ ತೆಗೆದುಕೊಳ್ಳಬಹುದು; ಆದರೆ $\Delta x = 0$ ಎಂದು ತೆಗೆದು ಕೊಳ್ಳುವುದಿಲ್ಲ. $\Delta x \neq 0$ ಆದ್ದರಿಂದ ಸಮೀಕರಣ (1) ನ್ನು $\Delta x$ ನಿಂದ ಭಾಗಿಸ ಬಹುದು.

$$\therefore \frac{\Delta y}{\Delta x} = 2x + \Delta x \qquad ....(2)$$

$\Delta x$ ನ್ನು ಅತಿ ಸಣ್ಣದಾಗಿ ತೆಗೆದುಕೊಂಡು $2x + \Delta x$ ನ್ನು $2x$ ಗೆ ಸಮೀಪವಾಗುವ ಹಾಗೆ ಮಾಡಬಹುದು.

ಅಂದರೆ $\lim_{\Delta x \to 0} (2x + \Delta x) = 2x$

ಆದ್ದರಿಂದ

$$\lim_{\Delta x \to 0} \frac{\Delta y}{\Delta x} = \lim_{\Delta x \to 0} (2x+\Delta x) = 2x$$

ಅಂದರೆ, $\frac{\Delta y}{\Delta x}$ ಭಿನ್ನರಾಶಿಯು, $x$ ಶೂನ್ಯವನ್ನು ಸಮೀಪಿಸಿದಂತೆಲ್ಲಾ, $2x$ ನ್ನು ಸಮೀಪಿಸುವುದು.

$\lim_{\Delta x \to 0} \frac{\Delta y}{\Delta x}$ ಮಿತಿಯನ್ನು ಸಾಂಕೇತಿಕವಾಗಿ $\frac{dy}{dx}$ ಎಂದು ಬರೆಯಬಹುದು. $\frac{d}{dx}$ ಎನ್ನುವುದು ಒಂದು ಸಂಖ್ಯೆಯನ್ನು ತೋರಿಸುವ ಸಂಕೇತವಲ್ಲ. ಅದು ಒಂದು ಪರಿಕರ್ಮವನ್ನು ಸೂಚಿಸುವ ಸಂಕೇತ. ಈ ಪರಿಕರ್ಮವನ್ನು ಮಾಡುವುದರಿಂದ $\Delta x \to 0$ ಆದಾಗ $\frac{\Delta y}{\Delta x}$ ನ ಪ್ರಮಾಣದ ಮಿತಿಯನ್ನು ಹೊಂದಬಹುದು.

ಅಂದರೆ $\frac{dy}{dx} = \lim_{\Delta x \to 0} \frac{\Delta y}{\Delta x}$

ಮತ್ತು $y = x^2$ ಆದಾಗ $\frac{dy}{dx} = 2x$ ಆಗುವುದು.

**ಉದಾಹರಣೆ :** $y = x^3$ ಆದಾಗ $\frac{dy}{dx}$ ಬೆಲೆಯನ್ನು ಕಂಡುಹಿಡಿಯುವುದು :

ಇದನ್ನು ಪ್ರಾಯೋಗಿಕ ಸಮಸ್ಯೆಯಂತೆ ಬರೆಯುವುದಕ್ಕೆ ಪ್ರಯತ್ನಿಸೋಣ. ಹಿಂದಿನ ಉದಾಹರಣೆಯಲ್ಲಿ ಲೋಹದ ತಟ್ಟೆ ತೆಗೆದುಕೊಂಡ ಹಾಗೆ ಲೋಹದ ಘನವೊಂದನ್ನು ತೆಗೆದುಕೊಳ್ಳೋಣ. $x$ ಎನ್ನುವುದು ಅದರ ಭುಜ, $y$ ಎನ್ನುವುದು ಅದರ ಗಾತ್ರ. ಘನವನ್ನು ಕಾಯಿಸಿದಾಗ ಭುಜದ ರೇಖಾ ವಿಕಾಸ $\Delta x$ ಮತ್ತು ಈ ಘನದ ಗಾತ್ರದಲ್ಲಿ ಆದ ಬದಲಾವಣೆ ಎಷ್ಟು ? (ಇದು $\Delta y$ ಆಗುವುದು).

ವಿಕಾಸ ಹೊಂದಿದ ಘನದ ಗಾತ್ರ $y^1$ ಆದರೆ

$$y^1 = (x+\Delta x)^3$$

$$\therefore y^1 - y = (x+\Delta x)^3 - x^3$$

ಅಥವಾ $\Delta y = 3x^2 \Delta x + 3x(\Delta x)^2 + (\Delta x)^3$

ಈ ಸಮೀಕರಣವು ಘನದ ಗಾತ್ರದಲ್ಲಿ ಆದ ವಿಕಾಸವನ್ನು ರೇಖಾ ವಿಕಾಸದ ರೂಪದಲ್ಲಿ ತೋರಿಸುತ್ತದೆ.

ಈಗ, $\dfrac{\Delta y}{\Delta x} \doteq 3x^2 + 3x\,\Delta x + (\Delta x)^2$

$$\therefore \frac{dy}{dx} = \lim_{\Delta x \to 0} \frac{\Delta y}{\Delta x} = 3x^2$$

ಅಂದರೆ, $y = x^3$ ಆದಾಗ $\dfrac{dy}{dx} = 3x^2$ ಎಂದು ತೋರಿಸಿದಂತಾಯಿತು.

ಈ ಎರಡು ಉದಾಹರಣೆಗಳಿಂದ ಒಂದು ಚರದ ಬದಲಾವಣೆ ಆದಾಗ ಅದರ ಮೇಲೆ ಅವಲಂಬಿತವಾದ ಮತ್ತೊಂದು ಚರದಲ್ಲಿ ಆದ ಬದಲಾವಣೆಯ ದರವನ್ನು ಕಲನಶಾಸ್ತ್ರದಲ್ಲಿ ಕಂಡುಹಿಡಿಯಬಹುದು ಎಂದು ತಿಳಿದಂತಾಯಿತು.

ವಿಜ್ಞಾನ, ಅರ್ಥಶಾಸ್ತ್ರ ಮುಂತಾದವುಗಳಲ್ಲಿ ಈ ರೀತಿ ಚರಗಳ ಬದಲಾವಣೆಯ ದರ ಕಂಡು ಹಿಡಿಯಬೇಕಾದಂತಹ ಅನೇಕ ಸಂದರ್ಭಗಳು ಬರುತ್ತವೆ. ಕಲನಶಾಸ್ತ್ರವು ಇಂತಹ ವಿಷಯಗಳನ್ನು ಒಳಗೊಂಡಿದೆ.

**ಟಿಪ್ಪಣಿ :**

ಕಲನ ಶಾಸ್ತ್ರವನ್ನು ಮೊದಲಿಗೆ ಕಂಡುಹಿಡಿದ ಕೀರ್ತಿ ಸರ್ ಐಸಾಕ್ ನ್ಯೂಟನ್ (1642–1727) ಎಂಬ ಆಂಗ್ಲ ಗಣಿತಜ್ಞ ಮತ್ತು ಭೌತವಿಜ್ಞಾನಿಗೂ, ಗಾಟ್‌ಫ್ರೇಡ್ ವಿಲ್‌ಹೆಲ್ಮ್ ಲೈಬ್ನಿಜ್ (1646–1716) ಎಂಬ ಜರ್ಮನ್ ದೇಶದ ಗಣಿತಜ್ಞ ಮತ್ತು ತತ್ವಜ್ಞಾನಿಗೂ ಸಲ್ಲುತ್ತದೆ.

ಭಾರತೀಯರಾದ ನಮಗೆ ನಿಜಕ್ಕೂ ಹೆಮ್ಮೆಯ ವಿಷಯವೆಂದರೆ ನ್ಯೂಟನ್ ಲೈಬ್ನಿಜ್‌ರಿಗಿಂತ ಐನೂರು ವರ್ಷಗಳ ಹಿಂದೆಯೇ (ಎರಡನೇ) ಭಾಸ್ಕರನು (1114) ಆತನ *ಸಿದ್ಧಾಂತ ಶಿರೋಮಣಿ* ಗ್ರಂಥದಲ್ಲಿ "ತಾತ್ಕಾಲಿಕ ಗತಿ" ಯ ಸಂದರ್ಭದಲ್ಲಿ ಕಲನಶಾಸ್ತ್ರದ ಪರಿಕಲ್ಪನೆಗಳನ್ನು ಬಳಸಿಕೊಂಡಿದ್ದಾನೆ. ಅಂತೆಯೇ, ಮಂಜುಳಾಚಾರ್ಯ (ಅಥವಾ ಮುಂಜಲಾಚಾರ್ಯ ಕ್ರಿ.ಶ. 932) ಹಾಗೂ 15ನೇ ಶತಮಾನದ ಕೇರಳದ ಗಣಿತಜ್ಞರೂ ಇಂತಹ ಪರಿಕಲ್ಪನೆಗಳನ್ನು ಖಗೋಲಶಾಸ್ತ್ರದಲ್ಲಿ ಬಳಸಿಕೊಂಡಿದ್ದಾರೆ.

### 11.8.1 ವ್ಯತ್ಯಾಸಗಳ ಭಾಗಲಬ್ಧ




ಚಿತ್ರ 11.1

$y = f(x)$ ಒಂದು ಉತ್ಪನ್ನವಿರಲಿ.

$P$ ನ ನಿರ್ದೇಶಕಗಳು $[x, f(x)]$ ಆಗಿವೆ (ಚಿತ್ರ 11.1).

$x$ ನಲ್ಲಿ ಆದ ಹೆಚ್ಚಳವನ್ನು $\Delta x$ ಎಂದು ಕರೆದರೆ $y$ ನಲ್ಲಿ ಆದ ಅನುಕ್ರಮ ಬದಲಾವಣೆಯು $f(x+\Delta x) - f(x)$ ಆಗುವುದು. ಜಾಮಿತಿಯ ಪ್ರಕಾರ ಉತ್ಪನ್ನವನ್ನು $y = f(x)$ ವಕ್ರರೇಖೆಯಿಂದಲೂ, ಹೆಚ್ಚಳವನ್ನು ತೋರಿಸಲು $P, Q$ ಎಂಬ ಎರಡು ಬಿಂದುಗಳಿಂದಲೂ ತೋರಿಸಿದೆ. $Q$ ನ ನಿರ್ದೇಶಕಗಳು $[x+\Delta x, f(x+\Delta x)]$ ಆಗುತ್ತವೆ. $f(x)$ ಉತ್ಪನ್ನಕ್ಕೆ

$$\frac{f(x+\Delta x) - f(x)}{\Delta x}$$

ಎಂಬುದನ್ನು ವ್ಯತ್ಯಾಸದ ಭಾಗಲಬ್ಧ ಎಂದು ಕರೆಯಬಹುದು.

ಚಿತ್ರ 11.1 ರಲ್ಲಿ $PQ$ ಜ್ಯಾದ ಓಟವು (slope) $\frac{QR}{PR}$ ಗೆ ಸಮವಾಗಿದೆ ಎಂದು ತಿಳಿದು ಬರುತ್ತದೆ. $Q$ ಬಿಂದುವು ವಕ್ರರೇಖೆಯ ಮೇಲೆ $P$ ಬಿಂದುವನ್ನು ಸಮೀಪಿಸಿದಂತೆಲ್ಲಾ $PQ$ ಜ್ಯಾವು $P$ ನಲ್ಲಿ ವಕ್ರರೇಖೆಗೆ ಸ್ಪರ್ಶರೇಖೆ ಆಗುತ್ತದೆ. ಅಂದರೆ, $\Delta x \to 0$ ಆದ ಹಾಗೆಲ್ಲಾ $PQ$ ನ ಓಟವು $P$ ನಲ್ಲಿನ ಸ್ಪರ್ಶಕದ ಓಟಕ್ಕೆ ಸಮವಾಗುತ್ತದೆ.

ವಾಸ್ತವವಾಗಿ, ಈ ಮಿತಿಯನ್ನೇ $x$ ನಲ್ಲಿ $f(x)$ ಉತ್ಪನ್ನದ ನಿಷ್ಪನ್ನ ಅಥವಾ ನಿಷ್ಪತ್ತಿ ಎನ್ನುವರು. $f(x)$ ಉತ್ಪನ್ನದ ನಿಷ್ಪನ್ನವನ್ನು ಈ ಕೆಳಗಿನಂತೆ ನಿರೂಪಿಸಬಹುದು.

### 11.8.2 $f(x)$ ಉತ್ಪನ್ನದ ನಿಷ್ಪನ್ನ

ಒಂದು ಉತ್ಪನ್ನ $f(x)$ ಎನ್ನುವುದು ಅವಕಲ್ಯ (ಡಿಫರೆನ್ಷಿಯಬಲ್) ಆಗಬೇಗಾದರೆ

$$\lim_{\Delta x \to 0} \frac{[f(x+\Delta x) - f(x)]}{\Delta x}$$

ಮಿತಿಯು ಲಭ್ಯವಿರಬೇಕು (ಅಸ್ತಿತ್ವದಲ್ಲಿರಬೇಕು). ಈ ಮಿತಿಯ ಬೆಲೆಗೆ $f(x)$ ನ ನಿಷ್ಪನ್ನ ಅಥವಾ ಅವಕಲ ಸಹಾಂಕ (ನಿಷ್ಪನ್ನ ಕಲನಾಂಕ) ಎಂದು ಕರೆಯುವರು. ನಿಷ್ಪನ್ನವನ್ನು ಕೆಳಗಿನ ಸಂಕೇತಗಳಲ್ಲಿ ಬರೆಯಬಹುದು:

$$\frac{d}{dx}\{f(x)\} \text{ ಅಥವಾ } f^1(x), \frac{dy}{dx}, \quad \frac{d(y)}{dx} \; dy, \; y_1, \; y^1, \; Dy$$

ಈ ರೀತಿ, $f(x)$ ನ ಉತ್ಪನ್ನದ ಒಂದು ಬಿಂದು $x$ ನಲ್ಲಿ ಆದ ಕ್ಷಣೀಯ ಬದಲಾವಣೆಯ ದರವೇ ನಿಷ್ಪನ್ನ ಅಥವಾ *ಅವಕಲ ಸಹಾಂಕ* ಎಂದು ತಿಳಿಯಬಹುದು.

### 11.8.3 ಅವಕಲ್ಯತೆ – ಬಲ ಮತ್ತು ಎಡ ನಿಷ್ಪನ್ನ

$x=a$ ನಲ್ಲಿ $f(x)$ ಉತ್ಪನ್ನದ *ಬಲ ಅವಕಲ ಸಹಾಂಕ* (ನಿಷ್ಪನ್ನ) ವನ್ನು ಈ ರೀತಿ ನಿರೂಪಿಸಬಹುದು :

$$R\,f'(a) = \lim_{h \to 0+} \left[\frac{[f(a+h)-f(a)]}{h}\right]$$

ಆದರೆ ಈ ಮಿತಿ ಲಭ್ಯವಿದ್ದರೆ ಮಾತ್ರ. $h$ ಎನ್ನುವುದು 0 ಯನ್ನು ಅಥವಾ ಶೂನ್ಯವನ್ನು ಧನ ಬೆಲೆಗಳ ಮೂಲಕ ಸಮೀಪಿಸುತ್ತದೆ ಎಂಬುದನ್ನು ಗಮನಿಸಿ. ಹಾಗೆಯೇ, $f(x)$ ನ ಎಡ ನಿಷ್ಪತ್ತಿ:

$$L\,f'(a) = \lim_{h \to 0} \frac{[f(a+h - f(a)]}{h}$$

ಈ ಮಿತಿಯು ಲಭ್ಯವಿದ್ದರೆ. $h$ ಎನ್ನುವುದು ಋಣ ಬೆಲೆಗಳಿಂದ ಶೂನ್ಯವನ್ನು ಸಮೀಪಿಸುತ್ತದೆ ಎಂಬುದನ್ನು ಗಮನಿಸಿ.

ಒಂದು ಉತ್ಪನ್ನ $f$ ಎನ್ನುವುದು $a$ ಬಿಂದುವಿನಲ್ಲಿ ನಿಷ್ಪನ್ನಯೋಗ್ಯ (ಅವಕಲ್ಯ) ವಾಗಲು $R\,f'(a) = L\,f'(a)$ ಆಗಬೇಕು.

**ಉದಾಹರಣೆ 1:**

$y = |x|$, $x = 0$ ಆದಾಗ ಈ ಉತ್ಪನ್ನವು ನಿಷ್ಪನ್ನಯೋಗ್ಯವಾಗಿದೆಯೇ ಪರೀಕ್ಷಿಸಿ.

$$Rf'(0) = \lim_{h\to 0+} \frac{f(x+h) - f(x)}{h}$$

$$= \lim_{h\to 0+} \frac{|+h| - |0|}{h} = \lim_{h\to 0+} \frac{|h|}{h} = 1$$

$$Lf(0) = \lim_{h\to 0-} \frac{|0-h| - |0|}{h} = -1$$

ಅಂದರೆ, $R f'(0) \neq Lf'(0)$

ಆದ್ದರಿಂದ, ಈ ಉತ್ಪನ್ನವು ನಿಷ್ಪನ್ನಯೋಗ್ಯವಲ್ಲ.

**ಉದಾಹರಣೆ 2:**

$f(x) = x^{1/3}$ ಉತ್ಪನ್ನವು $x = 1$ ನಲ್ಲಿ ನಿಷ್ಪನ್ನಯೋಗ್ಯವಾಗಿದೆಯೇ ಪರೀಕ್ಷಿಸಿ.

$$Rf'(1/3) = \lim_{h\to 0+} \frac{[(1+h)^{1/3} - 1]}{h^{1/3}} = 1$$

$$Lf'(1/3) = \lim_{h\to 0-} \frac{[(1+h)^{1/3} - 1]}{h} = 1$$

$$\therefore Rf'\left(\frac{1}{3}\right) = Lf'\left(\frac{1}{3}\right) = 1$$

ಈ ಉತ್ಪನ್ನವು ನಿಷ್ಪನ್ನಯೋಗ್ಯವಾಗಿದೆ.

## 11.8.4 ನಿಷ್ಪನ್ನತೆ ಮತ್ತು ಅವಿಚ್ಛಿನ್ನತೆಗಳ ಸಂಬಂಧ

ಒಂದು ನಿಷ್ಪನ್ನಯೋಗ್ಯ ಉತ್ಪನ್ನವು ಅವಿಚ್ಛಿನ್ನತೆಯನ್ನು ಒಳಗೊಂಡಿರುವುದು ಎಂಬುದನ್ನು ಈ ಮುಂದಿನ ಪ್ರಮೇಯದಿಂದ ಮನಗಾಣಬಹುದು.

**ಪ್ರಮೇಯ:** ***f* ಎಂಬ ಉತ್ಪನ್ನವು *c* ಯಲ್ಲಿ ನಿಷ್ಪನ್ನ ಯೋಗ್ಯವಾಗಿದ್ದರೆ, ಆಗ *f* ಉತ್ಪನ್ನವು *c* ಯಲ್ಲಿ ಅವಿಚ್ಛಿನ್ನವಾಗಿರುವುದು.**

**ಸಾಧನೆ:** *f* ಎಂಬುದು *c* ಯಲ್ಲಿ ನಿಷ್ಪನ್ನ ಯೋಗ್ಯವಾಗಿದ್ದು, ನಿರ್ದಿಷ್ಟ ನಿಷ್ಪನ್ನವನ್ನು ಹೊಂದಿರಲಿ.

$$\therefore \lim_{h \to 0} \frac{f(c+h) - f(c)}{h} = f'(c)$$

ಅಸ್ತಿತ್ವದಲ್ಲಿರುತ್ತದೆ.

ಈಗ, $f(c+h) - f(c) = \frac{f(c+h) - f(c)}{h} \times h \; (h \neq 0)$

$$\therefore \lim_{h \to 0} [f(c+h) - f(c)] = \lim_{h \to 0} \left[\frac{[f(c+h) - f(c)}{h}\right] \times h$$

$$= \lim_{h \to 0} \frac{f(c+h) - f(c)}{h} \times \lim_{h \to 0} h$$

$$= f'(c) \times 0$$

$$= 0$$

$$\therefore \lim_{h \to 0} f(c+h) = f(c)$$

ಅಥವಾ $\lim_{x \to c} f(x) = f(c)$

ಆದ್ದರಿಂದ, $f$ ಎನ್ನುವುದು ಅವಿಚ್ಛಿನ್ನವಾಗಿದೆ.

ಈ ರೀತಿ $f$ ಉತ್ಪನ್ನವು $c$ ಯಲ್ಲಿ ನಿಷ್ಪನ್ನಯೋಗ್ಯವಾಗಿದ್ದರೆ $c$ ಯಲ್ಲಿ ಅವಿಚ್ಛಿನ್ನವಾಗಿದೆ ಎಂಬ ಅಂಶ ತಿಳಿದಂತಾಯಿತು.

**ಸೂಚನೆ:**

(1) ಒಂದು ವ್ಯಾಪ್ತಿಯಲ್ಲಿ ಬರುವ ಎಲ್ಲಾ ಬಿಂದುಗಳಲ್ಲಿಯೂ ಒಂದು ಉತ್ಪನ್ನವು ನಿಷ್ಪನ್ನಯೋಗ್ಯವಾಗಿದ್ದರೆ, ಆಗ ಆ ವ್ಯಾಪ್ತಿಯಲ್ಲಿ ಉತ್ಪನ್ನವು ಅವಿಚ್ಛಿನ್ನವಾಗಿದೆ.

(2) ಮೇಲಿನ ಪ್ರಮೇಯದ ವಿಲೋಮ ಪ್ರಮೇಯವು ಸತ್ಯವಲ್ಲ. ಅಂದರೆ ಒಂದು ಉತ್ಪನ್ನವು $x$ ನ ಯಾವುದಾದರೂ ಬೆಲೆಗೆ ಅವಿಚ್ಛಿನ್ನವಾಗಿರಬಹುದು ಆದರೆ ನಿಷ್ಪನ್ನಯೋಗ್ಯವಾಗದೆಯೂ ಇರಬಹುದು.

ಉದಾಹರಣೆ : $f(x) = |x|$, $x=0$ ನಲ್ಲಿ.

### 11.8.5 ಮೂಲತತ್ವದಿಂದ ನಿಷ್ಪನ್ನ

ನಿಷ್ಪನ್ನದ ವ್ಯಾಖ್ಯೆಯಿಂದ ಒಂದು ಉತ್ಪನ್ನದ ನಿಷ್ಪತ್ತಿಯನ್ನು ಕಂಡುಹಿಡಿಯುವ ವಿಧಾನವನ್ನು "ಮೂಲತತ್ವದಿಂದ ನಿಷ್ಪನ್ನವನ್ನು ಕಂಡು ಹಿಡಿಯುವುದು" ಎಂದು ಕರೆಯುತ್ತಾರೆ. $x$ ನಲ್ಲಿಯ ಹೆಚ್ಚುವರಿಯನ್ನು $\delta x$ ಅಥವಾ $\Delta x$ ಎಂದು ಸೂಚಿಸುತ್ತೇವೆ.

**ಉದಾಹರಣೆ 3:**

$\frac{1}{8x+5}$ ನ ನಿಷ್ಪತ್ತಿಯನ್ನು $f'(x)$ ನ ವ್ಯಾಖ್ಯೆಯಿಂದ ಕಂಡುಹಿಡಿಯಿರಿ.

$$y = \frac{1}{8x+5} \qquad \text{.... (1)}$$

$$\therefore \; y+\Delta y = \frac{1}{8(x+\Delta x)+5} \qquad \text{.... (2)}$$

ಈಗ (2) ರಲ್ಲಿ (1) ನ್ನು ಕಳೆದರೆ

$$\Delta y = \frac{1}{8(x+\Delta x)+5} - \frac{1}{8x+5}$$

ಅಥವಾ $\Delta y = \frac{8x+5-(8x+8\Delta x+5)}{[8(x+\Delta x)+5]\,[8x+5]}$

ಅಥವಾ $\Delta y = \frac{-8\Delta x}{(8x+8\Delta x+5)\,(8x+5)}$

ಇದನ್ನು $\Delta x$ ನಿಂದ ಭಾಗಿಸಿದರೆ

$$\frac{\Delta y}{\Delta x} = \frac{-8x}{(8x+8\Delta x+5)(8x+5)}$$

ಎರಡು ಕಡೆಯೂ $\Delta x \to 0$ ಆಗುವಂತೆ ಮಿತಿಯನ್ನು ತೆಗೆದಾಗ

$$\frac{dy}{dx} = \lim_{x\to 0}\left(\frac{\Delta y}{\Delta x}\right) = \frac{-8}{(8x+5)\;(8x+5)} = \frac{-8}{(8x+5)^2}$$

$$\therefore \; \frac{d}{dx}\left[\frac{1}{8x+5}\right] = \frac{-8}{(8x+5)^2}$$

**ಉದಾಹರಣೆ 4:**

ಮೂಲತತ್ವದಿಂದ $\frac{1}{\sqrt[5]{x^3}}$ ಉತ್ಪನ್ನದ ನಿಷ್ಪನ್ನವನ್ನು $x$ ಗೆ ಸಂಬಂಧಿಸಿದಂತೆ ಕಂಡು ಹಿಡಿಯಿರಿ.

$$y = \frac{1}{\sqrt[5]{x^3}} = x^{-3/5} \quad .... (1)$$

ಎಂದಿರಲಿ.

$$\therefore\ y+\Delta y = (x+\Delta x)^{-3/5} \quad .... (2)$$

(2) ನೇ ಸಮೀಕರಣದಲ್ಲಿ (1) ನೇ ಸಮೀಕರಣವನ್ನು ಕಳೆದಾಗ

$$\Delta y = (x+\Delta x)^{-3/5} - x^{-3/5}$$

$$\therefore\ \frac{\Delta y}{\Delta x} = \frac{(x+\Delta x)^{-3/5} - (x)^{-3/5}}{\Delta x}$$

$$\therefore\ \lim_{\Delta x \to 0} \frac{\Delta y}{\Delta x} = \lim_{\Delta x \to 0} \frac{[(x+\Delta x)^{-3/5} - x^{-3/5}]}{(x+\Delta x) - x}$$

ಈಗ, $x+\Delta x = z$ ಆಗಿರಲಿ. $\Delta x \to 0$ ಆದಾಗ, $z \to x$ ಆಗುವುದು.

$$\therefore\ \frac{dy}{dx} = \lim_{z \to x} \frac{z^{-3/5} - x^{-3/5}}{z - x}$$

$$= -\frac{3}{5}\ x^{\frac{-3}{5} - 1} = -\frac{3}{5} x^{-8/5}$$

ಅಂದರೆ $\frac{d}{dx}\left(\frac{1}{\sqrt[5]{x^3}}\right) = \frac{3}{5}\ x^{-8/5}$

**ಉದಾಹರಣೆ 5:**

$x^n$ ನ ನಿಷ್ಪನ್ನವನ್ನು ($x$ ಗೆ ಸಂಬಂಧಿಸಿದಂತೆ) ಮೂಲ ತತ್ವದಿಂದ ಕಂಡುಹಿಡಿಯಿರಿ. ($n$ ಒಂದು ಭಾಗಲಬ್ಧ ಸಂಖ್ಯೆ).

$$y = x^n$$

$$\therefore\ y+\Delta y = (x+\Delta x)^n$$

$\therefore \Delta y = (x+\Delta x)^n - x^n$

ಈಗ, $\Delta x$ ನಿಂದ ಭಾಗಿಸಿದಾಗ

$$\frac{\Delta y}{\Delta x} \quad \frac{(x+\Delta x)^n - x^n}{\Delta x}$$

$$\therefore \lim_{\Delta x \to 0} \left(\frac{\Delta y}{\Delta x}\right) = \lim_{\Delta x \to 0} \left[\frac{(x+\Delta x)^n - x^n}{\Delta x}\right]$$

ಅಂದರೆ, $\left(\frac{dy}{dx}\right) = \lim_{\Delta x \to 0} \left[\frac{(x+\Delta x)^n - x^n}{(x+\Delta x) - x}\right]$

ಈಗ, $x + \Delta x = z$ ಆಗಿರಲಿ. $\Delta x \to 0$ ಆದರೆ $z \to x$ ಆಗುವುದು.

$$\therefore \frac{dy}{dx} = \lim_{z \to x} \left[\frac{z^n - x^n}{z - x}\right] = n \,.\, x^{n-1}$$

ಏಕೆಂದರೆ $\lim_{x \to a} \left[\left(\frac{x^n - a^n}{x - a}\right) = n\, a^{n-1}\right]$

$$\therefore \boxed{\frac{d}{dx}(x^n) = n\, x^{n-1}}$$

**ಉದಾಹರಣೆಗಳು**

ಮೇಲಿನ ಮೂಲಸೂತ್ರವನ್ನು ಉಪಯೋಗಿಸಿ ಕೆಳಗಿನ ಉದಾಹರಣೆಗಳನ್ನು ಬಿಡಿಸಬಹುದು.

(i) $\frac{d}{dx}(x) = 1.x^{1-1} = x^0 = 1$

(ii) $\frac{d}{dx}(x^3) = 3.x^{3-1} = 3x^2$

(iii) $\frac{d}{dx}\left(\frac{1}{x}\right) = \frac{d}{dx}(x^{-1}) = -1.x^{-1-1} = -1.x^{-2} = \frac{-1}{x^2}$

(iv) $\frac{d}{dx}\left(\frac{1}{x^3}\right) = \frac{d}{dx}(x^{-3}) = -3.x^{-3-1} = \frac{-3}{x^4}$

(v) $\frac{d}{dx}(\sqrt{x}) = \frac{d}{dx}(x^{½}) = ½\ x^{½-1} = ½\ x^{-½} = \frac{1}{2x^{½}}$

(vi) $\frac{d}{dx}\left(\frac{1}{\sqrt{x}}\right) = \frac{d}{dx}(x^{-½}) = -½\ x^{-½-1} = -½\ x^{-3/2}$

## 11.8.6 ಎರಡು ಉತ್ಪನ್ನಗಳ ಮೊತ್ತದ ನಿಷ್ಪನ್ನ

$u$ ಮತ್ತು $v$ ಗಳು $x$ನಲ್ಲಿರುವ ಎರಡು ಉತ್ಪನ್ನಗಳಾಗಿರಲಿ.

$y = u+v$ ಎಂದಿರಲಿ.

$x$ನಲ್ಲಿ ಹೆಚ್ಚುವರಿ $\delta x$ ಆದರೆ, $u$ ಮತ್ತು $v$ಗಳಲ್ಲಿ $\delta u$ ಮತ್ತು $\delta v$ಆಗುವುದು.

$\therefore\ y+\delta y = (u+\delta u) + (v+\delta v)$

ಅಥವಾ $\delta y = \delta u + \delta v$ ಆಗುವುದು.

$$\therefore\ \frac{\delta y}{\delta x} = \frac{\delta u}{\delta x} + \frac{\delta v}{\delta x}$$

ಈಗ, $\delta x \to 0$ ಆದಾಗ ಮಿತಿಯನ್ನು ತೆಗೆದುಕೊಂಡಾಗ

$$\lim_{\delta x \to 0} \frac{\delta y}{\delta x} = \lim_{\delta x \to 0} \frac{\delta u}{\delta x} + \lim_{\delta x \to 0} \frac{\delta v}{\delta x}$$

$$\text{i.e., } \frac{dy}{dx} = \frac{du}{dx} + \frac{dv}{dx}$$

$$\therefore\ \frac{d}{dx}(u+v) = \frac{du}{dx} + \frac{dv}{dx}$$

ಇದೇ ರೀತಿ

$$\frac{d}{dx}(u-v) = \frac{du}{dx} - \frac{dv}{dx}$$

ಈ ನಿಯಮವನ್ನು ಸಾಮಾನ್ಯೀಕರಿಸಿದರೆ

$$\frac{d}{dx}(u \pm v \pm w \pm ---) = \frac{du}{dx} \pm \frac{dv}{dx} \pm \frac{dw}{dx} \pm ---$$

ಎಂದು ಬರೆಯಬಹುದು.

ಉದಾಹರಣೆ : $y=x^3+x^2$

$$\therefore \frac{dy}{dx} = \frac{d}{dx}(x^3) + \frac{d}{dx}(x^2)$$

$$= 3x^2+2x$$

### 11.8.7 ಒಂದು ಉತ್ಪನ್ನ ಮತ್ತು ಸ್ಥಿರ ಸಂಖ್ಯೆಯ ಗುಣಲಬ್ಧದ ನಿಷ್ಪನ್ನ

$u$ ಎನ್ನುವುದು $x$ ನಲ್ಲಿ ಒಂದು ಉತ್ಪನ್ನವು ಮತ್ತು $k$ ಯು ಒಂದು ಸ್ಥಿರ ಸಂಖ್ಯೆ ಆಗಿರಲಿ.

$$y = ku$$

$$\therefore y+\delta y = k(u+\delta u)$$

$x$ ನಲ್ಲಿ $\delta x$ ಹೆಚ್ಚುವರಿ ಆದಾಗ $u$ ನಲ್ಲಿ $\delta u$ ಹೆಚ್ಚುವರಿ ಆಗುವುದು.

$$\therefore \delta y = k\,.\,\delta u$$

$$\frac{\delta y}{\delta x} = k\,.\frac{\delta u}{\delta x}$$

$$\lim_{\delta x \to 0} \frac{\delta y}{\delta x} = \lim_{\delta x \to 0} k \frac{\delta u}{\delta x}$$

ಅಥವಾ $\frac{dy}{dx} = k.\frac{du}{dx}$

$$\textbf{i.e.} \quad \frac{d}{dx}(ku) = k.\frac{du}{dx}$$

ಈ ನಿಯಮವನ್ನು ಸಾಮಾನ್ಯೀಕರಿಸಿದರೆ

$$\frac{d}{dx}[ku \pm lv \pm mw \pm ---] = k\frac{du}{dx} \pm l\frac{dv}{dx} \pm m\frac{dw}{dx} \pm ----$$

ಎಂದು ಬರೆಯಬಹುದು. ಇಲ್ಲಿ $k,l,m...$ ಗಳು ಸ್ಥಿರ ಸಂಖ್ಯೆಗಳು ಮತ್ತು $u,v,w...$ ಗಳು $x$ ನ ಉತ್ಪನ್ನಗಳು.

**ಉದಾಹರಣೆ :** $y=3x^2+5x^3$

$$\therefore \frac{dy}{dx} = 3.\frac{d}{dx}(x^2)+5.\frac{d}{dx}(x^3)$$

$$= 3.2x + 5.3x^2$$

$$= 6x + 15x^2$$

### 11.8.8 ಒಂದು ಸ್ಥಿರ ಸಂಖ್ಯೆಯ ನಿಷ್ಪನ್ನ

$y = c$ ಆಗಿರಲಿ ($c$ ಸ್ಥಿರಸಂಖ್ಯೆ)

$\therefore\ y+\delta y = c$

$\therefore\ \delta y = 0$

$$\frac{\delta y}{\delta x} = 0 \qquad (\delta x \neq 0)$$

$$\therefore \lim_{\delta x \to 0} \frac{\delta y}{\delta x} = \frac{dy}{dx} = 0$$

ಆದ್ದರಿಂದ, ಒಂದು ಸ್ಥಿರ ಸಂಖ್ಯೆಯ ನಿಷ್ಪನ್ನವು ಶೂನ್ಯ.

**ಉದಾಹರಣೆ:**

$y = 3x+5$

ಒಂದು ಉತ್ಪನ್ನ ಆಗಿರಲಿ. ಇದರಲ್ಲಿ 5 ಸ್ಥಿರಸಂಖ್ಯೆ.

$y+\delta y = 3(x+\delta x) + 5$

$\therefore\ \delta y = 3.\delta x + 0$

$$\therefore \frac{\delta y}{\delta x} = 3$$

$$\lim_{\delta x \to 0} \frac{\delta y}{\delta x} = 3$$

$$\therefore \frac{dy}{dx} = 3$$

**ಸೂಚನೆ:** ಸ್ಥಿರ ಸಂಖ್ಯೆಯು ಮೊತ್ತದ ರೂಪದಲ್ಲಿದ್ದಾಗ ಅದರ ನಿಷ್ಪನ್ನ 0. ಸ್ಥಿರ ಸಂಖ್ಯೆಯು ಒಂದು ಗುಣಕವಾದಾಗ ಆ ಉತ್ಪನ್ನದ ನಿಷ್ಪನ್ನದಲ್ಲಿ ಆ ಗುಣಕವು ನಿಷ್ಪನ್ನದ ಗುಣಕವಾಗುವುದು.

### 11.8.9 ಎರಡು ಉತ್ಪನ್ನಗಳ ಗುಣಲಬ್ಧದ ನಿಷ್ಪನ್ನ

$u$ ಮತ್ತು $v$ ಗಳು $x$ ನ ನಿಷ್ಪನ್ನ ಯೋಗ್ಯ ಉತ್ಪನ್ನಗಳಾಗಿರಲಿ.

$y = uv$

$x$ನಲ್ಲಿ $\delta x$ ಹೆಚ್ಚುವರಿ ಆದರೆ $u$ನಲ್ಲಿ $\delta u$ ಹೆಚ್ಚುವರಿಯೂ, $v$ನಲ್ಲಿ $\delta v$ ಹೆಚ್ಚುವರಿಯೂ ಆಗುವುದು.

$$\therefore y+\delta y=(u+\delta u)(v+\delta v)$$

$$\therefore \delta y=(u+\delta u)(v+\delta v)-uv$$

$$= u.\delta v + v.\delta u + \delta u.\delta v$$

$$\therefore \frac{\delta y}{\delta x} = u.\frac{\delta v}{\delta x} + v.\frac{\delta u}{\delta x} + \frac{\delta u}{\delta x}.\delta v$$

ಮಿತಿಯನ್ನು ತೆಗೆದಾಗ

$$\lim_{\delta x\to 0}\frac{\delta y}{\delta x} = u\lim_{\delta x\to 0}\left(\frac{\delta v}{\delta x}\right) + v.\lim_{\delta x\to 0}\left(\frac{\delta u}{\delta x}\right)$$

$$+\lim_{\delta x\to 0}\left(\frac{\delta u}{\delta x}\right)\lim_{\delta x\to 0}\delta v$$

$$\therefore \frac{dy}{dx} = u.\frac{dv}{dx} + v.\frac{du}{dx} + 0$$

$$\boxed{\therefore \frac{d}{dx}(u.v) = u\frac{dv}{dx} + v\frac{du}{dx}}$$

ಈ ಮೇಲಿನ *ಗುಣಲಬ್ಧ ಸೂತ್ರ*ವನ್ನು ಈ ರೀತಿ ಬರೆಯಬಹುದು:

$\frac{d}{dx}$ (1ನೇ ಉತ್ಪನ್ನ × 2ನೇ ಉತ್ಪನ್ನ)

= (1ನೇ ಉತ್ಪನ್ನ × 2ನೇ ಉತ್ಪನ್ನದ ನಿಷ್ಪನ್ನ)

+ (2ನೇ ಉತ್ಪನ್ನ ×1ನೇ ಉತ್ಪನ್ನದ ನಿಷ್ಪನ್ನ)

ಈ ನಿಯಮವನ್ನು ಸಾಮಾನ್ಯೀಕರಿಸಿದರೆ

$$\frac{d}{dx}(uvw) = uv.\frac{dw}{dx} + uw.\frac{dv}{dx} + vw.\frac{du}{dx}$$

ಎಂದು ಬರೆಯಬಹುದು.

### 11.8.10 ಎರಡು ಉತ್ಪನ್ನಗಳ ಭಾಗಲಬ್ಧದ ನಿಷ್ಪನ್ನ

$u$, $v$ಗಳು $x$ನ ನಿಷ್ಪನ್ನಯೋಗ್ಯ ಉತ್ಪನ್ನಗಳಾಗಿರಲಿ.

$y=\frac{u}{v}$ ಆಗಿರಲಿ.

$x$ ನಲ್ಲಿ $\delta x$ ಹೆಚ್ಚುವರಿ ಆದರೆ $u$ ನಲ್ಲಿ $\delta u$ ಮತ್ತು $v$ ನಲ್ಲಿ $\delta v$ ಹೆಚ್ಚುವರಿ ಆಗುವುದು.

$$\therefore\ y+\delta y = \frac{u+\delta u}{v+\delta v}$$

ಮತ್ತು $$\delta y = \frac{u+\delta u}{v+\delta v} - \frac{u}{v}$$

$$= \frac{\cancel{vu}+v.\delta u-\cancel{uv}-u.\delta v}{v(v+\delta v)}$$

$$\therefore\ \frac{\delta y}{\delta x} = \frac{v\delta u - u\delta v}{v(v+\delta v)} \cdot \frac{1}{\delta x}$$

$$= \frac{v.\frac{\delta u}{\delta x} - u.\frac{\delta v}{\delta x}}{v(v+\delta v)}$$

$\delta x \to 0$ ಆದಾಗ $\delta u$, $\delta v$ ಗಳೂ ಶೂನ್ಯವನ್ನು ಸಮೀಪಿಸುತ್ತವೆ. ಆದ್ದರಿಂದ ಮಿತಿಯನ್ನು ತೆಗೆದಾಗ

$$\lim_{\delta x\to 0} \frac{\delta y}{\delta x} = \lim_{\delta x\to 0} \frac{\left(v\frac{\delta u}{\delta x} - u\frac{\delta v}{\delta x}\right)}{v(v+\delta v)}$$

$$\therefore\ \boxed{\frac{dy}{dx} = \frac{v\frac{du}{dx} - u\frac{dv}{dx}}{v^2}}$$

### 11.8.11 $a^x$ ಉತ್ಪನ್ನದ ನಿಷ್ಪನ್ನ

$y = a^x$ ಉತ್ಪನ್ನವಾಗಿರಲಿ.

$$\therefore\ y+\delta y = a^{x+\delta x}$$

$$\therefore\ \delta y = a^{x+\delta x} - a^x$$

$$= a^x(a^{\delta x} - 1)$$

$$\therefore\ \frac{\delta y}{\delta x} = \frac{a^x(a^{\delta x}-1)}{\delta x}$$

$$\lim_{\delta x\to 0} \frac{\delta y}{\delta x} = \lim_{\delta x\to 0} \frac{a^x(a^{\delta x}-1)}{\delta x} \qquad \dots (1)$$

$a^{\delta x}-1 = h$ ಇರಲಿ. $\delta x \to 0$ ಆದಾಗ $h \to 0$ ಆಗುವುದು.

$\therefore a^{\delta x} = 1+h$

ಎರಡು ಕಡೆಯೂ ಲಾಗರಿತಮ್ ತೆಗೆದಾಗ

$\delta x \log a = \log (1+h)$

$$\therefore \frac{a^{\delta x}-1}{\delta x} = \frac{h. \log a}{\log (1+h)}$$

$$= (\log a) \left[\frac{h}{\log (1+h)}\right]$$

$$= (\log a) \left[\frac{1}{\frac{1}{h}\log (1+h)}\right]$$

$$= (\log a) \frac{1}{\log (1+h)^{1/h}}$$

$$\lim_{\delta x \to 0} \frac{a^{\delta x}-1}{\delta x} = \lim_{h \to 0} \frac{\log a}{\log (1+h)^{1/h}}$$

$$= \frac{\log a}{\log e} \qquad \left[\text{ಏಕೆಂದರೆ } \lim_{h \to o} (1+h)^{1/h} = e\right]$$

$$= \log_e a \qquad \ldots (2)$$

(2) ನ್ನು (1)ರಲ್ಲಿ ಉಪಯೋಗ ಮಾಡುವುದರಿಂದ

$$\boxed{\frac{d}{dx}(a^x) = \log_e a) a^x}$$

ಇದೇ ರೀತಿ $y = e^x$ ಉತ್ಪನ್ನವನ್ನು ತೆಗೆದುಕೊಂಡರೆ

$\therefore \frac{dy}{dx} = e^x. \log_e e$ ಎಂದು ಬರುವುದು.

$$\therefore \frac{dy}{dx} = e^x . 1$$

$$= e^x$$

$$\therefore \boxed{\frac{d}{dx}(e^x) = e^x}$$

### 11.8.12 ಮೂಲತತ್ವದಿಂದ ತ್ರಿಕೋನಮಿತೀಯ ಉತ್ಪನ್ನಗಳ ನಿಷ್ಪನ್ನಗಳು

(1) **sin*x***

$y = \sin x$ ಆಗಿರಲಿ.

$y + \delta y = \sin(x + \delta x)$

$\therefore \delta y = \sin(x + \delta x) - \sin x$

$$\left[\sin C - \sin D = 2\cos\frac{C+D}{2}\sin\frac{C-D}{2} \text{ ಉಪಯೋಗಿಸಿದಾಗ}\right]$$

$$\delta y = 2\cos\left(x + \frac{\delta x}{2}\right)\sin\frac{\delta x}{2}$$

$$\therefore \frac{\delta y}{\delta x} = 2\cos\left(x + \frac{\delta x}{2}\right)\frac{\sin\left(\frac{\delta x}{2}\right)}{2 \cdot \frac{\delta x}{2}}$$

$$\lim_{\delta x \to 0}\frac{\delta y}{\delta x} = \lim_{\delta x \to 0}\cos\left(x + \frac{\delta x}{2}\right)\lim_{\delta x \to 0}\frac{\sin\left(\frac{\delta x}{2}\right)}{\frac{\delta x}{2}}$$

ಅಂದರೆ, $\frac{dy}{dx} = \cos x.1 \qquad \left[\text{ಏಕೆಂದರೆ } \lim_{\theta \to 0}\frac{\sin\theta}{\theta} = 1\right]$

$$\therefore \boxed{\frac{d}{dx}(\sin x) = \cos x}$$

(2) **cos*x***

$y = \cos x$ ಆಗಿರಲಿ.

$y + \delta y = \cos(x + \delta x)$

$\therefore \delta y = \cos(x + \delta x) - \cos x$

$$\left[\cos C - \cos D = -2\sin\frac{C+D}{2}\sin\frac{C-D}{2} \text{ ಉಪಯೋಗಿಸಿದರೆ}\right]$$

$$\delta y = -2 \sin\left(x + \frac{\delta x}{2}\right) \sin\frac{\delta x}{2}$$

$$\therefore \frac{\delta y}{\delta x} = -2 \sin\left(x + \frac{\delta x}{2}\right) . \frac{\sin\frac{\delta x}{2}}{\delta x}$$

$$\lim_{\delta x \to 0} \frac{\delta y}{\delta x} = -2. \lim_{\delta x \to 0} \sin\left(x + \frac{\delta x}{2}\right) \lim_{\delta x \to 0} \left(\frac{\sin\frac{\delta x}{2}}{\frac{\delta x}{2}}\right). \frac{1}{2}$$

$$= -\sin x .1$$

ಅಂದರೆ, $\frac{dy}{dx} = -\sin x$ $\left[\text{ಏಕೆಂದರೆ } \lim_{\theta \to 0} \frac{\sin\theta}{\theta} = 1\right]$

$$\therefore \boxed{\frac{d}{dx}(\cos x) = -\sin x}$$

**(3) tan*x***

$y = \tan x$ ಆಗಿರಲಿ.

ಅಂದರೆ $y = \frac{\sin x}{\cos x}$

ಮತ್ತು $y+\delta y = \tan(x+\delta x) = \frac{\sin(x+\delta x)}{\cos(x+\delta x)}$

$$\therefore \delta y = \frac{\sin(x+\delta x)}{\cos(x+\delta x)} - \frac{\sin x}{\cos x}$$

$$= \frac{\sin(x+\delta x)\cos x - \cos(x+\delta x)\sin x}{\cos(x+\delta x)\cos x}$$

[sin (*A*–*B*) = sin *A* cos *B* – cos *A* sin *B* ಸೂತ್ರ ಉಪಯೋಗಿಸಿದರೆ]

$$\delta y = \frac{\sin(x+\delta x-x)}{\cos(x+\delta x)\cos x} = \frac{\sin\delta x}{\cos(x+\delta x)\cos x}$$

$$\therefore \frac{\delta y}{\delta x} = \frac{\sin\delta x}{\cos(x+\delta x).\cos x.\delta x} = \frac{\sin\delta x}{\delta x} . \frac{1}{\cos(x+\delta x)\cos x}$$

$$\lim_{\delta x \to 0} \frac{\delta y}{\delta x} = \lim_{\delta x \to 0} \left(\frac{\sin \delta x}{\delta x}\right) \cdot \lim_{\delta x \to 0} \left[\frac{1}{\cos(x+\delta x).\cos x}\right]$$

$$\therefore \frac{dy}{dx} = 1. \frac{1}{\cos x \cdot \cos x} \quad \left[\text{ಏಕೆಂದರೆ } \lim_{\theta \to 0} \frac{\sin\theta}{\theta} = 1\right]$$

$$= \frac{1}{\cos^2 x} = \sec^2 x$$

$$\therefore \boxed{\frac{d}{dx}(\tan x) = \sec^2 x}$$

**(4) cotx**

$y = \cot x$ ಆಗಿರಲಿ.

ಅಥವಾ $y = \dfrac{\cos x}{\sin x}$

ಮತ್ತು $y+\delta y = \cot(x+\delta x) = \dfrac{\cos(x+\delta x)}{\sin(x+\delta x)}$

$$\therefore \delta y = \frac{\cos(x+\delta x)}{\sin(x+\delta x)} - \frac{\cos x}{\sin x}$$

$$= \frac{\cos(x+\delta x)\sin x - \sin(x+\delta x)\cos x}{\sin(x+\delta x)\sin x}$$

$$= \frac{-[\sin(x+\delta x)\cos x - \cos(x+\delta x)\sin x]}{\sin(x+\delta x)\sin x}$$

[$\sin(A-B) = \sin A \cos B - \cos A \sin B$ ಸೂತ್ರವನ್ನು ಉಪಯೋಗಿಸಿದರೆ]

ಅಂದರೆ, $\delta y = \dfrac{-\sin(x+\delta x - x)}{\sin(x+\delta x)\sin x}$

$$= \frac{-\sin \delta x}{\sin(x+\delta x) \cdot \sin x}$$

$$\therefore \frac{\delta y}{\delta x} = \frac{-\sin \delta x}{\delta x \cdot \sin(x+\delta x) \cdot \sin x}$$

$$\lim_{\delta x \to 0} \frac{\delta y}{\delta x} = -\lim_{\delta x \to 0} \frac{\sin\delta x}{\delta x} \quad \frac{1}{\sin(x+\delta x) \cdot \sin x}$$

$$= -\frac{1}{\sin(x+0) \cdot \sin x} = -\frac{1}{\sin^2 x}$$

$$= -\operatorname{cosec}^2 x$$

$$\therefore \boxed{\frac{d}{dx}(\cot x) = -\operatorname{cosec}^2 x}$$

(5) **sec$x$**

$y = \sec x$ ಆಗಿರಲಿ.

ಆಗ $y = \dfrac{1}{\cos x}$

$$y+\delta y = \sec(x+\delta x) = \frac{1}{\cos(x+\delta x)}$$

$$\therefore \delta y = \frac{1}{\cos(x+\delta x)} - \frac{1}{\cos x}$$

$$= \frac{\cos x - \cos(x+\delta x)}{\cos(x+\delta x)\cos x}$$

$$\left[\cos C - \cos D = -2\sin\frac{C+D}{2}\sin\frac{C-D}{2} \text{ ಉಪಯೋಗಿಸಿ}\right]$$

$$\delta y = \frac{-2\sin\left(x+\frac{\delta x}{2}\right)\sin\left(\frac{-\delta x}{2}\right)}{\cos(x+\delta x)\cos x}$$

$$\therefore \frac{\delta y}{\delta x} = \frac{2\sin\left(x+\frac{\delta x}{2}\right)\sin\left(\frac{\delta x}{2}\right)}{\cos(x+\delta x) \cdot \cos x \, \frac{\delta x}{2} \cdot 2}$$

$$\lim_{\delta x \to 0} \frac{\delta y}{\delta x} = \lim_{\delta x \to 0} \left[\frac{\sin\left(x+\frac{\delta x}{2}\right)\sin\frac{\delta x}{2}}{\cos(x+\delta x)\,\frac{\delta x}{2}\cos x}\right]$$

$$= \frac{\sin x}{\cos x \,.\, \cos x}$$

$$\therefore \frac{dy}{dx} = \tan x \,.\, \sec x$$

$$\therefore \boxed{\frac{d}{dx}(\sec x) = \sec x \tan x}$$

**(6) cosec*x***

$y = \text{cosec}x$ ಆಗಿರಲಿ.

ಆಗ $y = \frac{1}{\sin x}$

$$y + \delta y = \text{cosec}\,(x + \delta x) = \frac{1}{\sin\,(x + \delta x)}$$

$$\delta y = \frac{1}{\sin\,(x+\delta x)} - \frac{1}{\sin x}$$

$$= \frac{\sin x - \sin\,(x+\delta x)}{\sin\,(x+\delta x)\,.\,\sin x}$$

$\left[ \sin A - \sin B = 2\cos\frac{A+B}{2}\,.\,\sin\frac{A-B}{2} \right.$ ಉಪಯೋಗಿಸಿ $\left. \right]$

$$\delta y = \frac{2\cos\left(x + \frac{\delta x}{2}\right)\sin\left(-\frac{\delta x}{2}\right)}{\sin\,(x+\delta x).\,\sin x}$$

$$\therefore \frac{\delta y}{\delta x} = \frac{-2\cos\left(x + \frac{\delta x}{2}\right).\,\sin\left(\frac{\delta x}{2}\right)}{\sin\,(x+\delta x).\,\sin x\,\frac{\delta x}{2}\,.\,2}$$

$$\lim_{\delta x \to 0}\frac{\delta y}{\delta x} = -\lim_{\delta x \to 0}\left[\frac{\cos\left(x + \frac{\delta x}{2}\right)}{\sin\,(x+\delta x)\sin x}\,.\,\frac{\sin\frac{\delta x}{2}}{\frac{\delta x}{2}}\right]$$

$$\therefore \frac{dy}{dx} = -\frac{\cos x}{\sin x \,.\, \sin x}$$

$$= -\cot x.\ \mathrm{cosec}\, x$$

$$\therefore \boxed{\frac{d}{dx}(\mathrm{cosec}\, x) = -\ \mathrm{cosec}\, x\ \cot x}$$

**11.8.13 ಮೂಲತತ್ವದಿಂದ log*x*ನ ನಿಷ್ಪನ್ನ**

$y = \log x$ ಆಗಿರಲಿ.

$$y+\delta y = \log(x+\delta x)$$

$$\therefore \delta y = \log(x+\delta x) - \log x$$

$$= \log \frac{(x+\delta x)}{x}$$

$$\delta y = \log\left(1+\frac{\delta x}{x}\right)$$

$$\frac{\delta y}{\delta x} = \frac{1}{\delta x} \log\left(1+\frac{\delta x}{x}\right)$$

$$= \frac{1}{x} \cdot \frac{x}{\delta x} \log\left(1+\frac{\delta x}{x}\right)$$

$$= \frac{1}{x} \log_e \left(1+\frac{\delta x}{x}\right)^{\frac{x}{\delta x}}$$

$$\therefore \lim_{\delta x \to 0} \frac{\delta y}{\delta x} = \lim_{\delta x \to 0} \left[\frac{1}{x} \log_e \left(1+\frac{\delta x}{x}\right)\right]^{\frac{x}{\delta x}}$$

$\frac{\delta x}{x} = z$ ಇರಲಿ. ಆಗ, $\delta x \to 0$ ಆದರೆ $z \to 0$

ಮತ್ತು $\frac{x}{\delta x} = \frac{1}{z}$ ಆಗುವುದು.

$$\therefore \lim_{\delta x \to 0} \frac{\delta y}{\delta x} = \lim_{z \to 0} \left[ \frac{1}{x} \log_e (1+z)^{1/z} \right]$$

ಅಂದರೆ, $\frac{dy}{dx} = \frac{1}{x} \log_e e$

$$= \frac{1}{x}$$

$$\therefore \boxed{\frac{d}{dx} [\log x] = \frac{1}{x}}$$

ಇದುವರೆಗೆ ಕಂಡುಹಿಡಿದಿರುವ ನಿಷ್ಪನ್ನಗಳ ಪಟ್ಟಿಯನ್ನು ನೆನಪಿನಲ್ಲಿಡ ಬೇಕಾಗುವುದು:

1. $\frac{d}{dx} (x^n) = nx^{n-1}$

2. $\frac{d}{dx} \frac{1}{x} = \frac{-1}{x^2}$

3. $\frac{d}{dx} (\sqrt{x}) = \frac{1}{2\sqrt{x}}$

4. $\frac{d}{dx} (\sin x) = \cos x$

5. $\frac{d}{dx} (\cos x) = -\sin x$

6. $\frac{d}{dx} (\tan x) = \sec^2 x$

7. $\frac{d}{dx} (\cot x) = -\operatorname{cosec}^2 x$

8. $\frac{d}{dx} \sec x = \sec x \tan x$

9. $\frac{d}{dx} (\operatorname{cosec} x) = -\operatorname{cosec} x \cot x$

10. $\frac{d}{dx}(e^x) = e^x$

11. $\frac{d}{dx}(\log x) = \frac{1}{x}$

12. $\frac{d}{dx}(\text{constant}) = 0$

13. $\frac{d}{dx}[k.\ f(x)] = k.\frac{d}{dx}\ f(x)$

II 1. **ಗುಣಲಬ್ಧ ಸೂತ್ರ**

$$\frac{d}{dx}(uv) = u\frac{dv}{dx} + v\frac{du}{dx}$$ ಅಥವಾ

$$= (\text{1 ನೇ ಉತ್ಪನ್ನ})\frac{d}{dx}(\text{2 ನೇ ಉತ್ಪನ್ನ})$$

$$+ (\text{2 ನೇ ಉತ್ಪನ್ನ})\frac{d}{dx}(\text{1ನೇ ಉತ್ಪನ್ನ})$$

2. **ಭಾಗಲಬ್ಧ ಸೂತ್ರ**

$$\frac{d}{dx}\left(\frac{u}{v}\right) = \frac{v\frac{du}{dx} - u\frac{dv}{dx}}{v^2}$$

$$= \frac{\text{ಛೇದ}\ .\frac{d}{dx}(\text{ಅಂಶ}) - \text{ಅಂಶ}\ .\frac{d}{dx}(\text{ಛೇದ})}{(\text{ಛೇದ})^2}$$

**ಉದಾಹರಣೆಗಳು**

I. ಮೂಲತತ್ವದಿಂದ $\frac{1}{x^2}$ ನ್ನು ನಿಷ್ಪನ್ನಿಸಿ.

$$y = \frac{1}{x^2}$$

$$y+\delta y = \frac{1}{(x+\delta x)^2}$$

$$\delta y = \frac{1}{(x+\delta x)^2} - \frac{1}{x^2}$$

$$= \frac{x^2-(x+\delta x)^2}{(x+\delta x)^2 . x^2} = \frac{-2x.\delta x - (\delta x)^2}{(x+\delta x)^2 . x^2}$$

$$\therefore \frac{\delta y}{\delta x} = \frac{-\delta x[2x+\delta x]}{\delta x\,(x+\delta x)^2 . x^2}$$

$$\lim_{\delta x \to 0} \frac{\delta y}{\delta x} = -\lim_{\delta x \to 0} \frac{(2x+\delta x)}{(x+\delta x)^2 . x^2}$$

$$\frac{dy}{dx} = \frac{-2x}{x^2 . x^2} = \frac{-2}{x^3}$$

$$\therefore \frac{d}{dx}\left[\frac{1}{x^2}\right] = \frac{-2}{x^3}$$

ಸೂಚನೆ: $\frac{d}{dx}\left(\frac{1}{x^n}\right) = \frac{-n}{x^{n+1}}$

**ಸೂತ್ರಗಳನ್ನು ಬಳಸಿಕೊಂಡು ಈ ಮುಂದಿನ ಉತ್ಪನ್ನಗಳನ್ನು ನಿಷ್ಪನ್ನಿಸಿ :**

2. $ax^3 + bx^2 + cx + d$

$y = ax^3 + bx^2 + cx + d$ ಆಗಿರಲಿ.

$$\therefore \frac{dy}{dx} = 3.a.x^2 + 2.bx + c$$

$$= 3ax^2 + 2bx + c$$

3. $\left(\frac{x-1}{x}\right)^2$

$$y = \left[1 - \frac{1}{x}\right]^2 = 1 + \frac{1}{x^2} - \frac{2}{x}$$

$$\therefore \frac{dy}{dx} = -\frac{2}{x^3} - 2\left(\frac{-1}{x^2}\right) = -\frac{2}{x^3} + \frac{2}{x^2}$$

4. $(ax+b)(x^2+cx+c^2)$

$y=(ax+b)(x^2+cx+c^2)$ ಆಗಿರಲಿ.

$$\therefore \frac{dy}{dx}=(ax+b).\frac{d}{dx}(x^2+cx+c^2)+(x^2+cx+c^2)\frac{d}{dx}(ax+b)$$

$$=(ax+b)(2x+c)+(x^2+cx+c^2)(a)$$

$$=(ax+b)(2x+c)+a(x^2+cx+c^2)$$

$$=3ax^2+2(ac+b)x+bc+ac^2$$

5. $\sqrt{x}(x-1)(x-2)$

$y=\sqrt{x}(x-1)(x-2)$ ಆಗಿರಲಿ.

$$\frac{dy}{dx}=\sqrt{x}(x-1)\frac{d}{dx}(x-2)+\sqrt{x}.(x-2).\frac{d}{dx}(x-1)$$

$$+(x-1)(x-2).\frac{d}{dx}(\sqrt{x})$$

$$=\sqrt{x}.(x-1).1+\sqrt{x}(x-2).1+(x-1)(x-2).\tfrac{1}{2}x^{-\frac{1}{2}}$$

$$=\sqrt{x}(x-1)+\sqrt{x}(x-2)+\frac{1}{2\sqrt{x}}(x-1)(x-2)$$

$$=\frac{5x^2-9x+2}{2\sqrt{x}}$$

6. $\dfrac{x^2-2x+4}{x^2+2x+4}$

$y=\dfrac{x^2-2x+4}{x^2+2x+4}$ ಆಗಿರಲಿ.

$$\frac{dy}{dx}=\frac{(x^2+2x+4).\frac{d}{dx}(x^2-2x+4)-(x^2-2x+4)\frac{d}{dx}(x^2+2x+4)}{(x^2+2x+4)^2}$$

$$=\frac{(x^2+2x+4)(2x-2)-(x^2-2x+4)(2x+2)}{(x^2+2x+4)^2}$$

$$= \frac{2x(x^2+2x+4-x^2+2x-4)-2(x^2+2x+4+x^2-2x+4)}{(x^2+2x+4)^2}$$

$$= \frac{2x(4x)-2(2x^2+8)}{(x^2+2x+4)^2}$$

$$= \frac{4(x^2-4)}{(x^2+2x+4)^2}$$

7. $\dfrac{1+\sqrt{x}}{1-\sqrt{x}}$

$y = \dfrac{1+x^{1/2}}{1-x^{1/2}}$ ಆಗಿರಲಿ

$$\therefore \frac{dy}{dx} = \frac{(1-x^{1/2})\frac{d}{dx}(1+x^{1/2})-(1+x^{1/2})\frac{d}{dx}(1-x^{1/2})}{(1-x^{1/2})^2}$$

$$= \frac{(1-x^{1/2})\frac{1}{2}x^{-1/2}-(1+x^{1/2})(-\frac{1}{2}.x^{-1/2})}{(1-x^{1/2})^2}$$

$$= \frac{\frac{1}{2}x^{-1/2}(1-x^{1/2}+1+x^{1/2})}{(1-x^{1/2})^2}$$

$$= \frac{x^{-1/2}}{(1-x^{1/2})^2}$$

$$= \frac{1}{\sqrt{x}(1-x^{1/2})^2} \text{ or } \frac{1}{\sqrt{x}(1-\sqrt{x})^2}$$

8. $y = \dfrac{x}{1+\sqrt{x}}$

$$\frac{dy}{dx} = \frac{(1+\sqrt{x}).1-x(\frac{1}{2}.x^{-1/2})}{(1+\sqrt{x})^2}$$

$$= \frac{1+\sqrt{x}-\frac{1}{2}x^{1/2}}{(1+\sqrt{x})^2} = \frac{1+\frac{1}{2}\sqrt{x}}{(1+\sqrt{x})^2} = \frac{2+\sqrt{x}}{2(1+\sqrt{x})^2}$$

$$\left[\therefore \ \frac{y}{b} = \cos \ \log\left(\frac{x}{n}\right)^n\right]$$

ಅಥವಾ $y = b\cos \ n\left[\log\left(\frac{x}{n}\right)\right]$

$$\therefore \ y_1 = -b\sin\left[n\log\frac{x}{n}\right]\cdot\left[\frac{n}{\left(\frac{x}{n}\right)}\cdot\left(\frac{1}{n}\right)\right]$$

ಅಥವಾ $xy_1 = -nb\sin\left[n\log\frac{x}{n}\right]$

ಮತ್ತೊಂದು ಸಲ ನಿಷ್ಪನ್ನವನ್ನು ಕಂಡುಹಿಡಿದಾಗ

$$xy_2 + y_1 = -nb\cos\left[n\log\frac{x}{n}\right]\frac{n}{\frac{x}{n}}\cdot\frac{1}{n}$$

ಅಥವಾ $x^2y_2 + xy_1 = -n^2b\cos\left[n\ \log\ \frac{x}{n}\right]$

ಅಥವಾ $x^2y_2 + xy_1 = -n^2y$

ಅಥವಾ $x^2y_2 + xy_1 + n^2y = 0$

7. $y = e^{m\sin^{-1}x}$ ಆದರೆ $(1-x^2)\,y_2 - xy_1 = m^2y$ ಎಂದು ತೋರಿಸಿ.

ಈಗ, $y_1 = e^{m\sin^{-1}x}\ \frac{m}{\sqrt{1-x^2}}$

ಅಥವಾ $y_1\sqrt{1-x^2} = my$ ..... (1)

$$\therefore \ y_2\sqrt{1-x^2} + \frac{y_1(-2x)}{2\sqrt{1-x^2}} = my_1$$

ಅಥವಾ $y_2(1-x^2) - xy_1 = my_1\sqrt{1-x^2} = m.\ my$

[(1) ನ್ನು ಉಪಯೋಗಿಸಿ $y_1\sqrt{1-x^2} = my$ ಎಂದು ಆದೇಶಿಸಿದೆ]

$\therefore \ y_2(1-x^2) - xy_1 = m^2y$

## ಅಭ್ಯಾಸ – 11.9

1. $y = \frac{\log x}{x}$ ಆದರೆ $\frac{d^2y}{dx^2} = \frac{2\log x - 3}{x^2}$ ಎಂದು ತೋರಿಸಿ.

2. $y = x + \tan x$ ಆದರೆ $\cos^2 x \frac{d^2y}{dx^2} + 2x = 2y$ ಎಂದು ತೋರಿಸಿ.

3. $x = \sin t,\ y = \sin pt$ ಆದರೆ $(1-x^2)\, y_2 - xy_1 + p^2y = 0$ ಎಂದು ತೋರಿಸಿ.

4. $y^3 - 3ax^2 + x^3 = 0$ ಆದರೆ
$\frac{d^2y}{dx^2} + \frac{2a^2x^2}{y^5} = 0$ ಎಂದು ತೋರಿಸಿ.

5. $ay = \sin(x+y)$ ಆದರೆ
$\frac{d^2y}{dx^2} + y\left(1 + \frac{dy}{dx}\right)^2 = 0$ ಎಂದು ತೋರಿಸಿ.

6. $y = (\sin^{-1}x)^2$ ಆದರೆ
$(1-x^2)\frac{d^2y}{dx^2} - x\frac{dy}{dx} - 2 = 0$ ಎಂದು ತೋರಿಸಿ.

7. $x = a\cos nt + b\sin nt$ ಆದರೆ
$\frac{d^2x}{dt^2} + n^2x = 0$ ಎಂದು ತೋರಿಸಿ.

8. $y = (x^2+a^2)^6$ ಆದರೆ
$(x^2+a^2)\, y_2 - 10xy_1 = 12y$ ಎಂದು ಸಾಧಿಸಿ.

9. $y = \sin(m\tan^{-1}x)$ ಆದರೆ
$(1+x^2)^2\, y_2 + 2x(1+x^2)y_1 + m^2y = 0$
ಎಂದು ಸಾಧಿಸಿ.

10. $x = ½\,(t+t^{-1}),\ y = ½\,(t-t^{-1})$
ಆದರೆ $\frac{d^2y}{dx^2}$ ಕಂಡುಹಿಡಿಯಿರಿ.

11. $x = a \tan\theta,\ y = \frac{1}{2} a \sin 2\theta$ ಆದರೆ $\frac{d^2y}{dx^2}$ ನ್ನು ಕಂಡುಹಿಡಿಯಿರಿ.

12. $y = \frac{1}{2}\ (\tan^{-1}x)^2$ ಆದರೆ

$(1+x^2)^2\ y_2 + 2x\ (1+x^2)\ y_1 = 1$ ಎಂದು ತೋರಿಸಿ.

13. $y = \log [x+ \sqrt{1+x^2}]$ ಆದರೆ

$(1+x^2)\ \frac{d^2y}{dx^2} + x\frac{dy}{dx} = 0$ ಎಂದು ತೋರಿಸಿ.

14. $x = a\ (\cos\theta + \theta\sin\theta)$

$y = a\ (\sin\theta - \theta\cos\theta)$ ಆದರೆ

$\frac{d^2y}{dx^2}$ ಕಂಡುಹಿಡಿಯಿರಿ.

15. $y = \sin\ (\sin x)$ ಆದರೆ

$\frac{d^2y}{dx^2} + \tan x.\ \frac{dy}{dx} + y\cos^2 x = 0$ ಎಂದು ತೋರಿಸಿ.

16. $y = (x^2-1)^n$ ಆದರೆ

$(x^2-1)\ y_2 - (n-1)\ 2xy_1 - 2ny = 0$ ಎಂದು ತೋರಿಸಿ.

17. $y = e^{a\sin^{-1}x}$ ಆದರೆ $(1-x^2)\ y_2 - xy_1 - a^2y = 0$ ಎಂದು ತೋರಿಸಿ.

18. $y = e^{m\cos^{-1}x}$ ಆದರೆ $(1-x^2)y_2 - xy_1 - m^2y = 0$ ಎಂದು ತೋರಿಸಿ.

# ಅಧ್ಯಾಯ 12

# ನಿಷ್ಪನ್ನದ ಅನ್ವಯಗಳು

## 12.1 ನಿಷ್ಪನ್ನ ಕಲನಾಂಕದ ರೇಖಾಗಣಿತರೀತ್ಯಾ ಅರ್ಥಕಲ್ಪನೆ

$f(x)$ ಎಂಬುದು $x$ ನ ಅವಿಚ್ಛಿನ್ನ ಉತ್ಪನ್ನ ಇರಲಿ. $y= f(x)$ ಎಂಬುದು ಒಂದು ವಕ್ರರೇಖೆಯ ಸಮೀಕರಣವಾಗಿರಲಿ. $P(x,y)$ ಎಂಬುದು ರೇಖೆಯ ಮೇಲೆ ಯಾವುದಾದರೊಂದು ಬಿಂದುವಾಗಿರಲಿ (ಚಿತ್ರ 12.1)




$P$ ಗೆ ಅತಿ ಸಮೀಪದಲ್ಲಿ ವಕ್ರರೇಖೆಯ ಮೇಲಿರುವ $Q$ ಬಿಂದುವಿನ ನಿರ್ದೇಶಕಗಳು $(x+ \delta x,\ y+ \delta y)$ಇರಲಿ. $Q$ ಬಿಂದುವು $P$ಯನ್ನು ಸಮೀಪಿಸಿದಂತೆಲ್ಲಾ $\delta x$ ಮತ್ತು $\delta y$ ಗಳೆರಡೂ ಏಕಕಾಲದಲ್ಲಿ ಸೊನ್ನೆಯನ್ನು ಸಮೀಪಿಸುತ್ತವೆ. $Q$ ಬಿಂದುವು $P$ ಯನ್ನು ಸಮೀಪಿಸಿದಂತೆಲ್ಲಾ, $QPR$ ಜ್ಯಾವು $TPT'$ ಸ್ಪರ್ಶರೇಖೆಯ ಸ್ಥಾನವನ್ನು ಪಡೆಯುತ್ತದೆ.

$$\therefore\ Q\hat{P}L \to T'\hat{P}L = \psi$$

ಅಥವಾ $\psi$ ಎನ್ನುವುದು $Q$ ಬಿಂದುವು $P$ ಯನ್ನು ಸಮೀಪಿಸಿದಾಗ $Q\hat{P}L$ ಕೋನದ ಮಿತಿಯನ್ನು ಸೂಚಿಸುತ್ತದೆ.

$$\therefore\ \psi = \lim_{Q \to P} \angle QPL \qquad \therefore \tan\psi = \lim_{Q \to P} \tan Q\hat{P}L$$

$$\therefore\ \tan\ \psi = \lim_{Q \to P} \frac{QL}{PL} = \lim_{\delta x \to 0} \frac{\delta y}{\delta x} = \frac{dy}{dx}$$

$Q \to P$ ಆದಾಗ $N \to M, \quad \delta x \to 0$

$$\therefore \boxed{\tan\psi = \frac{dy}{dx}}$$

ಯಾವುದಾದರೂ ರೇಖೆಯು $x$– ಅಕ್ಷದ ಧನ ದಿಕ್ಕಿನಲ್ಲಿ $\theta$ ಎಂಬ ಕೋನವನ್ನು ಏರ್ಪಡಿಸಿದರೆ $\tan\theta$ ಎನ್ನುವುದು ಆ ರೇಖೆಯ ಓಟವನ್ನು ತಿಳಿಸುವುದು.

ಇಲ್ಲಿ $P$ ನಲ್ಲಿನ ಸ್ಪರ್ಶಕವು $OX$ ಜೊತೆ $\psi$ ಕೋನವನ್ನು ಏರ್ಪಡಿಸುತ್ತದೆ. ಆದ್ದರಿಂದ $\tan\psi$ ಎನ್ನುವುದು ಸ್ಪರ್ಶಕದ ಓಟ.

ಆದ್ದರಿಂದ, $y = f(x)$ ಎಂಬ ವಕ್ರ ರೇಖೆಗೆ $\frac{dy}{dx} = \tan\psi$ ಎಂಬುದು $P(x,y)$ ಎಂಬ ಬಿಂದುವಿನಲ್ಲಿ ಎಳೆದ ಸ್ಪರ್ಶಕದ ಓಟ. ಇದು $\frac{dy}{dx}$ ನಿಷ್ಪನ್ನದ ರೇಖಾಗಣಿತ ರೀತ್ಯಾ ಅರ್ಥಕಲ್ಪನೆ.

**ಸೂಚನೆ:**

(1) $\frac{dy}{dx} = 0$ ಆದರೆ $\tan\psi = 0 \therefore \psi = 0$

ಅಂದರೆ ಸ್ಪರ್ಶಕವು $x$– ಅಕ್ಷಕ್ಕೆ ಸಮಾನಾಂತರವಾಗಿರುತ್ತದೆ (ಚಿತ್ರ 12.2).

ಅಂದರೆ, $y = f(x)$ ಎಂಬ ವಕ್ರ ರೇಖೆಯು ಸ್ಪರ್ಶಕವು $x$– ಅಕ್ಷಕ್ಕೆ ಸಮಾನಾಂತರವಾಗಿರಬೇಕಾದರೆ ಅಗತ್ಯವಾದ ಷರತ್ತು $\frac{dy}{dx} = 0$ ಆಗಿರಬೇಕು.

(2) $\frac{dy}{dx} \to \infty$ ಆದರೆ $\tan\psi \to \infty \therefore \psi = \frac{\pi}{2}$

ಅಂದರೆ ಸ್ಪರ್ಶಕವು x– ಅಕ್ಷಕ್ಕೆ ಲಂಬವಾಗಿರುವುದು. ಅಥವಾ $y$–ಅಕ್ಷಕ್ಕೆ ಸಮಾನಾಂತರವಾಗಿರುವುದು. (ಚಿತ್ರ 12.3).




ಚಿತ್ರ 12.2




ಚಿತ್ರ 12.3

## 12.2 ಸ್ಪರ್ಶಕ ಮತ್ತು ಲಂಬಕಗಳ ಸಮೀಕರಣಗಳು




$P(x_1, y_1)$ ಬಿಂದುವಿನಲ್ಲಿ $\frac{dy}{dx}$ ನ ಬೆಲೆಯನ್ನು $\left(\frac{dy}{dx}\right)_{(x_1, y_1)}$ ಎಂದು ಬರೆಯುತ್ತೇವೆ. ಇದು $P(x_1, y_1)$ನಲ್ಲಿ $\frac{dy}{dx}$ ಬೆಲೆ ಸೂಚಿಸುವುದು; ಮತ್ತು ಇದು $(x_1, y_1)$ ನಲ್ಲಿ $y = f(x)$ ವಕ್ರರೇಖೆಗೆ ಎಳೆದ ಸ್ಪರ್ಶಕದ ಓಟವನ್ನು ತಿಳಿಸುತ್ತದೆ. ಇದನ್ನು $m$ ಎಂದು ತೆಗೆದುಕೊಂಡರೆ

$$m = \left(\frac{dy}{dy}\right)_{(x_1, y_1)}$$

$P(x_1, y_1)$ ನಲ್ಲಿನ ಸ್ಪರ್ಶಕದ (ಚಿತ್ರ 12.4) ಸಮೀಕರಣವನ್ನು ಈ ರೀತಿ ಬರೆಯಬಹುದು:

$$\boxed{y - y_1 = m(x - x_1)} \qquad \left[\text{ಇಲ್ಲಿ } m = \left(\frac{dy}{dx}\right)_{(x_1, y_1)}\right]$$

$P$ ಬಿಂದುವಿನಲ್ಲಿ ಸ್ಪರ್ಶಕಕ್ಕೆ ಲಂಬವನ್ನು ಎಳೆದರೆ ಅದನ್ನು ಲಂಬರೇಖೆ (ನಾರ್ಮಲ್) ಎಂದು ಕರೆಯುತ್ತೇವೆ. $P(x_1, y_1)$ ನಲ್ಲಿನ ಲಂಬರೇಖೆ PN ನ ಸಮೀಕರಣವನ್ನು ಈ ರೀತಿ ಬರೆಯಬಹುದು

$$\boxed{y - y_1 = \frac{-1}{m}(x - x_1)} \qquad \left[\text{ಇಲ್ಲಿ } m = \left(\frac{dy}{dx}\right)_{(x_1, y_1)}\right]$$

## 12.3 ಎರಡು ವಕ್ರರೇಖೆಗಳ ಛೇದನದಲ್ಲಿ ಏರ್ಪಟ್ಟ ಕೋನ

ಎರಡು ವಕ್ರರೇಖೆಗಳು ಛೇದಿಸುವ ಬಿಂದುವಿನಲ್ಲಿ, ಈ ವಕ್ರರೇಖೆಗಳಿಗೆ ಎಳೆದ ಸ್ಪರ್ಶರೇಖೆಗಳ ನಡುವಿನ ಕೋನವನ್ನು ವಕ್ರರೇಖೆಗಳ ಛೇದನದಲ್ಲಿ ಏರ್ಪಟ್ಟ ಕೋನ ಎನ್ನುವರು.

$$y = f(x) \qquad \text{..... (1)}$$

$$y = g(x) \qquad \text{..... (2)}$$

ಈ ಎರಡು ವಕ್ರರೇಖೆಗಳು $P(x_1, y_1)$ ನಲ್ಲಿ ಛೇದಿಸಲಿ. $P$ ನಲ್ಲಿ ಎರಡು ವಕ್ರರೇಖೆಗಳಿಗೂ ಸ್ಪರ್ಶರೇಖೆಗಳನ್ನು ಎಳೆದಿವೆ ಮತ್ತು ಇವು $x$–ಅಕ್ಷದ ಜೊತೆ $\psi_1$ ಮತ್ತು $\psi_2$ ಕೋನ ಏರ್ಪಡಿಸಿವೆ. ಈ ಎರಡು ಸ್ಪರ್ಶರೇಖೆಗಳ ನಡುವಿನ ಕೋನ $\theta$ ಇರಲಿ (ಚಿತ್ರ 12.5).




ಚಿತ್ರ 12.5

$P$ ನಲ್ಲಿ (1) ನೇ ವಕ್ರರೇಖೆಗೆ ಎಳೆದ ಸ್ಪರ್ಶರೇಖೆಯ ಓಟ

$$\left(\frac{dy}{dx}\right)_{(x_1, y_1)} = \tan \psi_1 = m_1$$

ಹಾಗೂ $P$ ನಲ್ಲಿ (2) ನೇ ವಕ್ರರೇಖೆಗೆ ಎಳೆದ ಸ್ಪರ್ಶರೇಖೆಯ ಓಟ

$$\left(\frac{dy}{dx}\right)_{(x_1, y_1)} = \tan \psi_2 = m_2$$

ಚಿತ್ರ 12.5 ರಿಂದ $\psi_2 = \theta + \psi_1$ ಎಂದು ತಿಳಿಯುವುದು.

$\therefore \theta = \psi_1 - \psi_2$

$\therefore \tan\theta = \tan(\psi_1 - \psi_2)$

$$= \frac{\tan\psi_1 - \tan\psi_2}{1 + \tan\psi_1 \tan\psi_2}$$

$$= \frac{m_1 - m_2}{1 + m_1 m_2}$$

ಆದ್ದರಿಂದ, ಎರಡು ವಕ್ರರೇಖೆಗಳ ನಡುವಿನ ಕೋನವು

$$\tan\theta = \frac{m_1 - m_2}{1 + m_1 m_2}$$

ಸೂತ್ರದಿಂದ ತಿಳಿಯಬಹುದು.

ಈಗ, θವು *ಲಘುಕೋನ* ವಾಗಿರಬೇಕಾದಲ್ಲಿ

$$\boxed{\tan\theta = \left|\frac{m_1 - m_2}{1 + m_1 m_2}\right|}$$ ಎಂದು ಬರೆಯಬಹುದು.

ಇಲ್ಲಿ, $m_1 = \left(\frac{dy}{dx}\right)_{(x_1,y_1)}$ ಮೊದಲನೆಯ ವಕ್ರರೇಖೆಗೆ ಹಾಗೂ $m_2 = \left(\frac{dy}{dx}\right)_{(x_1,y_1)}$ ಎರಡನೆಯ ವಕ್ರರೇಖೆಗೆ ಸಂಬಂಧಪಟ್ಟ ಓಟಗಳಾಗಿರುತ್ತವೆ.

**ಸೂಚನೆ:**

(1) $m_1 = m_2$ ಆದರೆ, $\tan\theta = 0 \therefore \theta = 0$; ಅಂದರೆ, $P(x_1,y_1)$ ನಲ್ಲಿ ಎರಡು ಸ್ಪರ್ಶರೇಖೆಗಳೂ ಒಂದರ ಮೇಲೆ ಒಂದು ಒಟ್ಟಾಗಿ ಸೇರುತ್ತವೆ. ಆಗ, ಆ ಎರಡು ವಕ್ರರೇಖೆಗಳು $P$ ಬಿಂದುವಿನಲ್ಲಿ ಒಂದನ್ನೊಂದು ಸ್ಪರ್ಶಿಸುತ್ತವೆ.

(2) $m_1 m_2 = -1$ ಆದರೆ $\tan\theta \to \infty$ ಅಂದರೆ $\theta = \frac{\pi}{2}$

$P$ ನಲ್ಲಿನ ಸ್ಪರ್ಶರೇಖೆಗಳು ಪರಸ್ಪರ ಲಂಬವಾಗಬೇಕಾದರೆ $m_1 m_2 = -1$ ಆಗುವುದು ಅಗತ್ಯ. ಇಂತಹ ಸಂದರ್ಭದಲ್ಲಿ ಎರಡು ವಕ್ರರೇಖೆಗಳೂ *ಲಂಬಾತ್ಮಕ* (ಆರ್ಥಾಗನಲ್) ವಾಗಿವೆ ಎನ್ನುತ್ತೇವೆ. ಆದ್ದರಿಂದ, ಎರಡು ವಕ್ರರೇಖೆಗಳು ಲಂಬಾತ್ಮಕವಾಗಬೇಕಾದರೆ ನಿಯಮ

$$\boxed{m_1 m_2 = -1}$$

ಉದಾಹರಣೆಗಳು

1. $y = 5+x - \frac{x^2}{8}$ ಎನ್ನುವ ವಕ್ರರೇಖೆಗೆ (2,4)ನಲ್ಲಿ ಎಳೆದ ಸ್ಪರ್ಶರೇಖೆಯು x–ಅಕ್ಷದೊಂದಿಗೆ ಮಾಡುವ ಕೋನವನ್ನು ಕಂಡುಹಿಡಿಯಿರಿ.

ಈಗ, $y = 5+x - \frac{x^2}{8}$

$$\therefore \frac{dy}{dx} = 1 - \frac{x}{4}$$

$$\therefore \left(\frac{dy}{dx}\right)_{(2,4)} = 1 - ½ = - ½$$

ಅಂದರೆ, $\tan \psi = ½$

$\therefore \psi = \tan^{-1} ½$

2. $y = x^3 + 1$ ವಕ್ರರೇಖೆಗೆ (1,2) ನಲ್ಲಿ ಸ್ಪರ್ಶರೇಖೆಯನ್ನು ಕಂಡುಹಿಡಿಯಿರಿ.

ಈಗ, $y = x^3 + 1$

$$\therefore \frac{dy}{dx} = 3x^2$$

$$\left(\frac{dy}{dx}\right)_{(1,2)} = 3.1^2 = 3$$

ಆದ್ದರಿಂದ, ಸ್ಪರ್ಶರೇಖೆಯ ಸಮೀಕರಣವು

$$y - 2 = 3\,(x - 1)$$

3. $x^2 + y^2 = a^2$ ವಕ್ರರೇಖೆಗೆ $(x_1, y_1)$ನಲ್ಲಿ ಸ್ಪರ್ಶರೇಖೆಯನ್ನು ಕಂಡುಹಿಡಿಯಿರಿ.

ಈಗ, $x^2 + y^2 = a^2$ ಸಮೀಕರಣವನ್ನು ನಿಷ್ಪನ್ನಿಸಿದರೆ

$$2x+2y\frac{dy}{dx} = 0 \therefore \left(\frac{dy}{dx}\right)_{(x_1, y_1)} = \frac{-x_1}{y_1}$$

ಆದ್ದರಿಂದ ಸ್ಪರ್ಶರೇಖೆಯ ಸಮೀಕರಣವು

$$y - y_1 = -\left(\frac{x_1}{y_1}\right)(x - x_1)$$

ಅಥವಾ $yy_1 - y_1^2 = -xx_1 + x_1^2$

ಅಥವಾ $xx_1 + yy_1 = x_1^2 + y_1^2$

ಆದರೆ, $(x_1, y_1)$ ಎನ್ನುವುದು ವಕ್ರರೇಖೆಯ ಮೇಲಿನ ಬಿಂದುವಾದ್ದರಿಂದ $x_1^2 + y_1^2 = a^2$ ಆಗುವುದು. ಆದ್ದರಿಂದ ಸ್ಪರ್ಶರೇಖೆಯ ಸಮೀಕರಣವು

$xx_1 + yy_1 = a^2$

4. $\left.\begin{array}{l} x = a\cosh t \\ y = b\sinh t \end{array}\right\}$ ಈ ವಕ್ರರೇಖೆಗೆ '$t$' ಬಿಂದುವಿನಲ್ಲಿ ಸ್ಪರ್ಶರೇಖೆ ಕಂಡುಹಿಡಿಯಿರಿ.

$$\text{ಈಗ, } \frac{dy}{dx} = \frac{\frac{dy}{dt}}{\frac{dx}{dt}} = \frac{b\cosh t}{a\sinh t}$$

ಆದ್ದರಿಂದ ಸ್ಪರ್ಶರೇಖೆಯ ಸಮೀಕರಣ :

$$y - b\sinh t = \frac{b\cosh t}{a\sinh t}(x - a\cosh t)$$

ಅಥವಾ $(b\cosh t)\,x - (a\sinh t)\,y = ab(\cosh^2 t - \sinh^2 t) = ab$

ಅಂದರೆ, $(b\cosh t)\,x - (a\sinh t)\,y = ab$

ಇದುಬೇಕಾಗಿರುವ ಸ್ಪರ್ಶರೇಖೆ.

5. $\frac{y}{a} = \log\sec\frac{x}{a}$ ಎಂಬ ವಕ್ರರೇಖೆಗೆ $(x_1, y_1)$ ಬಿಂದುವಿನಲ್ಲಿ ಸ್ಪರ್ಶರೇಖೆಮತ್ತು ಲಂಬರೇಖೆಗಳನ್ನು ಕಂಡುಹಿಡಿಯಿರಿ.

ಸಮೀಕರಣದ ಎರಡು ಭಾಗಗಳನ್ನೂ ನಿಷ್ಪನ್ನಿಸಿದಾಗ

$$\frac{1}{a}\frac{dy}{dx} = \frac{1}{a}\frac{1}{\sec\frac{x}{a}}\sec\frac{x}{a}\tan\frac{x}{a}$$

$$\therefore \frac{dy}{dx} = \tan\frac{x}{a} \quad \therefore \left(\frac{dy}{dx}\right)_{(x_1,y_1)} = \tan\frac{x_1}{a}$$

ಆದ್ದರಿಂದ ಸ್ಪರ್ಶರೇಖೆಯ ಸಮೀಕರಣ :

$$y - y_1 = \tan\left(\frac{x_1}{a}\right)(x - x_1)$$

ಮತ್ತು ಲಂಬರೇಖೆಯ ಸಮೀಕರಣ :

$$y - y_1 = \frac{-1}{\left(\tan\frac{x_1}{a}\right)}(x - x_1)$$

ಅಥವಾ $(y-y_1) \tan \frac{x_1}{a} + (x-x_1) = 0$

6. $y = be^{\frac{-x}{a}}$ ಎಂಬ ವಕ್ರರೇಖೆಯು $y$–ಅಕ್ಷವನ್ನು ಛೇದಿಸುವ ಬಿಂದುವಿನಲ್ಲಿ $\frac{x}{a} + \frac{y}{b} = 1$ ಸರಳರೇಖೆಯನ್ನು ಸ್ಪರ್ಶಿಸುತ್ತದೆ ಎಂದು ತೋರಿಸಿ.

ದತ್ತ ಸಮೀಕರಣ :

$$y = be^{\frac{-x}{a}} \qquad \text{..... (1)}$$

$$\therefore \frac{dy}{dx} = -\frac{be^{\frac{-x}{a}}}{a}$$

ಈಗ, ವಕ್ರರೇಖೆ (1) $y$–ಅಕ್ಷವನ್ನು $(0,b)$ ನಲ್ಲಿ ಛೇದಿಸುತ್ತದೆ.

$$\therefore \left(\frac{dy}{dx}\right)_{(0,b)} = \frac{-b}{a}$$

ದತ್ತ ಸರಳರೇಖೆಯ ಸಮೀಕರಣ :

$$\frac{x}{a} + \frac{y}{b} = 1 \qquad \text{.... (2)}$$

ಇದನ್ನು ನಿಷ್ಪನ್ನಿಸಿದಾಗ

$$\frac{1}{a} + \frac{1}{b}\frac{dy}{dx} = 0$$

ಆದ್ದರಿಂದ, ಸರಳರೇಖೆ (2) ರ ಓಟ

$$\frac{dy}{dx} = -\frac{b}{a}$$

ಈಗ, (1) ಮತ್ತು (2) ಈ ಎರಡು ವಕ್ರರೇಖೆಗಳೂ $(0,b)$ ನಲ್ಲಿ ಒಂದೇ ಓಟವನ್ನು ಹೊಂದಿವೆ ಮತ್ತು ಎರಡು ವಕ್ರರೇಖೆಗಳೂ $(0,b)$ ಎಂಬ ಬಿಂದುವಿನ ಮುಖಾಂತರ ಹಾದು ಹೋಗುತ್ತವೆ. ಆದ್ದರಿಂದ ಅವುಗಳು $(0, b)$ ನಲ್ಲಿ ಪರಸ್ಪರ ಸ್ಪರ್ಶಿಸುತ್ತವೆ.

7. $y=x^3-3x^2+7$ ವಕ್ರರೇಖೆಯ ಮೇಲಿನ ಯಾವ ಬಿಂದುಗಳಲ್ಲಿ ಎಳೆದ ಸ್ಪರ್ಶರೇಖೆಗಳು x-ಅಕ್ಷಕ್ಕೆ ಸಮಾನಾಂತರವಾಗಿರುತ್ತವೆ?

$$y = x^3 - 3x^2 + 7 \qquad \text{.... (1)}$$

$$\therefore \frac{dy}{dx} = 3x^2 - 6x$$

$x$-ಅಕ್ಷಕ್ಕೆ ಸ್ಪರ್ಶರೇಖೆಯು ಸಮಾನಾಂತರವಾಗಿರಬೇಕಾದರೆ ಷರತ್ತು $\frac{dy}{dx} = 0$ ಆಗಿರಬೇಕು.

$\therefore 3x^2 - 6x = 0$ ಅಥವಾ $3x(x-2) = 0 \quad \therefore x = 0, x = 2.$

ಇವು ಸ್ಪರ್ಶ ರೇಖೆಯು $x$-ಅಕ್ಷಕ್ಕೆ ಸಮಾನಾಂತರವಾಗಿರುವ ಬಿಂದುವಿನ $x$-ನಿರ್ದೇಶಕಗಳು. ಈಗ $y$-ನಿರ್ದೇಶಕಗಳನ್ನು ಕಂಡುಹಿಡಿಯಲು ವಕ್ರರೇಖೆಯ ಸಮೀಕರಣದಲ್ಲಿ $x$ನ ಬೆಲೆಯನ್ನು ಆದೇಶಿಸಬೇಕು. $x = 0$ ಆದಾಗ, $y = (0)^3 - 3(0) + 7 \quad \therefore y = 7$

$x = 2$ ಆದಾಗ, $y = (2)^3 - 3(2)^2 + 7 = 3$

ಅಂದರೆ ನಮಗೆ ಬೇಕಾದ ಬಿಂದುಗಳು (0,7) ಮತ್ತು (2,3) ಎಂದಾಯಿತು.

8. $\rho = x\cos\theta + y\sin\theta$ ಎಂಬ ರೇಖೆಯು

$\left(\frac{x}{a}\right)^{\frac{n}{n-1}} + \left(\frac{y}{b}\right)^{\frac{n}{n-1}} = 1$ ಎಂಬ ವಕ್ರರೇಖೆಯನ್ನು ಸ್ಪರ್ಶಿಸಿದರೆ

$\rho^n = (a\cos\theta)^n + (b\sin\theta)^n$ ಎಂದು ತೋರಿಸಿ.

ದತ್ತ ಸಮೀಕರಣವನ್ನು $x$ಗೆ ಸಂಬಂಧಿಸಿದಂತೆ ನಿಷ್ಪನ್ನಿಸಿದಾಗ

$$\frac{n}{n-1}\left(\frac{x}{a}\right)^{\frac{n}{n-1}-1}\frac{1}{a} + \frac{n}{n-1}\cdot\left(\frac{y}{b}\right)^{\frac{n}{n-1}-1}\frac{1}{b}\frac{dy}{dx} = 0$$

$$\therefore \frac{dy}{dx} = -\frac{b\left(\frac{x}{a}\right)^{\frac{n}{n-1}}}{a\left(\frac{y}{b}\right)^{\frac{1}{n-1}}}$$

$(x,y)$ ಎಂಬ ಯಾವುದಾದರೂ ಒಂದು ಬಿಂದುವಿನಲ್ಲಿ ಸ್ಪರ್ಶರೇಖೆಯನ್ನು ಬರೆದರೆ ಅದರ ಸಮೀಕರಣವು

$$Y - y = -\frac{b\left(\frac{x}{a}\right)^{\frac{1}{n-1}}}{a\left(\frac{y}{b}\right)^{\frac{1}{n-1}}}(X - x)$$

ಅಥವಾ $\frac{Y-y}{b}\left(\frac{y}{b}\right)^{\frac{1}{n-1}} = \frac{-1}{a}\left(\frac{x}{a}\right)^{\frac{1}{n-1}}(X - x)$

$$Y.\frac{1}{b}\left(\frac{y}{b}\right)^{\frac{1}{n-1}}-\left(\frac{y}{b}\right)^{\frac{n}{n-1}}=-\frac{1}{a}\left(\frac{x}{a}\right)^{\frac{1}{n-1}}X+\left(\frac{x}{a}\right)^{\frac{n}{n-1}}$$

ಅಥವಾ $$X.\frac{1}{a}\left(\frac{x}{a}\right)^{\frac{1}{n-1}}+Y\frac{1}{b}\left(\frac{y}{b}\right)^{\frac{1}{n-1}}=\left(\frac{x}{a}\right)^{\frac{n}{n-1}}+\left(\frac{y}{b}\right)^{\frac{n}{n-1}}=1 \quad \text{.... (1)}$$

ಕೊಟ್ಟಿರುವ ಸರಳರೇಖೆಯ ಸಮೀಕರಣವನ್ನು $X$ ಮತ್ತು $Y$ ಎಂಬ ನಿರ್ದೇಶಕಗಳಲ್ಲಿ ಬರೆದಾಗ

$$X\cos\theta + Y\sin\theta = p \quad \text{... (2)}$$

(1) ಮತ್ತು (2) ಒಂದೇ ರೇಖೆಯನ್ನು ತಿಳಿಸುತ್ತವೆ.

$$\therefore \frac{\frac{1}{a}\left(\frac{x}{a}\right)^{\frac{1}{n-1}}}{\cos\theta}=\frac{\frac{1}{b}\left(\frac{y}{b}\right)^{\frac{1}{n-1}}}{\sin\theta}=\frac{1}{p}$$

$$\left(\frac{x}{a}\right)^{\frac{1}{n-1}}=\frac{a\cos\theta}{p} \quad \text{.... (3)}$$

ಮತ್ತು $$\left(\frac{y}{b}\right)^{\frac{1}{n-1}}=\frac{b\sin\theta}{p}$$

ಆದರೆ, $(x,y)$ ಬಿಂದುವು ದತ್ತ ವಕ್ರರೇಖೆಯ ಮೇಲಿದೆ

$$\therefore \left(\frac{x}{a}\right)^{\frac{n}{n-1}}+\left(\frac{y}{b}\right)^{\frac{n}{n-1}}=1$$

ಅಥವಾ $$\left(\frac{a\cos\theta}{p}\right)^{n}+\left(\frac{b\sin\theta}{p}\right)^{n}=1$$ (3ನ್ನು ಉಪಯೋಗಿಸಿ)

ಅಥವಾ $(a\cos\theta)^n + (b\sin\theta)^n = p^n$

ಇದೇ ಬೇಕಾದ ಷರತ್ತು.

9. $x\cos\theta + y\sin\theta = p$ ರೇಖೆಯು

$$\frac{x^m}{a^m}+\frac{y^m}{b^m}=1$$

ವಕ್ರರೇಖೆಯನ್ನು ಸ್ಪರ್ಶಿಸಬೇಕಾದರೆ ಇರುವ ಷರತ್ತನ್ನು ಕಂಡುಹಿಡಿಯಿರಿ.

ಸಮೀಕರಣವನ್ನು $x$ಗೆ ಸಂಬಂಧಿಸಿ ನಿಷ್ಪನ್ನಿಸಿದಾಗ

$$\frac{mx^{m-1}}{a^m} + \frac{my^{m-1}}{b^m}\frac{dy}{dx} = 0$$

$$\therefore \frac{dy}{dx} = \frac{-b^m}{a^m}\frac{x^{m-1}}{y^{m-1}}$$

ಈಗ, $(x_1,y_1)$ ಸ್ಪರ್ಶ ಬಿಂದುವಾದರೆ ಸ್ಪರ್ಶರೇಖೆಯ ಸಮೀಕರಣವನ್ನು ಕೆಳಗಿನಂತೆ ಬರೆಯಬಹುದು

$$y - y_1 = -\frac{b^m}{a^m}\left(\frac{x_1^{m-1}}{y_1^{m-1}}\right)(x - x_1)$$

ಅಥವಾ $$\frac{yy_1^{m-1} - y_1^m}{b^m} = -\frac{xx_1.^{m-1} - x_1^m}{a^m}$$

ಅಥವಾ $$\frac{xx_1^{m-1}}{a^m} + \frac{yy_1^{m-1}}{b^m} = \frac{x_1^m}{a^m} + \frac{y_1^m}{b^m} = 1 \quad \text{.... (i)}$$

[ಏಕೆಂದರೆ $(x_1, y_1)$ ಬಿಂದು ವಕ್ರರೇಖೆಯ ಮೇಲಿದೆ]

ಈಗ, (i) ಮತ್ತು $x\cos\theta + y\sin\theta = p$ ಎರಡು ರೇಖೆಗಳು ಒಂದೇ ಆಗಿರುತ್ತವೆ.

$$\therefore \frac{\left(\frac{x_1^{m-1}}{a^m}\right)}{\cos\theta} = \frac{\left(\frac{y_1^{m-1}}{b^m}\right)}{\sin\theta} = \frac{1}{p}$$

$$\therefore x_1^{m-1} = \frac{a^m\cos\theta}{p}, \quad y_1^{m-1} = \frac{b^m\sin\theta}{p}$$

$$x_1 = \frac{a^{\frac{m}{m-1}}(\cos\theta)^{\frac{1}{m-1}}}{p^{\frac{1}{m-1}}}, \quad y_1 = \frac{b^{\frac{m}{m-1}}(\sin\theta)^{\frac{1}{m-1}}}{p^{\frac{1}{m-1}}}$$

ಆದರೆ $(x_1,y_1)$ ವಕ್ರರೇಖೆಯ ಮೇಲಿರುವುದರಿಂದ

$$\frac{x_1^m}{a^m} + \frac{y_1^m}{b^m} = 1$$

$x_1,y_1$ ಗಳಿಗೆ ಮೇಲೆ ಬಂದಿರುವ ಬೆಲೆಗಳನ್ನು ಇದರಲ್ಲಿ ಹಾಕಿದರೆ

$$\frac{a^{\frac{m^2}{m-1}-m}(\cos\theta)^{\frac{m}{m-1}}}{p^{\frac{m}{m-1}}} + \frac{b^{\frac{m^2}{m-1}-m}(\sin\theta)^{\frac{m}{m-1}}}{p^{\frac{m}{m-1}}} = 1$$

ಅಥವಾ $a^{\frac{m}{m-1}} (\cos\theta)^{\frac{m}{m-1}} + b^{\frac{m}{m-1}} (\sin\theta)^{\frac{m}{m-1}} = p^{\frac{m}{m-1}}$

ಅಥವಾ $(a\cos\theta)^{\frac{m}{m-1}} + (b\sin\theta)^{\frac{m}{m-1}} = p^{\frac{m}{m-1}}$

ಇದೇ ನಾವು ಕಂಡುಹಿಡಿಯಬೇಕಾಗಿದ್ದ ಷರತ್ತು.

10. $y^2 = ax$ ಮತ್ತು $x^3 + y^3 = 3axy$ ಎರಡು ವಕ್ರರೇಖೆಗಳ ಛೇದನ (ಮೂಲಬಿಂದುವಿನ ಹೊರತಾಗಿ) ಬಿಂದುವಿನಲ್ಲಿ ಉಂಟಾದ ಕೋನ ಕಂಡುಹಿಡಿಯಿರಿ.

ಛೇದನ ಬಿಂದುವನ್ನು ಮೊದಲು ಕಂಡುಹಿಡಿಯಬೇಕು. ಅದಕ್ಕೆ ಮೇಲಿನ ಎರಡು ಸಮೀಕರಣಗಳಲ್ಲಿ $x$ನ್ನು ವಿಲೋಪ (ಎಲಿಮಿನೇಟ್) ಮಾಡಬೇಕು.

ಮೊದಲನೇ ಸಮೀಕರಣದಿಂದ $x = \frac{y^2}{a}$

ಇದನ್ನು ಎರಡನೇ ಸಮೀಕರಣದಲ್ಲಿ ಆದೇಶಿಸಿದಾಗ

$$\left(\frac{y^2}{a}\right)^3 + y^3 = 3a\frac{y^2}{a}y$$

$$y^3\left(\frac{y^3}{a^3} + 1 - 3\right) = 0$$

$$y^3\left(\frac{y^3}{a^3} - 2\right) = 0$$

$$\therefore\ y = 0,\ 2^{\frac{1}{3}} a$$

$$\therefore\ x = 0 \text{ ಮತ್ತು } x = \frac{2^{\frac{2}{3}}a^2}{a} = 2^{\frac{2}{3}} a$$

ಆದ್ದರಿಂದ ಛೇದನ ಬಿಂದುಗಳು (0,0) ಮತ್ತು $(2^{\frac{2}{3}} a, 2^{\frac{1}{3}}a)$ ಆಗಿವೆ. ಈಗ, ಎರಡನೆಯ ಬಿಂದುವಿನಲ್ಲಿ ಉಂಟಾದ ಕೋನ ಕಂಡುಹಿಡಿಯಬೇಕಾಗಿದೆ.

$y^2 = ax$ ಸಮೀಕರಣವನ್ನು ನಿಷ್ಪನ್ನಿಸಿದಾಗ

$$2y\frac{dy}{dx} = a \quad \therefore\ \frac{dy}{dx} = \frac{a}{2y}$$

ಈಗ, $(2^{\frac{2}{3}} a, 2^{\frac{1}{3}}a)$ ಬಿಂದುವಿನಲ್ಲಿ

$$\frac{dy}{dx} = \frac{a}{2.2^{\frac{1}{3}}a} = 2^{\frac{-4}{3}} = (2^4)^{\frac{-1}{3}} = (16)^{\frac{-1}{3}}$$

$$\therefore \theta_1 = \tan^{-1}(16)^{\frac{-1}{3}}$$

ಹಾಗೆಯೇ, $x^3 + y^3 = 3axy$ ಸಮೀಕರಣವನ್ನು ನಿಷ್ಪನ್ನಿಸಿದಾಗ

$$3x^2 + 3y^2\frac{dy}{dx} = 3a\left[y + x\frac{dy}{dx}\right]$$

ಅಥವಾ $\frac{dy}{dx}(y^2 - ax) = ay - x^2 \quad \therefore \frac{dy}{dx} = \frac{ay - x^2}{y^2 - ax}$

ಈಗ ಛೇದನ ಬಿಂದು $\left(2^{\frac{2}{3}}a, 2^{\frac{1}{3}}a\right)$ ನಲ್ಲಿ

$$\left(\frac{dy}{dx}\right) = \frac{a.2^{\frac{1}{3}}a - 2^{\frac{4}{3}}a^2}{2^{\frac{2}{3}}a^2 - a.2^{\frac{2}{3}}a} = \frac{2^{\frac{1}{3}} - 2^{\frac{4}{3}}}{2^{\frac{2}{3}} - 2^{\frac{2}{3}}} \to -\infty$$

$$\therefore \theta_2 = \frac{\pi}{2}$$

ಆದ್ದರಿಂದ ಛೇದನ ಬಿಂದುವಿನಲ್ಲಿ ಆದ ಕೋನ $= \frac{\pi}{2} - \tan^{-1}(16)^{\frac{1}{3}}$

11. $y^2 = 4ax$ ಮತ್ತು $x^2 = 4by$ ಈ ಎರಡು ಪ್ಯಾರಾಬೊಲಾಗಳ ಮೂಲ ಬಿಂದುವಲ್ಲದ ಛೇದನ ಬಿಂದುಗಳಲ್ಲಿನ ಕೋನವನ್ನು ಕಂಡುಹಿಡಿಯಿರಿ.

ಛೇದನ ಬಿಂದುಗಳನ್ನು ಕಂಡುಹಿಡಿಯಲು ಸಮೀಕರಣಗಳಿಂದ $y$ ಯನ್ನು ವಿಲೋಪಿಸೋಣ.

2 ನೆಯ ಸಮೀಕರಣದಿಂದ $y = \frac{x^2}{4b}$

ಇದನ್ನು 1 ನೆಯದರಲ್ಲಿ ಆದೇಶಿಸಿದರೆ

$$\left(\frac{x^2}{4b}\right)^2 = 4ax$$

ಅಥವಾ $\frac{x^4}{16b^2} = 4ax$

ಅಥವಾ $x^4 = 64\, ab^2 x$

ಅಥವಾ $x(x^3 - 64ab^2) = 0$

$\therefore\ x = 0$ ಮತ್ತು $x = 4\, a^{\frac{1}{3}}\, b^{\frac{2}{3}}$

$\therefore\ y = 0$ ಮತ್ತು $y = \dfrac{16\, a^{\frac{2}{3}}\, b^{\frac{4}{3}}}{4b} = 4a^{\frac{2}{3}}\, b^{\frac{1}{3}}$

ಆದ್ದರಿಂದ ಛೇದನ ಬಿಂದುಗಳು (0,0) ಮತ್ತು $\left(4a^{\frac{1}{3}}\, b^{\frac{2}{3}},\, 4a^{\frac{2}{3}}\, b^{\frac{1}{3}}\right)$

ಈಗ, $y^2 = 4ax$ ಸಮೀಕರಣವನ್ನು ನಿಷ್ಪನ್ನಿಸಿದಾಗ

$$2y\, \frac{dy}{dx} = 4a$$

$$\therefore\ \frac{dy}{dx} = \frac{2a}{y}$$

$$\left(\frac{dy}{dx}\right)_{\left(4a^{\frac{1}{3}}\, b^{\frac{2}{3}},\, 4a^{\frac{2}{3}}\, b^{\frac{1}{3}}\right)} = \frac{2a}{4a^{\frac{2}{3}}\, b^{\frac{1}{3}}}$$

$$= \frac{a^{\frac{1}{3}}}{2b^{\frac{1}{3}}} = m_1 \text{ ಇರಲಿ}$$

ಹಾಗೆಯೇ, $x^2 = 4by$ ಸಮೀಕರಣವನ್ನು ನಿಷ್ಪನ್ನಿಸಿದಾಗ

$$2x = 4b\, \frac{dy}{dx} \quad \text{ಅಥವಾ} \quad \frac{dy}{dx} = \frac{x}{2b}$$

ಆದ್ದರಿಂದ, ಛೇದನ ಬಿಂದುವಿನಲ್ಲಿ

$$\left(\frac{dy}{dx}\right) = \frac{4a^{\frac{1}{3}}\, b^{\frac{2}{3}}}{2b} = \frac{2a^{\frac{1}{3}}}{b^{\frac{1}{3}}} = m_2 \text{ ಇರಲಿ}$$

$$\therefore\ \tan\theta = \frac{m_1 - m_2}{1 + m_1 m_2}$$

$$= \frac{\dfrac{a^{\frac{1}{3}}}{2b^{\frac{1}{3}}} - \dfrac{2a^{\frac{1}{3}}}{b^{\frac{1}{3}}}}{1 + \dfrac{2a^{\frac{1}{3}} a^{\frac{1}{3}}}{2b^{\frac{1}{3}} b^{\frac{1}{3}}}}$$

$$= \frac{\dfrac{a^{\frac{1}{3}} - 4a^{\frac{1}{3}}}{2b^{\frac{1}{3}}}}{\dfrac{b^{\frac{2}{3}} + a^{\frac{2}{3}}}{b^{\frac{2}{3}}}} = \frac{-3a^{\frac{1}{3}} b^{\frac{1}{3}}}{2\left(a^{\frac{2}{3}} + b^{\frac{2}{3}}\right)}$$

12. $ax^2 + by^2 = 1$ ಮತ್ತು $lx^2 + my^2 = 1$ ಈ ಎರಡು ವಕ್ರರೇಖೆಗಳು ಪರಸ್ಪರ ಲಂಬವಾಗಿ ಛೇದಿಸಬೇಕಾದರೆ $\dfrac{1}{a} - \dfrac{1}{b} = \dfrac{1}{l} - \dfrac{1}{m}$ ಆಗಿರಬೇಕು ಎಂದು ತೋರಿಸಿ.

ಈ ಎರಡು ವಕ್ರರೇಖೆಗಳು $(x_1, y_1)$ ನಲ್ಲಿ ಛೇದಿಸಲಿ

$$ax_1^2 + by_1^2 = 1$$

$$lx_1^2 + my_1^2 = 1$$

ಈ ಸಮೀಕರಣಗಳನ್ನು ಬಿಡಿಸಿದರೆ

$$x_1^2 = \frac{m-b}{am-bl} \text{ ಮತ್ತು } y_1^2 = \frac{a-l}{am-bl}$$

ಈಗ $ax^2 + by^2 = 1$ ಸಮೀಕರಣವನ್ನು ನಿಷ್ಪನ್ನಿಸಿದರೆ

$$2ax + 2by\frac{dy}{dx} = 0$$

ಅಥವಾ $\dfrac{dy}{dx} = \dfrac{-ax}{by}$

$$\therefore \left(\frac{dy}{dx}\right)_{(x_1, y_1)} = \frac{-ax_1}{by_1} = m_1 \text{ ಇರಲಿ}$$

ಇದೇ ರೀತಿ 2 ನೆಯ ಸಮೀಕರಣವನ್ನು ನಿಷ್ಪನ್ನಿಸಿದರೆ

$$\frac{dy}{dx} = \frac{-lx}{my}$$

$$\therefore \left(\frac{dy}{dx}\right)_{(x_1,y_1)} = \frac{-lx_1}{my_1} = m_2$$ ಇರಲಿ

ಎರಡು ವಕ್ರರೇಖೆಗಳೂ ಪರಸ್ಪರ ಲಂಬವಾಗಿ ಛೇದಿಸುವುದರಿಂದ $m_1 m_2 = -1$

ಅಂದರೆ, $\left(\frac{-ax_1}{by_1}\right) \cdot \left(\frac{-lx_1}{my_1}\right) = -1$

ಅಥವಾ $alx_1^2 + bmy_1^2 = 0$

ಈಗ, $x_1^2$ ಮತ್ತು $y_1^2$ ಗಳಿಗೆ ಬೆಲೆಗಳನ್ನು ಆದೇಶಿಸಿದರೆ

$$al\,\frac{(m-b)}{am-bl} + bm\,\frac{(a-l)}{am-bl} = 0$$

$$\therefore alm - abl + abm - blm = 0$$

ಇದನ್ನು $ablm$ ನಿಂದ ಭಾಗಿಸಿದರೆ

$$\frac{1}{b} - \frac{1}{m} + \frac{1}{l} - \frac{1}{a} = 0$$

ಅಥವಾ

$$\frac{1}{a} - \frac{1}{b} = \frac{1}{l} - \frac{1}{m}$$

13. $xy + 3x = 1$ ಮತ್ತು $y^2 + x + 5y + 5 = 0$ ಈ ಎರಡು ವಕ್ರರೇಖೆಗಳು (1,–2) ನಲ್ಲಿ ಸ್ಪರ್ಶಿಸುತ್ತವೆ ಎಂದು ತೋರಿಸಿ ಮತ್ತು ಅವುಗಳ ಸಾಮಾನ್ಯ ಸ್ಪರ್ಶರೇಖೆಯನ್ನು ಕಂಡುಹಿಡಿಯಿರಿ.

ಈಗ, (1,–2) ಎನ್ನುವುದು ಎರಡು ವಕ್ರರೇಖೆಗಳಿಗೂ ಸಾಮಾನ್ಯ ಬಿಂದುವಾಗಿದೆ.

ಮೊದಲನೇ ಸಮೀಕರಣ $xy + 3x = 1$ ನ್ನು ನಿಷ್ಪನ್ನಿಸಿದಾಗ

$$x\frac{dy}{dx} + y + 3 = 0 \qquad \therefore \frac{dy}{dx} = \frac{-3-y}{x}$$

$$\therefore \left(\frac{dy}{dx}\right)_{(1,-2)} = \frac{-3+2}{1} = \frac{-1}{1} = -1 \qquad \therefore m_1 = -1$$

ಹಾಗೇಯೇ $y^2 + x + 5y + 5 = 0$ ಸಮೀಕರಣವನ್ನು ನಿಷ್ಪನ್ನಿಸಿದಾಗ

$$2y\frac{dy}{dx} + 1 + 5\frac{dy}{dx} = 0 \qquad \text{ಅಥವಾ} \quad \frac{dy}{dx}(2y+5) = -1$$

$$\therefore \left(\frac{dy}{dx}\right) = \frac{-1}{2y+5} \text{ ಅಥವಾ} \left(\frac{dy}{dx}\right)_{(1,-2)} = -\frac{1}{2(-2)+5} = -1$$

ಈಗ, $m_1 = m_2$ ಆಗಿರುವುದರಿಂದ ಎರಡು ವಕ್ರರೇಖೆಗಳೂ (1,–2) ನಲ್ಲಿ ಪರಸ್ಪರ ಸ್ಪರ್ಶಿಸುತ್ತವೆ. ಅವುಗಳ ಸಾಮಾನ್ಯ ಸ್ಪರ್ಶರೇಖೆಯು

$y + 2 = (-1)(x-1)$

ಅಥವಾ $y + 2 = -x + 1$

ಅಥವಾ $x + y + 1 = 0$

14. $x - 4y + 3 = 0$ ರೇಖೆಗೆ ಸಮಾನಾಂತರವಾಗಿರುವಂತೆ $y = 6-x^2$ ವಕ್ರರೇಖೆಯ ಲಂಬರೇಖೆಯನ್ನು ಕಂಡುಹಿಡಿಯಿರಿ.

$y = 6-x^2$ ಸಮೀಕರಣವನ್ನು ನಿಷ್ಪನ್ನಿಸಿದಾಗ

$$\frac{dy}{dx} = -2x$$

$\therefore$ ಲಂಬರೇಖೆಯ ಓಟ $= \frac{1}{2x_1}$ [$(x_1, y_1)$ ಬಿಂದುವಿನಲ್ಲಿ]

ಈಗ, ಕೊಟ್ಟಿರುವ ರೇಖೆಯ ಓಟ $= \frac{1}{4}$

ಲಂಬರೇಖೆ ಕೊಟ್ಟಿರುವ ರೇಖೆಗೆ || ಆಗಿದೆ $\therefore m_1 = m_2$

$$\therefore \frac{1}{2x_1} = \frac{1}{4}$$

$$\therefore x_1 = 2$$

$y$ – ನಿರ್ದೇಶಕವನ್ನು ಕಂಡುಹಿಡಿಯಲು ವಕ್ರರೇಖೆಯಲ್ಲಿ $x_1$=2 ಆದೇಶಿಸಿದಾಗ

$$y_1 = 6-x_1^2 = 6-2^2 = 2$$

ಆದ್ದರಿಂದ (2, 2) ಎನ್ನುವ ಬಿಂದುವಿನಲ್ಲಿ ಲಂಬರೇಖೆ ಹಾದುಹೋಗುತ್ತದೆ.

$$\therefore y - 2 = \frac{1}{4}(x-2) \text{ ಅಥವಾ } x-4y-6 = 0$$

ಎಂಬುದು ಲಂಬರೇಖೆಯ ಸಮೀಕರಣ.

## ಅಭ್ಯಾಸ – 12.1

1. ಕೆಳಗೆ ಕೊಟ್ಟಿರುವ ವಕ್ರರೇಖೆಗಳಿಗೆ $(x,y)$ ಬಿಂದುವಿನಲ್ಲಿ ಸ್ಪರ್ಶರೇಖೆ ಮತ್ತು ಲಂಬರೇಖೆಗಳನ್ನು ಕಂಡುಹಿಡಿಯಿರಿ.

(i) $y^2 = 4ax$

(ii) $\frac{x^2}{a^2} + \frac{y^2}{b^2} = 1$

(iii) $xy = K$

(iv) $e^y = \sin x$

(v) $x^3 - 3axy + y^3 = 0$

2. ಈ ಕೆಳಗಿನ ವಕ್ರರೇಖೆಗಳಿಗೆ ಕೊಟ್ಟಿರುವ ಬಿಂದುವಿನಲ್ಲಿ ಸ್ಪರ್ಶರೇಖೆ ಮತ್ತು ಲಂಬರೇಖೆಗಳನ್ನು ಕಂಡುಹಿಡಿಯಿರಿ.

(i) $\sqrt{x} + \sqrt{y} = 5$ (9,4) ಬಿಂದುವಿನಲ್ಲಿ

(ii) $3x^2 - xy + 2y^2 = 31$ (1,4) ರಲ್ಲಿ

(iii) $x^2 + y^2 - 4x - 2y + 1 = 0$ (2,–1) ರಲ್ಲಿ

(iv) $y = \sin 2x$ $x = \frac{\pi}{6}$ ರಲ್ಲಿ

(v) $y = x^2$ (2,8) ರಲ್ಲಿ

3. $4x - 2y + 1 = 0$ ಸರಳರೇಖೆಗೆ ಸಮಾನಾಂತರವಾಗಿರುವಂತೆ $y = 6x - x^2$ ವಕ್ರರೇಖೆಗೆ ಸ್ಪರ್ಶರೇಖೆ ಮತ್ತು ಸ್ಪರ್ಶಬಿಂದುಗಳನ್ನು ಕಂಡುಹಿಡಿಯಿರಿ.

4. $x + 2y = 6$ ಸರಳರೇಖೆಗೆ ಲಂಬವಾಗಿರುವಂತೆ, $y = 3x^2 - 4x$ ವಕ್ರರೇಖೆಗೆ ಎಳೆದ ಸ್ಪರ್ಶರೇಖೆಯನ್ನು ಕಂಡುಹಿಡಿಯಿರಿ.

5. $x^{2/3} + y^{2/3} = a^{2/3}$ ವಕ್ರರೇಖೆಗೆ ಎಳೆದ ಸ್ಪರ್ಶರೇಖೆಯು ಅಕ್ಷರೇಖೆಗಳನ್ನು ಛೇದಿಸಿದಾಗ ಉಂಟಾದ ಸ್ಪರ್ಶರೇಖೆಯ ಭಾಗವು ಒಂದು ಸ್ಥಿರ ಸಂಖ್ಯೆ ಮತ್ತು ಅದು $a$ ಗೆ ಸಮ ಎಂದು ಸಾಧಿಸಿ.

[ಸೂಚನೆ: ($a\cos^3\theta$, $a\sin^3\theta$) ಎನ್ನುವುದು ವಕ್ರರೇಖೆಯ ಮೇಲೆ ಯಾವುದಾದರೂ ಬಿಂದು ಎಂದು ಭಾವಿಸಿ].

6. $y^2 = 4ax$ ಪ್ಯಾರಾಬೊಲಾಗೆ ($at^2$, $2at$) ಬಿಂದುವಿನಲ್ಲಿ ಸ್ಪರ್ಶರೇಖೆ ಮತ್ತು ಲಂಬರೇಖೆಗಳನ್ನು ಕಂಡುಹಿಡಿಯಿರಿ.

7. $9x^2 - 4y^2 = 36$ ವಕ್ರರೇಖೆಗೆ $\left(\frac{2\sqrt{10}}{3}, 1\right)$ ರಲ್ಲಿ ಸ್ಪರ್ಶರೇಖೆ ಮತ್ತು ಲಂಬರೇಖೆಗಳನ್ನು ಕಂಡುಹಿಡಿಯಿರಿ.

8. $y = x^3 - 3x^2 - 9x + 5$ ವಕ್ರರೇಖೆಯ ಮೇಲೆ ಯಾವ ಬಿಂದುಗಳಲ್ಲಿ ಸ್ಪರ್ಶರೇಖೆಯು $x$–ಅಕ್ಷಕ್ಕೆ ಸಮಾನಾಂತರವಾಗಿರುತ್ತದೆ?

9. $y = 3x^2 + 2$ ವಕ್ರರೇಖೆಯ ಓಟ 2 ಆದಲ್ಲಿ ಸ್ಪರ್ಶ ರೇಖೆ, ಲಂಬರೇಖೆಗಳನ್ನು ಕಂಡುಹಿಡಿಯಿರಿ.

10. $y^2 = 2x$ ಪ್ಯಾರಾಬೊಲಾ ಮತ್ತು $x^2 + y^2 = 8$ ವೃತ್ತವು ಛೇದಿಸುವಲ್ಲಿ ಉಂಟಾಗುವ ಕೋನವ(ಗಳ)ನ್ನು ಕಂಡುಹಿಡಿಯಿರಿ.

11 $yx^2 = c_1$ ಮತ್ತು $xy = c_2$ ಈ ವಕ್ರರೇಖೆಗಳು (3,4) ರ ಮೂಲಕ ಹಾದು ಹೋಗುತ್ತವೆ. ಅವು ಛೇದಿಸುವಲ್ಲಿ ಕೋನ ಎಷ್ಟು?

12. $ax+hy = 0$ ಎನ್ನುವ ರೇಖೆಯು $ax^2 + 2hxy + by^2 = 1$ ಎಲಿಪ್ಸ್‌ನ್ನು ಸಂಧಿಸುವಲ್ಲಿ ಎಳೆದ ಸ್ಪರ್ಶರೇಖೆಯು x- ಅಕ್ಷಕ್ಕೆ ಸಮಾನಾಂತರವಾಗಿರುತ್ತದೆಂದು ತೋರಿಸಿ ಮತ್ತು $hx + by = 0$ ಎನ್ನುವ ರೇಖೆಯು ಮೇಲಿನ ಎಲಿಪ್ಸ್‌ನ್ನು ಸಂಧಿಸುವಲ್ಲಿ ಎಳೆದ ಸ್ಪರ್ಶರೇಖೆಯು $y$ –ಅಕ್ಷಕ್ಕೆ ಸಮಾನಾಂತರವಾಗಿರುತ್ತದೆಂದು ತೋರಿಸಿ.

13. $ay = x^2$ ಪ್ಯಾರಾಬೊಲಾ $x^3 + y^3 = 3axy$ ವಕ್ರರೇಖೆಯನ್ನು ಸಂಧಿಸುವಲ್ಲಿನ ಸ್ಪರ್ಶರೇಖೆಯು $x$– ಅಕ್ಷಕ್ಕೆ ಸಮಾನಾಂತರವಾಗಿಯೂ ಮತ್ತು $y^2 = ax$ ಪ್ಯಾರಾಬೊಲಾ, ಮೇಲಿನ ವಕ್ರರೇಖೆಯನ್ನು ಸಂಧಿಸುವಲ್ಲಿನ ಸ್ಪರ್ಶರೇಖೆಯು $y$–ಅಕ್ಷಕ್ಕೆ ಸಮಾನಾಂತರವಾಗಿಯೂ ಇರುತ್ತವೆ ಎಂದು ತೋರಿಸಿ.

14. ಈ ಕೆಳಗಿನ ವಕ್ರರೇಖೆಗಳಿಗೆ '$\theta$' ಬಿಂದುವಿನಲ್ಲಿ ಸ್ಪರ್ಶರೇಖೆ ಮತ್ತು ಲಂಬರೇಖೆಗಳನ್ನು ಕಂಡುಹಿಡಿಯಿರಿ.

(a) ಎಲಿಪ್ಸ್ $x = a\cos\theta$, $y = b\sin\theta$

(b) ಸೈಕ್ಲಾಯಿಡ್ $x = a(\theta + \sin\theta), \quad y = a(1 - \cos\theta)$

(c) ಎಪಿಸೈಕ್ಲಾಯಿಡ್ $x = A\cos\theta - B\cos\frac{A}{B}\theta$

$$y = A\sin\theta - B\sin\frac{A}{B}\theta$$

15. $ax^2+by^2 = 1$ ಮತ್ತು $a_1x^2 + b_1y^2 = 1$ ಈ ಎರಡು ವಕ್ರರೇಖೆಗಳು ಲಂಬವಾಗಿ ಛೇದಿಸಬೇಕಾದರೆ ಷರತ್ತು ಏನು?

16. ಈ ಕೆಳಗಿನ ವಕ್ರರೇಖೆಗಳಿಗೆ ಸ್ಪರ್ಶ ರೇಖೆಯು ಎಲ್ಲಿ $x-$ ಅಕ್ಷಕ್ಕೆ ಸಮಾನಾಂತರವಾಗಿದೆ, ಎಲ್ಲಿ $x-$ ಅಕ್ಷಕ್ಕೆ ಲಂಬವಾಗಿದೆ ಎಂದು ಕಂಡುಹಿಡಿಯಿರಿ.

(a) $ax^2 + 2hxy + by^2 = 1$

(b) $y = \dfrac{x^3 - a^3}{ax}$

(c) $y^3 = x^2(2a - x)$

17. ಈ ಕೆಳಗಿನ ವಕ್ರರೇಖೆಗಳ ನಡುವಿನ ಕೋನವನ್ನು ಕಂಡುಹಿಡಿಯಿರಿ.

(i) $x^2-y^2 = a^2$ ಮತ್ತು $x^2 + y^2 = a^2\sqrt{2}$

(ii) $y^2 = 4ax$ ಮತ್ತು $x^2 = 4by$

(iii) $xy = a^2$ ಮತ್ತು $x^2 + y^2 = 2a^2$

## 12.4 ಉಪಸ್ಪರ್ಶರೇಖೆ ಮತ್ತು ಉಪಲಂಬರೇಖೆ




ಚಿತ್ರ 12.6 ರಲ್ಲಿ, $P(x,y)$ ಎಂಬುದು $y = f(x)$ ಎಂಬ ವಕ್ರರೇಖೆಯ ಮೇಲಿರುವ ಬಿಂದು. ಈಗ, $PS = y$, $PT$ ಸ್ಪರ್ಶರೇಖೆ, ಮತ್ತು $TN$ ಎಂಬುದು ಲಂಬರೇಖೆ, ಕೋನ $PTN = \psi$ ಮತ್ತು

$$\tan \psi = \frac{dy}{dx}$$

***ST*** **ರೇಖೆಗೆ ಉಪಸ್ಪರ್ಶರೇಖೆ (ಸಬ್‌ಟ್ಯಾಂಜೆಂಟ್) ಎಂದೂ** ***SN*** **ರೇಖೆಗೆ** ಉಪಲಂಬರೇಖೆ(ಸಬ್‌ನಾರ್ಮಲ್) ಎಂದೂ ಹೆಸರು. ಚಿತ್ರ 12.6 ರಿಂದ ಉಪಸ್ಪರ್ಶ ರೇಖೆ

$$ST = y \cot \psi = \frac{y}{\frac{dy}{dx}}$$

ಮತ್ತು ಉಪಲಂಬರೇಖೆ

$$SN = y \tan \psi = y.\frac{dy}{dx}$$

**ಸೂಚನೆ:** ಇದೇ ಚಿತ್ರದಿಂದ ಲಂಬರೇಖೆ, ಸ್ಪರ್ಶರೇಖೆಗಳ ಉದ್ದವನ್ನು ಕಂಡುಹಿಡಿಯಬಹುದು.

ಲಂಬರೇಖೆ $PN = y \sec \psi = y\sqrt{1 + \tan^2 \psi}$

$$= y\sqrt{1 + \left(\frac{dy}{dx}\right)^2}$$

ಸ್ಪರ್ಶರೇಖೆ $PT = y \operatorname{cosec} \psi = \dfrac{y\sqrt{1+\tan^2 y}}{\tan \psi}$

$$= \frac{y\sqrt{1+\left(\frac{dy}{dx}\right)^2}}{\frac{dy}{dx}}$$

**ಸಾರಾಂಶ:**

**ಉಪಸ್ಪರ್ಶರೇಖೆ** $$ST = \frac{y}{\frac{dy}{dx}}$$

**ಉಪಲಂಬರೇಖೆ** $$SN = y\frac{dy}{dx}$$

## ಉದಾಹರಣೆಗಳು

1 $x^2+y^2-6x-2y+5=0$ ಎಂಬ ರೇಖೆಯ ಮೇಲಿನ (2,–1) ಎಂಬ ಬಿಂದುವಿನಲ್ಲಿ ಉಪಸ್ಪರ್ಶರೇಖೆ ಮತ್ತು ಉಪಲಂಬರೇಖೆಗಳ ಉದ್ದವನ್ನು ಕಂಡುಹಿಡಿಯಿರಿ.

ದತ್ತ ಸಮೀಕರಣವನ್ನು ನಿಷ್ಪನ್ನಿಸಿದಾಗ

$$2x + 2y\frac{dy}{dx} - 6 - 2\frac{dy}{dx} = 0$$

ಅಥವಾ $\dfrac{dy}{dx}(y-1) = 3-x$

ಅಥವಾ $\dfrac{dy}{dx} = \dfrac{3-x}{y-1}$

$$\therefore \left(\frac{dy}{dx}\right)_{(2,-1)} = \frac{3-2}{-1-1} = \frac{-1}{2}$$

ಉಪಸ್ಪರ್ಶರೇಖೆ $= \dfrac{y}{\frac{dy}{dx}} = \dfrac{-1}{\frac{-1}{2}} = 2$

ಉಪಲಂಬರೇಖೆ $y\frac{dy}{dx} = -1\left(\frac{-1}{2}\right) = \frac{1}{2}$

2. $x^5 = ay^6$ ರೇಖೆಯ ಉಪಸ್ಪರ್ಶರೇಖೆಯ ವರ್ಗವು ಉಪಲಂಬರೇಖೆಯ ಘನಕ್ಕೆ ಅನುಪಾತೀಯವಾಗಿರುತ್ತದೆ ಎಂದು ತೋರಿಸಿ.

$ay^6 = x^5$ ಸಮೀಕರಣವನ್ನು ನಿಷ್ಪನ್ನಿಸಿದಾಗ

$$6ay^5\frac{dy}{dx} = 5x^4$$

$$\therefore \frac{dy}{dx} = \frac{5x^4}{6ay^5}$$

ಉಪಸ್ಪರ್ಶರೇಖೆ $= \frac{y}{\frac{dy}{dx}} = \frac{y.6ay^5}{5x^4} = \frac{6ay^6}{5x^4}$

$\therefore$ ಉಪಸ್ಪರ್ಶರೇಖೆಯ ವರ್ಗ $= \frac{36a^2y^{12}}{25x^8}$

ಉಪಲಂಬರೇಖೆ $= y\frac{dy}{dx} = y\frac{5x^4}{6ay^5} = \frac{5x^4}{6ay^4}$

$\therefore$ ಉಪಲಂಬರೇಖೆಯ ಘನ $= \frac{125x^{12}}{216a^3y^{12}}$

$\frac{\text{ಉಪಸ್ಪರ್ಶರೇಖೆಯ ವರ್ಗ}}{\text{ಉಪಲಂಬರೇಖೆಯ ಘನ}} = \frac{36a^2y^{12}}{25x^8} \times \frac{216a^3y^{12}}{125x^{12}}$

$$= \frac{36 \times 216\, y^{24}\, a^5}{25 \times 125\, x^{20}}$$

$$= \frac{36 \times 216\, y^{24}\, a^5}{25 \times 125\, a^4 y^{24}} \quad [x^5 = ay^6]$$

$$= \frac{36 \times 216\, a}{25 \times 125} = \text{ಸ್ಥಿರಸಂಖ್ಯೆ}$$

$\therefore$ (ಉಪಸ್ಪರ್ಶರೇಖೆ)$^2$ $\alpha$ (ಉಪಲಂಬರೇಖೆಯ)$^3$

3. $y = be^{\frac{x}{a}}$ ರೇಖೆಯಲ್ಲಿ ಉಪಸ್ಪರ್ಶರೇಖೆಯು ಒಂದು ಸ್ಥಿರಸಂಖ್ಯೆ ಎಂದು ತೋರಿಸಿ.

$$\frac{dy}{dx} = be^{\frac{x}{a}} \frac{1}{a} = \frac{b}{a} e^{\frac{x}{a}}$$

ಉಪಸ್ಪರ್ಶರೇಖೆ $= \dfrac{y}{\frac{dy}{dx}} = \dfrac{y}{\frac{be^{\frac{x}{a}}}{a}} = \dfrac{be^{\frac{x}{a}}}{\frac{be^{\frac{x}{a}}}{a}} = a$, ಸ್ಥಿರಸಂಖ್ಯೆ

4. $n$ ನ ಯಾವ ಬೆಲೆಗೆ $xy^n = a^{n+1}$ ರೇಖೆಯ ಉಪಲಂಬವು ಸ್ಥಿರಸಂಖ್ಯೆಯಾಗಿರುತ್ತದೆ?

ದತ್ತ ಸಮೀಕರಣವನ್ನು ನಿಷ್ಪನ್ನಿಸಿದಾಗ

$$y^n + x.ny^{n-1}\frac{dy}{dx} = 0$$

ಅಥವಾ $y^{n-1}\left(y+nx\frac{dy}{dx}\right) = 0 \qquad \therefore \frac{dy}{dx} = \frac{-y}{nx}$

$\therefore$ ಉಪಲಂಬ $= y.\dfrac{dy}{dx} = y.\left(\dfrac{-y}{nx}\right) = \dfrac{-y^2}{nx}$

$$= \frac{-y^2 y^n}{n.a^{n+1}} = \frac{-y^{n+2}}{na^{n+1}}$$

ಇದು ಸ್ಥಿರಸಂಖ್ಯೆಯಾಗಬೇಕಾದರೆ $y^{n+2}=1$ ಆಗಬೇಕು. ಅಂದರೆ $n+2=0$, ಅಥವಾ $n=-2$ ಆಗಿರಬೇಕು.

5. $x^m.y^n = a^{m+n}$ ರೇಖೆಯಲ್ಲಿ ಉಪಸ್ಪರ್ಶರೇಖೆಯು $x$-ನಿರ್ದೇಶಕದಂತೆ ಅನುಪಾತೀಯವಾಗಿರುತ್ತದೆ ಎಂದು ತೋರಿಸಿ.

$$mx^{m-1}y^n + x^m ny^{n-1}\frac{dy}{dx} = 0$$

$$\therefore \frac{dy}{dx} = \frac{-mx^{m-1}y^n}{nx^m y^{n-1}} = \frac{-my}{nx}$$

$$\text{ಉಪಸ್ಪರ್ಶರೇಖೆ} = \frac{y}{\frac{dy}{dx}} = \frac{y.nx}{-my} = \frac{-nx}{m}$$

$\therefore$ ಉಪಸ್ಪರ್ಶರೇಖೆ $\alpha$ $x$

6. $y^2 = 4ax$ ಪ್ಯಾರಾಬೊಲಾ ಮೇಲಿನ ಯಾವುದಾದರೂ ಒಂದು ಬಿಂದುವಿನಲ್ಲಿ ಉಪಸ್ಪರ್ಶರೇಖೆಯು $x$–ನಿರ್ದೇಶಕದ ಎರಡರಷ್ಟು ಮತ್ತು ಉಪಲಂಬರೇಖೆಯು ಸ್ಥಿರಸಂಖ್ಯೆ ಎಂದು ತೋರಿಸಿ.

$$2y\frac{dy}{dx} = 4a \qquad \therefore \frac{dy}{dx} = \frac{2a}{y}$$

$$\text{ಉಪಸ್ಪರ್ಶರೇಖೆ} = \frac{y}{\frac{dy}{dx}} = \frac{y}{\frac{2a}{y}} = \frac{y^2}{2a} = 2x$$

$$= 2\ (x\text{–ನಿರ್ದೇಶಕ})$$

$$\text{ಉಪಲಂಬರೇಖೆ} = y\frac{dy}{dx} = y.\frac{2a}{y} = 2a = \text{ಸ್ಥಿರಸಂಖ್ಯೆ}$$

## ಅಭ್ಯಾಸ – 12.2

1. $y = b \sin \frac{x}{a}$ ರೇಖೆಯ ಯಾವ ಬಿಂದುವಿನ ಮೇಲಾದರೂ, ಉಪಸ್ಪರ್ಶರೇಖೆ ಮತ್ತು ಉಪಲಂಬರೇಖೆಗಳ ಉದ್ದಗಳನ್ನು ಕಂಡುಹಿಡಿಯಿರಿ.

2. $x = a(\theta - \sin\theta)$, $y = a(1 - \cos\theta)$ ಎಂಬ ರೇಖೆಯ $\theta = \frac{\pi}{2}$ ಎಂಬ ಬಿಂದುವಿನಲ್ಲಿ ಉಪಸ್ಪರ್ಶರೇಖೆ ಮತ್ತು ಉಪಲಂಬರೇಖೆಗಳನ್ನು ಕಂಡುಹಿಡಿಯಿರಿ.

3. $y = a^x$ ರೇಖೆಯ ಉಪಸ್ಪರ್ಶರೇಖೆಯು ಸ್ಥಿರಸಂಖ್ಯೆ ಎಂದು ತೋರಿಸಿ.

4. $ay^2 = (x+b)^3$ ರೇಖೆಯ ಉಪಸ್ಪರ್ಶರೇಖೆಯ ವರ್ಗವು ಉಪಲಂಬರೇಖೆಯ ಅನುಪಾತೀಯವಾಗಿರುತ್ತದೆ ಎಂದು ತೋರಿಸಿ.

5. $y^n = a^{n-1}x$ ರೇಖೆಯ ಯಾವ ಬಿಂದುವಿನಲ್ಲಾದರೂ ಉಪಲಂಬರೇಖೆಯು ಸ್ಥಿರಸಂಖ್ಯೆಯಾಗಬೇಕಾದರೆ $n$ ನ ಬೆಲೆ ಏನು?

6. $xy = c^2$ ರೇಖೆಯಲ್ಲಿ ಉಪಲಂಬರೇಖೆಯು $y$ ನಿರ್ದೇಶಕದ ಘನಕ್ಕೆ ಅನುಪಾತೀಯವಾಗಿರುತ್ತದೆ ಎಂದು ತೋರಿಸಿ.

7. $ax^2+by^2 = k$ ರೇಖೆಯಲ್ಲಿ ಉಪಲಂಬರೇಖೆಯು $x$ ನಿರ್ದೇಶಕಕ್ಕೆ ಅನುಪಾತೀಯವಾಗಿರುತ್ತದೆ ಎಂದು ತೋರಿಸಿ.

8. ಕೆಳಗೆ ಕೊಟ್ಟಿರುವ ರೇಖೆಗಳಿಗೆ ಉಪಸ್ಪರ್ಶರೇಖೆ ಮತ್ತು ಉಪಲಂಬರೇಖೆಗಳ ಉದ್ದಗಳನ್ನು ಕಂಡುಹಿಡಿಯಿರಿ.

(i) $\frac{x^2}{16} + \frac{y^2}{9} = 18$ ರೇಖೆಗೆ (8,6) ರಲ್ಲಿ

(ii) $y^2 = \frac{x^3}{2-x}$ ರೇಖೆಗೆ (1,1) ರಲ್ಲಿ

(iii) $x = a\sin^2\theta$, $y = a\tan\theta$ ರೇಖೆಗೆ '$\theta$' ಬಿಂದುವಿನಲ್ಲಿ

(iv) $ay^2 = (a+x^2)(3a-x)$ ರೇಖೆಗೆ $x=a$ ಆದಾಗ

(v) $x^2 + xy + y^2 = 7$ ರೇಖೆಗೆ (1,–3) ಬಿಂದುವಿನಲ್ಲಿ

(vi) $\sqrt{x} + \sqrt{y} = 5$ ರೇಖೆಗೆ (9,4) ರಲ್ಲಿ

(vii) $x = a\cos^3\theta$ , $y = a\sin^3\theta$ ರೇಖೆಗೆ '$\theta$' ನಲ್ಲಿ

(viii) $y = 5x - 4x^3 + 2$ ರೇಖೆಗೆ, ಈ ರೇಖೆ $y$–ಅಕ್ಷವನ್ನು ಛೇದಿಸುವಲ್ಲಿ

(ix) $y = x^2 - 3x + 5$ ರೇಖೆಗೆ (1,3) ರಲ್ಲಿ

(x) $y = x\sin x$ ರೇಖೆಗೆ $x = \frac{\pi}{2}$ ಆದಾಗ

9. $x^m y^m = a^{m+n}$ ರೇಖೆಗೆ ಉಪಸ್ಪರ್ಶ ರೇಖೆಯು $x$ ನಿರ್ದೇಶಕದ ಅನುಪಾತೀಯವಾಗಿರುತ್ತದೆ ಎಂದು ತೋರಿಸಿ.

10. $y = ce^{-\frac{1}{2}x^2}$ ರೇಖೆಗೆ ಉಪಸ್ಪರ್ಶರೇಖೆಯು $x$ನಿರ್ದೇಶಕದ ವಿಲೋಮಾನುಪಾತೀಯ ವಾಗಿರುತ್ತದೆ ಎಂದು ತೋರಿಸಿ.

11. $x^{m+n} = a^{m-n}y^{2n}$ ರೇಖೆಗೆ ಉಪಸ್ಪರ್ಶ ರೇಖೆಯ $m$ನೇ ಘಾತವು, ಉಪಲಂಬರೇಖೆಯ $n$ ನೇ ಘಾತದ ಅನುಪಾತೀಯವಾಗಿರುತ್ತದೆ ಎಂದು ತೋರಿಸಿ.

12. $x = a+b\log[(b+\sqrt{(b^2-y^2)}] - \sqrt{b^2-y^2}$ ರೇಖೆಗೆ ಉಪಲಂಬರೇಖೆ ಮತ್ತು ಉಪಸ್ಪರ್ಶರೇಖೆಗಳ ಮೊತ್ತವು ಸ್ಥಿರಸಂಖ್ಯೆ ಎಂದು ತೋರಿಸಿ.

13. $y = a\log(x^2-a^2)$ ರೇಖೆಗೆ ಉಪಲಂಬರೇಖೆ ಮತ್ತು ಉಪಸ್ಪರ್ಶರೇಖೆಗಳ ಮೊತ್ತವು ಆ ಬಿಂದುವಿನ ನಿರ್ದೇಶಕಗಳ ಗುಣಲಬ್ಧದ ಅನುಪಾತೀಯವಾಗಿದೆ ಎಂದು ತೋರಿಸಿ.

## 12.5 ನಿಷ್ಪನ್ನ ಕಲನಾಂಕವು ಒಂದು ದರಮಾಪಕ

$y=f(x)$ ಎಂಬ ಒಂದು ಉತ್ಪನ್ನವನ್ನು ಗಮನಿಸಿ. $x=a$ ಆದಾಗ $y=f(a)$ ಮತ್ತು $x = a+h$ ಆದಾಗ $y = f(a+h)$ ಆದ್ದರಿಂದ $x$ ಚರವು $a$ ಯಿಂದ $a+h$ ಗೆ ಬದಲಾಯಿಸಿದಾಗ, $y$ ಚರವು $f(a)$ ಯಿಂದ $f(a+h)$ ಗೆ ಬದಲಾಯಿಸಿದೆ. $y$ ನಲ್ಲಿ ಆದ ಬದಲಾವಣೆ $f(a+h) - f(a)$ ಮತ್ತು $x$ ನಲ್ಲಿ ಆದ ಬದಲಾವಣೆ $a+h - a = h$

$$\therefore \frac{f(a+h - f(a)}{h} = \frac{y\text{ನಲ್ಲಿ ಆದ ಬದಲಾವಣೆ}}{x\text{ನಲ್ಲಿ ಆದ ಬದಲಾವಣೆ}}$$

ಇದು $x=a$ ನಲ್ಲಿ $y$ ನ ಬದಲಾವಣೆಯ *ಸರಾಸರಿ ದರವನ್ನು* ತಿಳಿಸುತ್ತದೆ.

ಈಗ $h \to 0$ ಆದ ಹಾಗೆ ಮಿತಿಯನ್ನು ತೆಗೆದರೆ

$$\lim_{h \to 0} \left[\frac{f(a+h) - f(a)}{h}\right] = f'(a)$$

$f'(a)$ ಬೆಲೆಯು $x=a$ ನಲ್ಲಿ $y=f(x)$ ನ ತಾತ್ಕಾಲಿಕ ಬದಲಾವಣೆಯ ದರವನ್ನು ಸೂಚಿಸುತ್ತದೆ.

ಹೀಗೆ, $\frac{dy}{dx} = f'(x)$ ಎನ್ನುವುದು ($x$ ಗೆ ಸಂಬಂಧಿಸಿದಂತೆ) $y$ ನ ತಾತ್ಕಾಲಿಕ ಬದಲಾವಣೆಯ ದರವನ್ನು ಸೂಚಿಸುತ್ತದೆ.

### ವೇಗ ಮತ್ತು ವೇಗೋತ್ಕರ್ಷ

ಒಂದು ವಸ್ತುವು $OA$ ಎಂಬ ಸರಳರೇಖೆಯ ಮೇಲೆ ಚಲಿಸುತ್ತಿದೆ ಎಂದು ಭಾವಿಸೋಣ.




ಚಿತ್ರ 12.7

$O$ ಒಂದು ಸ್ಥಿರ ಬಿಂದು. ವಸ್ತುವು $O$ ಬಿಂದುವನ್ನು ದಾಟಿದ $t$ ಸೆಕೆಂಡುಗಳ ತರುವಾಯ $P$ ಬಿಂದುವಿನ ಸ್ಥಾನದಲ್ಲಿಯೂ $t+\delta t$ ಸೆಕೆಂಡುಗಳ ತರುವಾಯ $Q$ ಬಿಂದುವಿನ ಸ್ಥಾನದಲ್ಲಿದೆ (ಚಿತ್ರ 12.7).

$OP = s,\ OQ = s + \delta s \ \therefore PQ = \delta s$

ಅಂದರೆ, $\delta t$ ಕಾಲದಲ್ಲಿ ವಸ್ತುವು $\delta s$ ದೂರ ಚಲಿಸಿದೆ.

ಆದ್ದರಿಂದ $\frac{\delta s}{\delta t}$ ಎಂಬುದು, ವಸ್ತುವು $P$ ಯಿಂದ $Q$ ಗೆ ಚಲಿಸಿದಾಗ, ಸರಾಸರಿ ವೇಗ.

ಈಗ, $Q$ ಬಿಂದುವು $P$ ಯನ್ನು ಸಮೀಪಿಸಿದಂತೆಲ್ಲಾ $\delta t \to 0$ ಆಗುವುದು.

ಆದ್ದರಿಂದ, $P$ ಬಿಂದುವಿನಲ್ಲಿ ತಾತ್ಕಾಲಿಕ ವೇಗ

$$\lim_{\delta t \to 0} \frac{\delta s}{\delta t} = \frac{ds}{dt}$$

ಇದನ್ನು $v$ ಎಂದು ಬರೆದರೆ

$$v = \frac{ds}{dt}$$

ಎಂಬುದು $P$ ಬಿಂದುವಿನಲ್ಲಿ ವಸ್ತುವಿನ ತಾತ್ಕಾಲಿಕ ವೇಗ. ಇದೇ ರೀತಿ ತಾತ್ಕಾಲಿಕ ವೇಗ $v$ ಯ ವ್ಯತ್ಯಾಸದ ದರವನ್ನು ಕಂಡುಹಿಡಿದರೆ ವೇಗೋತ್ಕರ್ಷ ($a$) ದೊರಕುವುದು.

$$a = \lim_{\delta t \to 0} \frac{\delta v}{\delta t} = \frac{dv}{dt} = \frac{d}{dt}\left(\frac{ds}{dt}\right) = \frac{d^2 s}{dt^2}$$

$$a = \frac{dv}{dt} = \frac{dv}{ds} \cdot \frac{ds}{dt} = v\frac{dv}{ds}$$

$$\left.\begin{aligned} a &= \frac{dv}{dt} \\ a &= v\frac{dv}{ds} \\ a &= \frac{d^2 s}{dt^2} \end{aligned}\right]$$ ಇವು ವೇಗೋತ್ಕರ್ಷದ ಬೇರೆ ಬೇರೆ ರೂಪಗಳು.

$a = 0$ ಆದರೆ ವೇಗವು ಸ್ಥಿರವಾಗಿರುತ್ತದೆ ಎಂದರ್ಥ.

## 12.6 'ಬಲ'ವನ್ನು ನಿಷ್ಪನ್ನವಾಗಿ ನಿರೂಪಿಸುವುದು (ಬಲ ಮತ್ತು ವೇಗೋತ್ಕರ್ಷ)

ನ್ಯೂಟನ್ಸ್‌ನ 2 ನೆಯ ನಿಯಮದಂತೆ ಬಲವು (ಫೋರ್ಸ್) ಆ ದಿಕ್ಕಿನ ಸಂವೇಗದ (ಮೊಮೆಂಟಮ್) ಬದಲಾವಣೆಯ ದರಕ್ಕೆ ಅನುಪಾತೀಯವಾಗಿರುತ್ತದೆ. ಸರಿಯಾದ

ಮೂಲಮಾನಗಳನ್ನು ಆರಿಸುವುದರಿಂದ, ಬಲವು ಸಂವೇಗದ ಬದಲಾವಣೆಯ ದರಕ್ಕೆ ಸಮವಾಗುವುದು. ಅಂದರೆ

$$F = \frac{d(mv)}{dt} = m\frac{dv}{dt} = m\frac{d^2s}{dt^2}$$

= ದ್ರವ್ಯರಾಶಿ ಮತ್ತು ವೇಗೋತ್ಕರ್ಷದ ಗುಣಲಬ್ಧ

ಇಲ್ಲಿ, ಒಂದು ವಸ್ತುವಿನ ದ್ರವ್ಯರಾಶಿ ("ಮಾಸ್") ಸ್ಥಿರ ಎಂದು ತೆಗೆದುಕೊಂಡಿದೆ.

## ಉದಾಹರಣೆಗಳು

1. ಒಂದು ವಸ್ತುವು $t$ ಸೆಕೆಂಡುಗಳ ತರುವಾಯ $s$ ಮೀಟರ್‌ಗಳು ಚಲಿಸಿದೆ ಮತ್ತು

$$s = 4t^2 - \frac{1}{3}t^3$$

ವೇಗ ಮತ್ತು ವೇಗೋತ್ಕರ್ಷಗಳನ್ನು (i) $t = 2$ ಸೆಕೆಂಡ್ ಆದಾಗ (ii) $t = 8$ ಸೆಕೆಂಡ್ ಆದಾಗ ಕಂಡುಹಿಡಿಯಿರಿ.

$$s = 4t^2 - \frac{1}{3}t^3$$

$$\therefore \frac{ds}{dt} = 8t - \frac{1}{3}3t^2 \qquad \text{ಅಂದರೆ, } v = 8t - t^2$$

$$\therefore \frac{dv}{dt} = 8 - 2t \qquad \text{ಅಂದರೆ, } a = 8 - 2t$$

(i) $t = 2$ ಸೆಕೆಂಡ್ ಆದಾಗ $v = 8.2 - 2^2 = 12$ ಮೀ/ಸೆ

$a = 8–2.2 = 4$ ಮೀ/ಸೆ$^2$

(ii) $t = 8$ ಸೆ ಆದಾಗ $v = 8.8 - 8^2 = 0$

$a = 8 - 2.8 = -8$ಮೀ/ಸೆ$^2$

$v = 0$ ಎಂದರೆ ವಸ್ತುವು ಒಂದು ಕ್ಷಣ ಚಲಿಸದೇ ಇರುವುದು ಎಂದರ್ಥ. ವೇಗೋತ್ಕರ್ಷವು ಋಣ ಚಿಹ್ನೆ ಹೊಂದಿದೆ, ಆದುದರಿಂದ ವಸ್ತುವಿನ ವೇಗವು ಕ್ಷೀಣವಾಗುತ್ತಿದೆ ಎಂದೂ $OA$ಗೆ ವಿರುದ್ಧ ದಿಕ್ಕಿನಲ್ಲಿದೆ ಎಂದೂ ಸೂಚಿಸುತ್ತದೆ.

2. ಒಂದು ಕಲ್ಲನ್ನು ಕೆಳಗಿನಿಂದ ಮೇಲೆ ಎಸೆದಾಗ $t$ ಸೆಕೆಂಡ್‌ನಲ್ಲಿ $s$ ಮೀಟರ್‌ಗಳು ಚಲಿಸಿದೆ ಮತ್ತು $s = 28t - 4.9t^2$ ಆಗ, 2 ಸೆಕೆಂಡ್ ನಂತರ ಅದರ ವೇಗ ಮತ್ತು ವೇಗೋತ್ಕರ್ಷ ಎಷ್ಟು?

$$s = 28t - 4.9t^2$$

$$\therefore\ v = \frac{ds}{dt} = 28 - 4.9 \times 2t$$

$$= 28 - 9.8\,t$$

$$\frac{dv}{dt} = -9.8$$

2 ಸೆಕೆಂಡ್‌ನಂತರ, ಕಲ್ಲಿನ ವೇಗ $= 28 - (9.8)2 = 8.4$ ಮೀ/ಸೆ

ವೇಗೋತ್ಕರ್ಷ $a = \frac{dv}{dt} = -9.8$ ಮೀ/ಸೆ$^2$

3. ಒಂದು ಚಲಿಸುತ್ತಿರುವ ವಸ್ತುವಿನ ದೂರ ಮತ್ತು ಕಾಲವನ್ನು

$$s = a\cos 5t + b\sin 5t$$

ಸೂತ್ರದಿಂದ ತಿಳಿಯಬಹುದು. ಆ ವಸ್ತುವಿನ ವೇಗೋತ್ಕರ್ಷವು ದೂರದ ಅನುಪಾತೀಯವಾಗಿದೆ ಎಂದು ತೋರಿಸಿ.

$$s = a\cos 5t + b\sin 5t$$

$$\therefore\ v = \frac{ds}{dt} = -5a\sin 5t + 5b\cos 5t$$

ಮತ್ತು $a = \frac{dv}{dt} = -25\,a\cos 5t - 25b\sin 5t$

$$= -25\,(a\cos 5t + b\sin 5t)$$

$$= -25s$$

$\therefore\ a \propto s$

4. 2 ಮೂಲಮಾನ ದ್ರವ್ಯರಾಶಿಯುಳ್ಳ ವಸ್ತುವಿನ ಮೇಲೆ ಬಲವು ಪ್ರಯೋಗವಾದಾಗ ಅದರ ಚಲನೆ $s = 10\cos 2t$ ಯಿಂದ ತಿಳಿಯುವುದು. ಗರಿಷ್ಠ ಬಲ ಎಷ್ಟು?

$\frac{ds}{dt} = -20\sin 2t$ ಮತ್ತು $\frac{d^2s}{dt^2} = -40\cos 2t$

ವಸ್ತುವಿನ ಮೇಲೆ ಪ್ರಯೋಗಿಸಿದ ಬಲ $= m\frac{d^2s}{dt^2} = 2\,(-40\cos 2t)$

$= -80\cos 2t$ ಮೂಲಮಾನ

ಈಗ, $\cos 2t$ ಯ ಗರಿಷ್ಠ ಬೆಲೆ 1

$\therefore$ ಗರಿಷ್ಟ ಬಲ $= -80$ ಮೂಲಮಾನ

ಋಣಾತ್ಮಕ ಚಿಹ್ನೆಯು ವಸ್ತುವು ಮೂಲಸ್ಥಾನದ ದಿಕ್ಕಿನಲ್ಲಿ ಚಲಿಸುತ್ತಿದೆ ಎಂದು ತಿಳಿಸುತ್ತದೆ.

5. ಒಂದು ತಲೆಕೆಳಗಾದ ಶಂಕುವಿನ ಆಕಾರದ ನೀರಿನ ಪಾತ್ರೆಯಿಂದ ನಿಮಿಷಕ್ಕೆ 8 c.c. ದರದಲ್ಲಿ ನೀರು ಸೋರಿಹೋಗುತ್ತಿದೆ. ಈ ಪಾತ್ರೆಯ ತಳ ವರ್ತುಲಾಕಾರ ಹೊಂದಿದ್ದು ತ್ರಿಜ್ಯ 4 ಸೆಂ.ಮೀ.ಇದೆ. ಪಾತ್ರೆಯ ಆಳ 12 ಸೆ.ಮೀ. ಇದೆ. ನೀರಿನ ಮಟ್ಟ 6 ಸೆ.ಮೀ. ಇದ್ದಾಗ ನೀರು ಸೋರುತ್ತಿರುವ ದರ ಎಷ್ಟು?

ಒಂದು ಲಂಬ ವರ್ತುಲಾಕಾರ ಶಂಕುವಿನ ತಳದ ತ್ರಿಜ್ಯವು $r$ ಆಗಿದ್ದು, ಅದರ ಎತ್ತರವು $h$ ಆಗಿದ್ದರೆ, ಆ ಶಂಕುವಿನ ಗಾತ್ರವು

$$v = \frac{1}{3}\pi r^2 h$$

ಆಗಿರುತ್ತದೆ. ಚಿತ್ರ 12.8 ರಲ್ಲಿ

$AB = 4$ ಸೆ.ಮೀ., $OA = 12$ ಸೆ.ಮೀ., $OX = h$ ಮತ್ತು $XY = r$

$\Delta^{le} OXY$ III$^r$ $\Delta^{le} OAB$

$$\therefore \frac{r}{h} = \frac{4}{12} \text{ ಅಥವಾ } r = \frac{1}{3}h$$

$$\therefore v = \frac{1}{3}\pi \frac{h^2}{9} . h = \frac{\pi h^3}{27}$$




ಚಿತ್ರ 12.8

$$\therefore h^3 = \frac{27\,v}{\pi}$$

ಇದು $h$ ಮತ್ತು $v$ ಗಳಿಗಿರುವ ಸಂಬಂಧವನ್ನು ತಿಳಿಸುತ್ತದೆ. ನಿಷ್ಪನ್ನಿಸಿದಾಗ

$$3h^2 \frac{dh}{dt} = \frac{27}{\pi} \frac{dv}{dt}$$

ಅಥವಾ $\frac{dh}{dt} = \frac{9}{\pi h^2} \frac{dv}{dt}$

ನೀರಿನ ಮಟ್ಟದ ಮತ್ತು ವೇಗದ ದತ್ತ ಬೆಲೆಗಳು

$$\frac{dv}{dt} = 8,\ h = 6 \ \therefore \frac{dh}{dt} = \frac{9}{\pi .36} .8 = \frac{2}{\pi}$$ ಸೆ.ಮೀ/ನಿ

ಆದ್ದರಿಂದ, ನೀರಿನ ಮಟ್ಟ $\frac{2}{\pi}$ ಸೆಂ.ಮೀ./ನಿ. ದರದಲ್ಲಿ ಇಳಿಯುತ್ತಿದೆ.

6. 26 ಅಡಿ ಉದ್ದದ ಏಣಿಯು ಒಂದು ಗೋಡೆಗೆ ವಾಲಿಸಿ ನಿಂತಿದೆ. ಅದರ ಇನ್ನೊಂದು ತುದಿಯು ಕ್ಷಿತಿಜದ ಮಟ್ಟದಲ್ಲಿ ಸೆಕೆಂಡಿಗೆ 3 ಅಡಿಗಳಂತೆ ಜಾರುತ್ತಿದೆ. ಏಣಿಯ ಕೆಳತುದಿ ಗೋಡೆಯಿಂದ 10 ಅಡಿ ಇದ್ದಾಗ

(a) ವೇಗ, (b) ಏಣಿಯ ಮೇಲ್ತುದಿಯ ವೇಗೋತ್ಕರ್ಷ

ಇವುಗಳನ್ನು ಕಂಡುಹಿಡಿಯಿರಿ.

ಗೋಡೆಯ ತಳಭಾಗದಿಂದ ಏಣಿಯ ಎರಡು ತುದಿಗಳಿಗಿರುವ ದೂರವು $x$ ಮತ್ತು $y$ ಆಗಿರಲಿ (ಚಿತ್ರ 12.9).




ಚಿತ್ರ 12.9

$\therefore\ x^2 + y^2 = 26^2$ .... (1)

ಕಾಲಸೂಚಿತವಾದ $t$ ಗೆ ಸಂಬಂಧಿಸಿದಂತೆ (1) ನ್ನು ನಿಷ್ಪನ್ನಿಸಿದಾಗ

$$x\frac{dx}{dt} + y\frac{dy}{dt} = 0 \quad ....(2)$$

ಈಗ, $\frac{dx}{dt} = 3$ ಮತ್ತು $x = 10$ ಆದಾಗ, $y = 24$ ಆಗುವುದು.

ಈ ಬೆಲೆಗಳನ್ನು (2)ರಲ್ಲಿ ಆದೇಶಿಸಿದಾಗ

$$(10)3 + 24.\frac{dy}{dt} = 0$$

ಅಥವಾ $\frac{dy}{dt} = \frac{-10}{8} = \frac{-5}{4}$

ಆದ್ದರಿಂದ ಏಣಿಯ ಮೇಲ್ಭಾಗವು ಸೆಕೆಂಡಿಗೆ $\frac{5}{4}$ ಅಡಿಗಳ ದರದಲ್ಲಿ ಕೆಳಭಾಗದ ಕಡೆಗೆ ಚಲಿಸುತ್ತದೆ. ಇಲ್ಲಿ ಗಮನಿಸಬೇಕಾದ ಅಂಶವೆಂದರೆ $\frac{dy}{dt}$ ಯ ಬೆಲೆ ಋಣಾತ್ಮಕವಾಗಿ ಇರುವುದರಿಂದ, $t$ ಹೆಚ್ಚಾದಂತೆ $y$ ಬೆಲೆಯು ಕಡಿಮೆಯಾಗುತ್ತದೆ. ಅಂದರೆ, ಏಣಿಯ ಮೇಲ್ಭಾಗವು ಕೆಳಭಾಗದ ಕಡೆಗೆ ಜಾರುತ್ತದೆ.

## ಅಭ್ಯಾಸ – 12.3

1. ಒಂದು ವಸ್ತುವು ಸರಳರೇಖೆಯಲ್ಲಿ ಚಲಿಸುತ್ತಾ $t$ ಅವದಿಯಲ್ಲಿ $s$ ದೂರ ಚಲಿಸುವುದು ಮತ್ತು $s = t^3 - 6t^2 + 8t - 4$. ವೇಗೋತ್ಕರ್ಷವು 12ಮೀ/ಸೆ$^2$ ಆಗುವ ಕಾಲವನ್ನು ಕಂಡುಹಿಡಿಯಿರಿ. ಆಗ ವಸ್ತುವಿನ ವೇಗವೆಷ್ಟು?

2. 6 ಅಡಿ ಎತ್ತರ ಇರುವ ಮನುಷ್ಯನು 4ಮೈ/ಗಂ.ಯ ವೇಗದಲ್ಲಿ ಕ್ಷಿತಿಜಾಕ್ಷದಲ್ಲಿ ಒಂದು ದೀಪದ ಕಂಬದಿಂದ ದೂರ ನಡೆಯುವನು. 20 ಅಡಿ ಎತ್ತರದ ಕಂಬದ ದೀಪದಿಂದ ಕ್ಷಿತಿಜಾಕ್ಷದಲ್ಲಿ ಉಂಟಾಗುವ ಆತನ ನೆರಳಿನ ಉದ್ದದ ಬದಲಾವಣೆಯ ದರವನ್ನು ಕಂಡುಹಿಡಿಯಿರಿ.

3. ಒಂದು ಗೋಳದ ವ್ಯಾಸವು 10 ನಿಮಿಷಗಳಲ್ಲಿ 4 ಅಂಗುಲಗಳಿಂದ 12 ಅಂಗುಲಗಳಿಗೆ ಹೆಚ್ಚುತ್ತದೆ. ಅದಾದ 5 ನಿಮಿಷಗಳ ನಂತರ ಉಂಟಾಗುವ ಗೋಳದ ತ್ರಿಜ್ಯ ಕಂಡುಯಿಡಿಯಿರಿ. ತ್ರಿಜ್ಯವು ಯಾವ ದರದಲ್ಲಿ ಹೆಚ್ಚುತ್ತಾ ಇದೆ?

4. ಒಬ್ಬ ಮನುಷ್ಯನು 4 ಮೈ/ಗಂಟೆ ದರದಲ್ಲಿ 80 ಅಡಿ ಎತ್ತರದ ಒಂದು ಗೋಪುರದ ಪಾದದ ಕಡೆಗೆ ನಡೆಯುತ್ತಿದ್ದಾನೆ. ಪಾದದಿಂದ 60 ಅಡಿ ದೂರದಲ್ಲಿ ಯಾವ ದರದಿಂದ ತುದಿಯನ್ನು ಸಮೀಪಿಸುತ್ತಿದ್ದಾನೆ?

5. ಮೇಲ್ಮುಖ ಪಾದ 8 ಅಂಗುಲ ಮತ್ತು ಆಳ 12 ಅಂಗುಲ ಇರುವ ಶಂಕು-ಆಕೃತಿಯ (ಕಾನಿಕಲ್) ಪಾತ್ರೆಯೊಳಗೆ ಒಂದು ದ್ರವವನ್ನು 10ಅಂಗುಲ/ಸೆ. ನಂತೆ ಸುರಿಯುತ್ತಿದೆ. 9 ಅಂಗುಲದವರೆಗೆ ಪಾತ್ರೆ ತುಂಬಿದಾಗ ಎಷ್ಟು ವೇಗ ಮತ್ತು ವೇಗೋತ್ಕರ್ಷದಿಂದ ದ್ರವದ ಮಟ್ಟ ಪಾತ್ರೆಯಲ್ಲಿ ಹೆಚ್ಚುತ್ತಿದೆ?

6. ಒಂದು ಗೋಳದ ಮೇಲ್ಮೈ ವಿಸ್ತೀರ್ಣ 8 ಚ.ಸೆಂ. ಮೀ. / ಸೆ. ನಂತೆ ಹೆಚ್ಚುತ್ತಾ ಇದೆ. ಆ ಗೋಳದ ಗಾತ್ರವು 500 ಘ.ಸೆಂ.ಮೀ. ಇದ್ದಾಗ ಗೋಳದ ತ್ರಿಜ್ಯ ಮತ್ತು ಗಾತ್ರವು ಹೆಚ್ಚುತ್ತಿರುವ ದರವನ್ನು ಕಂಡುಹಿಡಿಯಿರಿ.

7. ಒಂದು ವೃತ್ತಾಕಾರದ ಮಸಿಯ ಗುರುತು ಬ್ಲಾಟಿಂಗ್ ಪೇಪರ್ ಮೇಲೆ ದೊಡ್ಡದಾಗುತ್ತಾ ಇದೆ ಮತ್ತು $t$ ಸೆಕೆಂಡ್‌ನಲ್ಲಿ $r = 2t^2 - \frac{t^3}{4}$ ಸೂತ್ರದಿಂದ ತ್ರಿಜ್ಯವು ತಿಳಿಯುವುದು. $t = 4$ ಸೆಕೆಂಡ್ ಆದಾಗ ವೃತ್ತದ ವಿಸ್ತೀರ್ಣದ ದರವನ್ನು ಕಂಡುಹಿಡಿಯಿರಿ.

8. ಒಂದು ಗೋಳಾಕಾರದ ಬೆಲೂನಿನ ಗಾತ್ರವು ಸೆಕೆಂಡಿಗೆ 10 ಘ. ಸೆಂ. ಮೀ. ಆದಾಗ, ಬೆಲೂನಿನಂತೆ ತ್ರಿಜ್ಯವು ಯಾವ ದರದಲ್ಲಿ ವೃದ್ಧಿಯಾಗುತ್ತದೆ ಕಂಡುಹಿಡಿಯಿರಿ.

9. ಒಂದು ಉರುಳೆಯ (ಸಿಲಿಂಡರಿನ) ತ್ರಿಜ್ಯವು ನಿಮಿಷಕ್ಕೆ 2 ಮೀಟರ್‌ನಂತೆ ಏಕಪ್ರಕಾರವಾಗಿ ವೃದ್ಧಿಯಾಗುವುದು. ಎತ್ತರವು 20 ಮೀಟರ್ ಮತ್ತು ತ್ರಿಜ್ಯವು 10 ಮೀಟರ್‌ಗಳಾಗಿದ್ದಾಗ ಸಿಲಿಂಡರಿನ ಗಾತ್ರವು ಯಾವ ದರದಲ್ಲಿ ವ್ಯತ್ಯಾಸವಾಗುವುದೆಂದು ಕಂಡುಹಿಡಿಯಿರಿ.

10. ಒಂದು ವಸ್ತುವು $t$ ಸೆಕೆಂಡುಗಳಲ್ಲಿ $s$ ಮೀಟರ್ ಚಲಿಸಿದರೆ, $s$ ಗೂ $t$ ಗೂ ಇರುವ ಸಂಬಂಧವನ್ನು ಕೆಳಗೆ ಕೊಟ್ಟಿದೆ. ಚಲಿಸಲು ಪ್ರಾರಂಭವಾದ 5ಸೆಕೆಂಡುಗಳ ಅಂತ್ಯದಲ್ಲಿ ವಸ್ತುವಿನ ವೇಗ ಮತ್ತು ವೇಗೋತ್ಕರ್ಷ ಕಂಡುಹಿಡಿಯಿರಿ. ವೇಗೋತ್ಕರ್ಷ ಸೊನ್ನೆಯಾದಾಗ ವೇಗ ಎಷ್ಟು? ವೇಗ ಸೊನ್ನೆಯಾದಾಗ ವೇಗೋತ್ಕರ್ಷ ಎಷ್ಟು?

(1) $s = 2t^3 - 36\, t^2 + 50\, t - 35$

(2) $s = t^3 - 3t^2$

(3) $s = 10 \cos \dfrac{t}{2}$

(4) $s = 20 - 5t + t^3$

## 12.7 ಉತ್ಪನ್ನದ ಗರಿಷ್ಠ ಮತ್ತು ಕನಿಷ್ಠ ಬೆಲೆಗಳು




ಚಿತ್ರ 12.10

ಒಂದು ಅವಿಚ್ಛಿನ್ನ ಉತ್ಪನ್ನವು ಒಂದು ನಿರ್ದಿಷ್ಟ ಬೆಲೆಯವರೆಗೂ ಹೆಚ್ಚುತ್ತಾ ಹೋಗಿ ನಂತರ ಕಡಿಮೆಯಾಗುತ್ತದೆ. ಉತ್ಪನ್ನದ ಈ ಬೆಲೆಗೆ *ಗರಿಷ್ಠ ಬೆಲೆ* ಎನ್ನುವರು.

ಇದೇ ರೀತಿ, ಒಂದು ಅವಿಚ್ಛಿನ್ನ ಉತ್ಪನ್ನವು ಒಂದು ನಿರ್ದಿಷ್ಟ ಬೆಲೆಯವರೆಗೂ ಕಡಿಮೆ ಆಗುತ್ತಾ ಹೋಗಿ ನಂತರ ಹೆಚ್ಚುತ್ತಾ ಹೋದರೆ, ಉತ್ಪನ್ನದ ಆ ಬೆಲೆಗೆ *ಕನಿಷ್ಠ ಬೆಲೆ*ಎನ್ನುವರು.

ಚಿತ್ರ 12.10 ರಲ್ಲಿ $A$ ಬಿಂದುವಿನಲ್ಲಿ $y = f(x)$ ಉತ್ಪನ್ನವು ಗರಿಷ್ಠ ಬೆಲೆ ಹೊಂದಿದೆ ಮತ್ತು $B$ ನಲ್ಲಿ ಕನಿಷ್ಠ ಬೆಲೆ ಹೊಂದಿದೆ. $A$ ನಲ್ಲಿ $x$ ನಿರ್ದೇಶಕ $a$ ಆಗಿದ್ದರೆ ಆಗ $y$ ನಿರ್ದೇಶಕ $f(a)$ ಆಗಿರುವುದು. $A$ ಯ ಸಮೀಪದ ಬಿಂದುಗಳಲ್ಲಿ ಇತರ $y$ ನಿರ್ದೇಶಕಗಳಿಗಿಂತ $f(a)$ ಹೆಚ್ಚಾಗಿರುತ್ತದೆ. ಅಂದರೆ, $f(a) > f(a+h)$ ಮತ್ತು $f(a) > f(a-h)$. (ಇಲ್ಲಿ h ಎನ್ನುವುದು ಸಣ್ಣ ಧನಾತ್ಮಕ ಚರಸಂಖ್ಯೆ).

ಆದ್ದರಿಂದ ಒಂದು ಉತ್ಪನ್ನ $f(x)$ ಅವಿಚ್ಛಿನ್ನವಾಗಿದ್ದು $x=a$ ನಲ್ಲಿ ಗರಿಷ್ಠ ಬೆಲೆ ಹೊಂದಬೇಕಾದರೆ, $f(a) > f(a + h)$ ಮತ್ತು $f(a) > f(a-h)$.

$x = a$ ನಲ್ಲಿ $f(a)$ ಎನ್ನುವುದು $f(x)$ ಉತ್ಪನ್ನದ ಗರಿಷ್ಠ ಬೆಲೆ.

## 12.8 ವೃದ್ಧಿಸುವ ಮತ್ತು ಕ್ಷೀಣಿಸುವ ಉತ್ಪನ್ನಗಳು

ಚಿತ್ರ 12.11ರಲ್ಲಿ $y = f(x)$ ಉತ್ಪನ್ನ ಇರಲಿ. $P(x, y)$ ಈ ವಕ್ರರೇಖೆಯ ಮೇಲೆ ಯಾವುದಾದರೂ ಒಂದು ಬಿಂದು. $P$ ನಲ್ಲಿ ಎಳೆದ ಸ್ಪರ್ಶರೇಖೆಯು $x$–ಅಕ್ಷದ ಧನ ದಿಕ್ಕಿನಲ್ಲಿ $\psi$ *ಲಘುಕೋನ*ವನ್ನು ಏರ್ಪಡಿಸುತ್ತದೆ.

$$\therefore \frac{dy}{dx} = \tan \psi, \text{ ಧನಸಂಖ್ಯೆ}$$




ಚಿತ್ರ 12.11

ಈ ರೀತಿ, $\frac{dy}{dx}$ ಧನಸಂಖ್ಯೆ ಆದರೆ, $x$ ಹೆಚ್ಚಿದಂತೆಲ್ಲಾ $y$ ಹೆಚ್ಚುತ್ತದೆ. ಮತ್ತು ವಿಲೋಮವಾಗಿ, ಹೆಚ್ಚಿದಂತೆಲ್ಲಾ $y$ ಹೆಚ್ಚಿದರೆ, $\frac{dy}{dx}$ ಒಂದು ಧನ ಬೆಲೆಯನ್ನು ಹೊಂದುತ್ತದೆ.




ಚಿತ್ರ 12.12

ಚಿತ್ರ 12.12 ರಲ್ಲಿ $x$ ಹೆಚ್ಚಿದಂತೆಲ್ಲಾ $y$ ಕಡಿಮೆ ಆಗುವುದು. $P$ ನಲ್ಲಿನ ಸ್ಪರ್ಶರೇಖೆಯು ***ಅಧಿಕ ಕೋನ*** $\psi$ ಯನ್ನು $x$–ಅಕ್ಷದೊಡನೆ ಮಾಡಿದೆ. ಅಂದರೆ $\frac{dy}{dx} = \tan\psi$, ಋಣಬೆಲೆ.

ಆದ್ದರಿಂದ, $\frac{dy}{dx}$ ಋಣಬೆಲೆಯಾದರೆ $x$ ಹೆಚ್ಚಿದಂತೆಲ್ಲಾ $y$ ಕಡಿಮೆ ಆಗುವುದು. ವಿಲೋಮವಾಗಿ, $x$ ಹೆಚ್ಚಿದಂತೆಲ್ಲಾ $y$ ಕಡಿಮೆ ಆದರೆ, $\frac{dy}{dx}$ ಋಣಬೆಲೆ ಆಗಿರುತ್ತದೆ. ಯಾವುದಾದರೂ ಬಿಂದುವಿನಲ್ಲಿ $y$ ಹೆಚ್ಚುವುದೂ ಇಲ್ಲ ಮತ್ತು ಕಡಿಮೆ ಆಗುವುದೂ ಇಲ್ಲ ವಾದರೆ ಆ ಬಿಂದುವಿನಲ್ಲಿ $y$ ಸ್ಥಾಯಿ ಆಗಿದೆ ಎನ್ನುವರು. ಇಂತಹ ಬಿಂದುನಿನಲ್ಲಿ ಸ್ಪರ್ಶರೇಖೆಯು $x$–ಅಕ್ಷಕ್ಕೆ ಸಮಾನಾಂತರವಾಗಿರುತ್ತದೆ ಮತ್ತು $\frac{dy}{dx} = 0$ ಆಗಿರುವುದು.

## 12.9 ಉತ್ಪನ್ನವು ಗರಿಷ್ಠ ಅಥವಾ ಕನಿಷ್ಠ ಆಗಿರಲು ಷರತ್ತುಗಳು




ಚಿತ್ರ 12.13

$y = f(x)$ ಎನ್ನುವ ಒಂದು ಅವಿಚ್ಛಿನ್ನ ವಕ್ರರೇಖೆಯನ್ನು ಗಮನಿಸಿ. $A$ ಎನ್ನುವ ಬಿಂದುವಿನಲ್ಲಿ $y$ ಗರಿಷ್ಠವಾಗಿರಲಿ ಮತ್ತು $A$ ಬಿಂದುವಿನ $x$–ನಿರ್ದೇಶಕ $a$ ಇರಲಿ. ಆಗ $f(a) > f(a+h)$ ಮತ್ತು $f(a) > f(a-h)$. $B$ ಮತ್ತು $C$ ಗಳು ರೇಖೆಯ ಮೇಲೆ $A$ ಯ ಎಡ ಮತ್ತು ಬಲಭಾಗದಲ್ಲಿ ಎರಡು ಬಿಂದುಗಳಾಗಿರಲಿ. $B$ ಯಲ್ಲಿ ಎಳೆದ ಸ್ಪರ್ಶರೇಖೆಯು $x$–ಅಕ್ಷದ ಧನ ದಿಕ್ಕಿನೊಂದಿಗೆ $\psi_1$ ಕೋನವನ್ನು ಮಾಡುತ್ತದೆ. $\psi_1$ ಲಘುಕೋನವಾದ್ದರಿಂದ

$$\frac{dy}{dx} = \tan \psi_1 = \text{ಧನ ಬೆಲೆ.}$$

$A$ ನಲ್ಲಿ ಸ್ಪರ್ಶರೇಖೆಯು $x$–ಅಕ್ಷಕ್ಕೆ ಸಮಾನಾಂತರವಾಗಿರುವುದರಿಂದ $\frac{dy}{dx} = 0$.

$C$ ನಲ್ಲಿ $x$–ಅಕ್ಷದ ಧನ ದಿಕ್ಕಿನೊಂದಿಗೆ ಸ್ಪರ್ಶರೇಖೆಯು $\psi_2$ ಕೋನವನ್ನು ಮಾಡುತ್ತದೆ. $\psi_2$ ಅಧಿಕಕೋನವಾದ್ದರಿಂದ $\tan \psi_2 =$ ಋಣ (ಚಿತ್ರ 12.13).

ಈಗ $x$ ಎಡದಿಂದ ಬಲಕ್ಕೆ ಸಾಗುತ್ತಾ $a$ ಬೆಲೆಯನ್ನು ತೆಗೆದುಕೊಂಡಾಗ $\frac{dy}{dx}$ ಬೆಲೆಯು ಧನದಿಂದ ಋಣಕ್ಕೆ ಬದಲಾಯಿಸುವುದು ಅಂದರೆ $\frac{dy}{dx}$ ಕಡಿಮೆ ಆಗುತ್ತಾ ಹೋಗುತ್ತದೆ. ಆದ್ದರಿಂದ ಅದರ ನಿಷ್ಪನ್ನ $\frac{d^2y}{dx^2}$ ಬೆಲೆಯು $A$ ನಲ್ಲಿ ಋಣವಾಗಿರುತ್ತದೆ.

$y = f(x)$ ಉತ್ಪನ್ನವು $A$ ನಲ್ಲಿ ($x=a$ ನಲ್ಲಿ) *ಗರಿಷ್ಠ*ವಾಗಲು ಬೇಕಾದ ಷರತ್ತುಗಳು ಹೀಗಿವೆ :

(i) $\frac{dy}{dx} = 0$

(ii) $A$ ನಲ್ಲಿ ($x=a$ ನಲ್ಲಿ) $\frac{d^2y}{dx^2}$ ಋಣಬೆಲೆಯಾಗಿರಬೇಕು.

ಆಗ ಉತ್ಪನ್ನದ ಗರಿಷ್ಠಬೆಲೆ $f(a)$ ಆಗಿರುತ್ತದೆ.

ಇದೇ ರೀತಿ $y = f(x)$ ಉತ್ಪನ್ನವು $x=a$ ನಲ್ಲಿ ಕನಿಷ್ಠವಾಗಲು ಷರತ್ತುಗಳು :

(i) $\frac{dy}{dx} = 0$

(ii) $\frac{d^2y}{dx^2}$ = ಧನಬೆಲೆ ($x = a$ ನಲ್ಲಿ)

**ಸೂಚನೆ:**

ಒಂದು ಉತ್ಪನ್ನದ ಗರಿಷ್ಠ ಬೆಲೆಯು ಉತ್ಪನ್ನದ ಅದೇ ದೊಡ್ಡಬೆಲೆ ಆಗಿರಬೇಕಾಗಿಲ್ಲ. ಕನಿಷ್ಠ ಬೆಲೆಯು ಅದೇ ಚಿಕ್ಕಬೆಲೆ ಆಗಬೇಕಾಗಿಲ್ಲ. ಒಂದು ಉತ್ಪನ್ನವು ಅನೇಕ ಗರಿಷ್ಠ ಮತ್ತು ಕನಿಷ್ಠ ಬೆಲೆಗಳನ್ನು ಹೊಂದಿರಬಹುದು. ಗರಿಷ್ಠ ಮತ್ತು ಕನಿಷ್ಠ ಬೆಲೆಗಳು ಪರ್ಯಾಯವಾಗಿರುತ್ತವೆ.

**ಉದಾಹರಣೆಗಳು**

1. $3-2x+x^2$ ಉತ್ಪನ್ನವು $x>1$ ಆದರೆ ವೃದ್ಧಿಸುತ್ತದೆ ಎಂದು ತೋರಿಸಿ.

$y = 3-2x+x^2$. ಇರಲಿ

$\therefore \frac{dy}{dx} = -2+2x$

$y$ ವೃದ್ಧಿಸಬೇಕಾದರೆ $\frac{dy}{dx} > 0$

ಅಂದರೆ, $-2(1-x)>0$

ಅಥವಾ $-(1-x)>0$

$\therefore x > 1$

ಆದ್ದರಿಂದ, $x > 1$ ಆದರೆ ಉತ್ಪನ್ನವು ವೃದ್ಧಿಸುವುದು.

2. $x$ ನ ಯಾವ ಬೆಲೆಗೆ $x^3 - 6x^2 - 36x + 7$ ಎಂಬ ಉತ್ಪನ್ನವು (i) ವೃದ್ಧಿಯಾಗುವುದು ಮತ್ತು (ii) ಕ್ಷೀಣಿಸುವುದು ಎಂದು ನಿರ್ಧರಿಸಿ.

$y = x^3 - 6x^2 - 36x + 7$ ಇರಲಿ.

$$\therefore \frac{dy}{dx} = 3x^2 - 12x - 36 = 3(x^2 - 4x - 12)$$

$$= 3(x-6)(x+2)$$

(i) $x < -2$ ಆದಾಗ ಅಂದರೆ, $x$ ನ ಬೆಲೆಯು $-\infty$ ಮತ್ತು $-2$ ಗಳ ನಡುವೆ ಇದ್ದಾಗ $x+2$ ಮತ್ತು $x-6$ ಎಂಬ ಎರಡು ಅಪವರ್ತನಗಳೂ ಋಣ ಸಂಖ್ಯೆಯಾಗುವುವು. ಆದ್ದರಿಂದ

$$\frac{dy}{dx} > 0$$

ಆಗುತ್ತದೆ. ಅಂದರೆ $y$ ಯು ವೃದ್ಧಿಸುವುದು.

(ii) $x$ ನ ಬೆಲೆ $-2$ ಕ್ಕಿಂತ ಜಾಸ್ತಿ ಇದ್ದು 6 ಕ್ಕಿಂತ ಕಡಿಮೆ ಇದ್ದರೆ, $x+2>0$ ಮತ್ತು $x-6<0$ ಆಗುವುದು. ಅಂದರೆ

$$\frac{dy}{dx} < 0$$

ಆಗುವುದು. ಆದ್ದರಿಂದ $y$ ಯು ಕ್ಷೀಣಿಸುವುದು.

(iii) $x > 6$ ಆದರೆ $x - 6$ ಮತ್ತು $x + 2$ ಎರಡೂ ಧನಸಂಖ್ಯೆ ಆಗುವುವು ಮತ್ತು

$$\frac{dy}{dx} > 0.$$

ಆದ್ದರಿಂದ $y$ ಯು ವೃದ್ಧಿಸುವುದು.

(iv) $x = 6$ ಮತ್ತು $x=-2$ ಆದಾಗ $\frac{dy}{dx} = 0$. ಅಂದರೆ, ಈ ಬಿಂದುಗಳಲ್ಲಿ $y$ ಸ್ಥಾಯಿಯಾಗಿರುತ್ತದೆ. ಇವು ***ತಿರುಗಣೆ ಬಿಂದುಗಳು*** (ಟರ್ನಿಂಗ್ ಪಾಯಿಂಟ್ಸ್).

ಒಟ್ಟಿನಲ್ಲಿ, $-2<x<6$ ಆದಾಗ ಉತ್ಪನ್ನವು ಕ್ಷೀಣಿಸುವುದು.

$x > 6$ ಅಥವಾ $x < -2$ ಆದರೆ ಉತ್ಪನ್ನವು ವೃದ್ಧಿಸುವುದು.

3. ಕೆಳಗಿನ ಉತ್ಪನ್ನಕ್ಕೆ ಗರಿಷ್ಠ ಮತ್ತು ಕನಿಷ್ಠ ಬೆಲೆಗಳನ್ನು ಕಂಡುಹಿಡಿಯಿರಿ:

$y = 8x^5 - 15x^4 + 10x^2$

$$\frac{dy}{dx} = 40x^4 - 60x^3 + 20x$$

$$= 20x(2x^3 - 3x^2 + 1)$$

$$= 20x(x-1)^2(2x+1)$$

ಈಗ, $x = 0, x = 1, x = \frac{-1}{2}$ ಆದರೆ $\frac{dy}{dx} = 0$ ಆಗುವುದು.

ಹಾಗೆಯೇ $\frac{d^2y}{dx^2} = 160\,x^3 - 180\,x^2 + 20$

$$= 20\,(8x^3 - 9x^2 + 1)$$

(i) $x = 0$ ಆದರೆ $\frac{dy}{dx} = 0$ ಮತ್ತು $\frac{d^2y}{dx^2} = 20 > 0$

ಆದ್ದರಿಂದ, $y$ ಕನಿಷ್ಠವಾಗುವುದು. ಉತ್ಪನ್ನದ ಕನಿಷ್ಠಬೆಲೆ = 0

(ii) $x=1$ ಆದರೆ $\frac{d^2y}{dx^2} = 0$ ಇದರಿಂದಲೇ $y$ ಗರಿಷ್ಠ ಅಥವಾ ಕನಿಷ್ಠ ಎಂದು ನಿರ್ಧರಿಸಲು ಸಾಧ್ಯವಿಲ್ಲ.

(iii) $x = \frac{-1}{2}$ ಆದರೆ, $\frac{d^2y}{dx^2} = 20\left[\frac{8}{-8} - \frac{9}{4} + 1\right]$

$$= -45 < 0$$

ಆದ್ದರಿಂದ, $y$ ಗರಿಷ್ಠವಾಗುವುದು.

$y$ ನ ಗರಿಷ್ಠ ಬೆಲೆ $= 8\,(-½)^5 - 15\,(-½)^4 + 10\,(-½)^2$

$$= \frac{-8}{32} - \frac{15}{16} + \frac{10}{4}$$

ಅಂದರೆ, ಗರಿಷ್ಠ ಬೆಲೆ $= \frac{21}{16}$

4. $y = \sin x + \cos 2x$ ಉತ್ಪನ್ನದ ಗರಿಷ್ಠ ಮತ್ತು ಕನಿಷ್ಠ ಬೆಲೆಗಳ ಬಗ್ಗೆ ಚರ್ಚಿಸಿ.

ಈಗ, $y = \sin x + dy \cos 2x$

$\therefore \frac{dy}{dx} = \cos x - 2 \sin 2x$

$$= \cos x - 2\,(2 \sin x \cos x)$$

$$= \cos x\,(1 - 4 \sin x)$$

$\frac{dy}{dx} = 0$ ಆಗಬೇಕಾದರೆ $\cos x = 0$ ಅಥವಾ $\sin x = \frac{1}{4}$.

ಈಗ, $x$ ನ ಬೆಲೆಯನ್ನು 0 ಮತ್ತು $2\pi$ ಅಂತರದ ಒಳಗೆ ಗಮನಿಸಿದರೆ

$\cos x = 0$ ಅಂದರೆ $x = \frac{\pi}{2}, \frac{3\pi}{2}$ ಆಗುತ್ತವೆ.

$\sin x = \frac{1}{4}$ i.e $x = \sin^{-1} \frac{1}{4}$ ಮತ್ತು $\pi - \sin^{-1} \frac{1}{4}$

ಈಗ, $\frac{d^2y}{dx^2} = -\sin x - 4\cos 2x$

(i) $x = \frac{\pi}{2}$ ಆದರೆ $\frac{d^2y}{dx^2} = -\sin\frac{\pi}{2} - 4\cos\pi$

$$= -1 + 4 = 3 > 0.$$

(ii) $x = \frac{3\pi}{2}$ ಆದರೆ $\frac{d^2y}{dx^2} = 5 > 0$

ಆದ್ದರಿಂದ, $x = \frac{\pi}{2}, \frac{3\pi}{2}$ ಆದರೆ $y$ ಕನಿಷ್ಠ ಆಗುವುದು.

(iii) $x = \sin^{-1} \frac{1}{4}$ ಆದರೆ

$$\frac{d^2y}{dx^2} = -\sin x - 4(1 - 2\sin^2 x)$$

$$= -\frac{1}{4} - 4\left(1 - 2.\frac{1}{16}\right)$$

$$= \frac{-15}{4} < 0$$

(iv) $x = \pi - \sin^{-1} \frac{1}{4}$ ಆದರೆ

$$\frac{d^2y}{dx^2} = \frac{-15}{4} < 0$$

$x = \sin^{-1}\left(\frac{1}{4}\right)$ ಅಥವಾ $\pi - \sin^{-1}\left(\frac{1}{4}\right)$ ಆದಾಗ

$y$ ಗರಿಷ್ಠ ಆಗುವುದು.

ಸಂಬಂಧಪಟ್ಟ $x$ ನ ಬೆಲೆಗಳನ್ನು $y$ ಉತ್ಪನ್ನದಲ್ಲಿ ಹಾಕಿದರೆ ಕ್ರಮವಾಗಿ 9/8, 9/8 ಉತ್ಪನ್ನದ ಗರಿಷ್ಠ ಬೆಲೆಗಳೂ ಮತ್ತು 0, –2 ಉತ್ಪನ್ನದ ಕನಿಷ್ಠ ಬೆಲೆಗಳೂ ಆಗುತ್ತವೆ.

5. $\dfrac{\log x}{x}$ ಉತ್ಪನ್ನದ ಗರಿಷ್ಠ ಬೆಲೆಯನ್ನು ಕಂಡುಹಿಡಿಯಿರಿ ($0<x<\infty$).

$$f(x) = \frac{\log x}{x} \text{ ಇರಲಿ.}$$

$$\therefore f'(x) = \frac{x\dfrac{1}{x} - \log x}{x^2} = \frac{1-\log x}{x^2}$$

ಈಗ, $f'(x) = 0$ ಆಗಬೇಕಾದರೆ $\log_e x = 1$ ಅಥವಾ $x = e$.

$$f''(x) = \frac{x^2 . \dfrac{-1}{x} - (1-\log x) . 2x}{x^4}$$

$$= \frac{-3x + 2x\log x}{x^4}$$

$$\therefore f''(e) = \frac{-3e+2e}{e^4} = \frac{-1}{e^3}, \text{ ಋಣಸಂಖ್ಯೆ}$$

ಆದ್ದರಿಂದ, $f(x)$ ಉತ್ಪನ್ನವು $x=e$ ಆದಾಗ ಗರಿಷ್ಠವಾಗಿರುವುದು ಮತ್ತು ಅದರ ಗರಿಷ್ಠ ಬೆಲೆ $\dfrac{\log e}{e}$ ಅಂದರೆ $\dfrac{1}{e}$ ಅಥವಾ $e^{-1}$ ಆಗುವುದು.

6. $a$ ತ್ರಿಜ್ಯವುಳ್ಳ ಒಂದು ವೃತ್ತದಲ್ಲಿ ಗರಿಷ್ಠ ಸುತ್ತಳತೆ ಉಳ್ಳ ಆಯವನ್ನು ಅಂತರ್ಲೇಖಿಸಬೇಕಾದರೆ ಆ ಆಯವನ್ನು ಕಂಡುಹಿಡಿಯಿರಿ.

$a$ ತ್ರಿಜ್ಯವುಳ್ಳ ವೃತ್ತದಲ್ಲಿ $ABCD$ ಆಯವನ್ನು ಅಂತರ್ಲೇಖಿಸಿದೆ ಎಂದು ಭಾವಿಸಿ. $AC$ ಯು ವೃತ್ತದ ವ್ಯಾಸವಾಗಿರಲೇಬೇಕು (ಚಿತ್ರ 12.14)



ಚಿತ್ರ 12.14

$\angle CAB = \theta$ ಇರಲಿ.

$$AB = AC\cos\theta$$

$$= 2a\cos\theta$$

$BC = AC \sin\theta$

$= 2a \sin\theta$

ಆಯದ ಸುತ್ತಳತೆ $s$ ಆದರೆ

$s = 4\ a \cos\theta + 4\ a \sin\theta$

$\therefore\ \frac{ds}{d\theta} = -4a \sin\theta + 4a \cos\theta$

ಮತ್ತು $\frac{d^2s}{d\theta^2} = -4a \cos\theta - 4a \sin\theta$

ಈಗ, $\frac{ds}{d\theta} = 0$ ಆಗಬೇಕಾದರೆ $\tan\theta = 1$

$\theta$ ಲಘುಕೋನವಾದ್ದರಿಂದ, $\theta = \frac{\pi}{4}\ \therefore AB = BC$

ಹಾಗೂ, $\theta = \frac{\pi}{4}$ ಆದಾಗ $\frac{d^2s}{d\theta^2}$ = ಋಣಸಂಖ್ಯೆ

ಆದ್ದರಿಂದ, ಗರಿಷ್ಠ ಸುತ್ತಳತೆ ಉಳ್ಳ ಆಯವೊಂದನ್ನು ವೃತ್ತದಲ್ಲಿ ಅಂತರ್ಲೇಖಿಸಬೇಕಾದರೆ ಅದು ಚಚ್ಚೌಕವಾಗಿರಬೇಕು.

7. $r$ ತ್ರಿಜ್ಯವುಳ್ಳ ವೃತ್ತವನ್ನು ಒಂದು ಸಮದ್ವಿಬಾಹು ತ್ರಿಭುಜದಲ್ಲಿ ಅಂತರ್ಲೇಖಿಸಿದರೆ ಅದರ ಕನಿಷ್ಠ ಸುತ್ತಳತೆಯು $6r\sqrt{3}$ ಎಂದು ತೋರಿಸಿ.




ಚಿತ್ರ 12.15

$OA = x$ ಇರಲಿ ($x > r$). $AO$ ರೇಖೆಯು $BC$ ಯನ್ನು $P$ ನಲ್ಲಿ ಸಂಧಿಸುತ್ತದೆ. $A$ ಯಿಂದ ಎರಡು ಸ್ಪರ್ಶಕಗಳು ಹಾಗೂ $P$ ನಲ್ಲಿಯ ಸ್ಪರ್ಶಕವೂ ಸೇರಿ $ABC$ ತ್ರಿಕೋನವನ್ನು ಉಂಟುಮಾಡುತ್ತವೆ. $OL = r$ (ಚಿತ್ರ 12.15)

$$AL = \sqrt{OA^2 - OL^2} = \sqrt{x^2 - r^2}$$

$$BP = AP \tan B\hat{A}P$$

$$= AP \tan L\hat{A}O$$

$$= AP \frac{OL}{AL} = (r + x) \frac{r}{\sqrt{x^2 - r^2}}$$

$\Delta^{le}$ $ABC$ ಯ ಸುತ್ತಳತೆಯನ್ನು $p$ ಎಂದು ಕರೆದರೆ, ಆಗ

$$p = AB + BC + CA$$

$$= AB + AC + BC$$

$$= 2AB + 2BP$$

$$= 2(AL + LB) + 2BP$$

$$= 2AL + 4\,BP$$

$$= 2(\sqrt{x^2 - r^2}) + \frac{4(r+x)\,r}{\sqrt{x^2 - r^2}} = \frac{2(x+r)^2}{\sqrt{x^2 - r^2}} \quad \text{.... (i)}$$

$$\therefore \frac{dp}{dx} = 2 \left[ \frac{2(x+r)\sqrt{x^2 - r^2} - x(x+r)^2 (x^2 - r^2)^{-1/2}}{(x^2 - r^2)} \right]$$

$$= \frac{2(x+r)\,(x^2 - xr - 2r^2)}{(x^2 - r^2)^{3/2}}$$

ಈಗ, $\frac{dp}{dx} = 0$ ಆಗಬೇಕಾದರೆ, $x = -r$ ಅಥವಾ $x = 2r$ ಆಗಬೇಕು.

ಆದರೆ, $x = -r$ ಸಾಧ್ಯವಿಲ್ಲ. ಆದ್ದರಿಂದ, $x = 2r$. ಇದನ್ನು (i) ರಲ್ಲಿ ಹಾಕಿದರೆ $p = 6\sqrt{3}\,r$ ಬರುವುದು.

## ಅಭ್ಯಾಸ – 12.4

1. ಕೆಳಗಿನ ಉತ್ಪನ್ನವು ಗರಿಷ್ಠ ಮತ್ತು ಕನಿಷ್ಠವಾಗುವಂತಹ $x$ ನ ಬೆಲೆ ಕಂಡುಹಿಡಿಯಿರಿ : $3x^3 - 9x^2 - 27x + 30$

2. $4x^3 - 9x^2 - 12x + 15$ ಉತ್ಪನ್ನದ ಗರಿಷ್ಠ ಮತ್ತು ಕನಿಷ್ಠ ಬೆಲೆಗಳನ್ನು ಕಂಡುಹಿಡಿಯಿರಿ.

3. $x^3 - 3x^2 + 3x + 7$ ಉತ್ಪನ್ನವು $x = 1$ ನಲ್ಲಿ ಗರಿಷ್ಠ, ಕನಿಷ್ಠ ಆಗಿಲ್ಲ ಎಂದು ತೋರಿಸಿ.

4. $\frac{x(x+3)}{x-1}$ ಎಂಬ ಉತ್ಪನ್ನದ ಗರಿಷ್ಠ ಮತ್ತು ಕನಿಷ್ಠ ಬೆಲೆಗಳನ್ನು ಕಂಡುಹಿಡಿಯಿರಿ.

5. $4x^5 - 25x^4 + 40x^3 - 8$ ಉತ್ಪನ್ನವು $x=0$ ನಲ್ಲಿ ಗರಿಷ್ಠವೂ ಆಗಿಲ್ಲ, ಕನಿಷ್ಠವೂ ಆಗಿಲ್ಲ ಎಂದು ತೋರಿಸಿ.

6. ಒಂದು ತ್ರಾಪಿಜ್ಯದ ಮೂರು ಬಾಹುಗಳು 6 ಮೀ. ಇವೆ. ಇದರ ಗರಿಷ್ಠ ವಿಸ್ತೀರ್ಣವನ್ನು ಕಂಡುಹಿಡಿಯಿರಿ.

7. $ABCD$ ಆಯದಲ್ಲಿ $AB = 12$ ಸೆಂ.ಮೀ. ಮತ್ತು $BC = 5$ ಸೆಂ. ಮೀ. $CD$ ಮೇಲೆ $P$ ಎಂಬ ಬಿಂದುವನ್ನು $PC = x$ ಸೆಂ.ಮೀ. ಆಗುವಂತೆ ತೆಗೆದುಕೊಂಡಿದೆ. $PA^2 + PB^2$ ನ್ನು $x$ ನಲ್ಲಿ ತಿಳಿಸಿ. ಇದು ಯಾವಾಗ ಕನಿಷ್ಠವಾಗುವುದೆಂದು ಕಂಡುಹಿಡಿಯಿರಿ.

8. $x+y = 2$ ಮತ್ತು $x^2y$ ಗರಿಷ್ಠವಾಗುವಂತೆ ಎರಡು ಧನಸಂಖ್ಯೆ $x$ ಮತ್ತು $y$ ಗಳನ್ನು ಕಂಡುಹಿಡಿಯಿರಿ.

9. $ABC$ ತ್ರಿಕೋನದಲ್ಲಿ ಅಂತರ್ಗತವಾಗುವಂತೆ $BC$ ಬಾಹುವಿನ ಮೇಲೆ ಒಂದು ಬಾಹುವಿರುವಂತೆ ಆಯವೊಂದನ್ನು ರಚಿಸಿದೆ. ಈ ಆಯದ ವಿಸ್ತೀರ್ಣವು ಗರಿಷ್ಠವಾದಾಗ ಅದು ತ್ರಿಕೋನದ ವಿಸ್ತೀರ್ಣದ ಅರ್ಧದಷ್ಟಿರುವುದೆಂದು ಸಾಧಿಸಿ.

10. ಒಂದು ಆಯಾಕಾರದ ಆವರಣದ ಒಂದು ಭಾಗದಲ್ಲಿ ಗೋಡೆ ಮತ್ತು ಉಳಿದ ಮೂರು ಭಾಗಗಳಲ್ಲಿ ಬೇಲಿಯೂ ಇರುವುದು. ಆವರಣದ ಸಲೆಯು 500 ಚ.ಮೀ. ಆಗಿರಬೇಕಾದರೆ ಬೇಲಿಗೆ ಉಪಯೋಗಿಸುವ ತಂತಿಯ ಕನಿಷ್ಠ ಉದ್ದವೆಷ್ಟು?

11. ಒಂದು ಸಮಕೋನ ತ್ರಿಭುಜದ ಕರ್ಣ ಮತ್ತು ಒಂದು ಬಾಹುವಿನ ಮೊತ್ತವು ಸ್ಥಿರ ಸಂಖ್ಯೆಯಾದರೆ ಇವೆರಡಕ್ಕೂ ಮಧ್ಯೆ ಏರ್ಪಟ್ಟ ಕೋನವು $60°$ ಆದಾಗ ತ್ರಿಭುಜದ ವಿಸ್ತೀರ್ಣವು ಗರಿಷ್ಠವಾಗಿರುತ್ತದೆಯೆಂದು ತೋರಿಸಿ.

